# ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ

ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧನಾರ್ಥಿ
**ಶಾಂತಕುಮಾರಿ ಓ**

ಮಾರ್ಗದರ್ಶಕರು
**ಡಾ ಕೆ ಎಂ ಮೇತ್ರಿ**
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೮

# ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ)
ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ



ಸಂಶೋಧನಾರ್ಥಿ
ಶಾಂತಕುಮಾರಿ ಓ

ಮಾರ್ಗದರ್ಶಕರು
ಡಾ ಕೆ ಎಂ ಮೇತ್ರಿ
ಪ್ರಾಧ್ಯಾಪಕರು




ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೮

## ಸಂಶೋಧಕರ ಪ್ರಮಾಣ ಪತ್ರ

**ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ** ಎಂಬ ವಿಷಯದಲ್ಲಿ ಮಹಾಪ್ರಬಂಧವನ್ನು ಪ್ರೊ ಕೆ ಎಂ ಮೇತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

Shantha

ದಿನಾಂಕ: 05. 11. 18.

ಸ್ಥಳ : ವಿದ್ಯಾರಣ್ಯ

**ಶಾಂತಕುಮಾರಿ ಓ**

ಪಿಎಚ್ ಡಿ ಸಂಶೋಧನಾರ್ಥಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ** ಎಂಬ ವಿಷಯದಲ್ಲಿ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ **ಶಾಂತಕುಮಾರಿ ಓ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ: ೦೫.೧೧.೧೮
ಸ್ಥಳ : ವಿದ್ಯಾರಣ್ಯ

**ಪ್ರೊ ಕೆ ಎಂ ಮೇತ್ರಿ**
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ

# ಅಧ್ಯಾಯ: ಒಂದು

## ಪ್ರವೇಶ

೧.೧. ಪೀಠಿಕೆ

೧.೨. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

೧.೩. ಅಧ್ಯಯನದ ಪ್ರಾಕಲ್ಪನೆಗಳು

೧.೪. ಅಧ್ಯಯನದ ಉದ್ದೇಶಗಳು

೧.೫. ಸಂಶೋಧನಾ ಅಧ್ಯಯನದ ವ್ಯಾಪ್ತಿ

೧.೬. ಸಂಶೋಧನಾ ಅಧ್ಯಯನದ ವಿನ್ಯಾಸ ಮತ್ತು ವಿಧಾನಗಳು

೧.೭. ಅಧ್ಯಯನದ ಮಹತ್ವ

೧.೮. ಅಧ್ಯಯನದ ಸ್ವರೂಪ

# ಅಧ್ಯಾಯ: ಒಂದು

## ಪ್ರವೇಶ

**ಪೀಠಿಕೆ**

ಮಾನವ ಸಮಾಜದ ಆರಂಭಿಕ ಹಂತದಲ್ಲಿ ಸಮಾಜವು ಸರಳವಾಗಿತ್ತು. ಅವನ ಜೀವನಾವಶ್ಯಕತೆಗೆ ತಕ್ಕಂತೆ ಎಲ್ಲಾ ಅನುಭೋಗಗಳನ್ನು ಅವನು ಅನುಭವಿಸಿ ಅಲೆಮಾರಿ ಜೀವನ ಸಾಗಿಸುತ್ತಿದ್ದನು. ನಂತರ ಅಲೆಮಾರಿ ಜೀವನದಿಂದ ಕೃಷಿಯನ್ನು ಮಾಡುತ್ತಾ ಒಂದೆಡೆ ನೆಲೆನಿಂತನು. ಆಗ ನಾನು ನನ್ನದು ಎಂಬ ಭಾವನೆಯಿಂದ ಸಮಾಜದಲ್ಲಿ ಸ್ತರವಿನ್ಯಾಸ ಆರಂಭವಾಯಿತು, ಬರಬರುತ್ತಾ ಈ ಸ್ತರವಿನ್ಯಾಸವು ಸಂಕೀರ್ಣಗೊಳ್ಳುತ್ತಾ ಹೋಯಿತು. ಉತ್ತಮ ಆರ್ಥಿಕ ವ್ಯವಸ್ಥೆ ಹೊಂದಿದ ವ್ಯಕ್ತಿಗೆ ಉತ್ತಮ ಸ್ಥಾನಮಾನ ಮತ್ತು ರಾಜಕೀಯ ಸ್ಥಾನಮಾನ ದೊರೆತವು. ಹೀಗೆ ಸಮಾಜದಲ್ಲಿ ಉಳ್ಳವರು ಮತ್ತು ಇಲ್ಲದವರು ಎಂಬ ಎರಡು ಗುಂಪುಗಳು ಬೆಳೆದವು. ಉಳ್ಳವರು ಮೇಲ್ದರ್ಜೆ ಮತ್ತು ಉಳ್ಳದವರು ಕೆಳದರ್ಜೆ ಹಾಗೂ ಉಳ್ಳವರು ಶ್ರೇಷ್ಠ ಮತ್ತು ಉಳ್ಳದವರು ಕನಿಷ್ಠ ಎಂಬ ಭಾವನೆಗಳು ಸಮಾಜದಲ್ಲಿ ಬೆಳೆದು ಅಸಮಾನತೆಯಿಂದಾಗಿ ಸ್ತರವಿನ್ಯಾಸ ಮೊಳಕೆಯೊಡೆಯಿತು.

ಸಾಮಾಜಿಕ ಏಣಿಶ್ರೇಣಿಯಿಂದಾಗಿ ಪಾತ್ರ ಮತ್ತು ಕರ್ತವ್ಯಗಳ ಅಂತರ ಅನಿವಾರ್ಯವಾಯಿತು. ಪಾತ್ರ ಹಾಗೂ ಕರ್ತವ್ಯಗಳಲ್ಲಿನ ಅಂತರ ಮಾನವ ಕುಲದ ಅಸ್ತಿತ್ವಕ್ಕೆ ಅವಶ್ಯಕವು ಮತ್ತು ಅನಿವಾರ್ಯವು ಆಯಿತು. ವ್ಯಕ್ತಿಗಳನ್ನು ಅವರವರ ಅಂತಸ್ತು ಮತ್ತು ಪಾತ್ರಗಳ ಆಧಾರದ ಮೇಲೆ ಗುರುತಿಸುವ ಕ್ರಮವು ಎಲ್ಲಾ ಸಮಾಜಗಳಲ್ಲಿಯೂ ಇದೆ. ಸಮಾಜವು ಗತಿಶೀಲವಾಗಿರುವಂತೆ ಅದರ ಸದಸ್ಯರೂ ಕೂಡ ಜಡ ವಸ್ತುಗಳಾಗಿರದೇ ಕ್ರಿಯಾ ಶೀಲರಾಗಿ ಮುಂದುವರೆಯುತ್ತಾರೆ. ಮಾನವನು ಒಂದು ಕಡೆಯಿಂದ ಇನ್ನೊಂದು ಕಡೆಗೆ, ಒಂದು ಅಂತಸ್ತಿನಿಂದ ಅಥವಾ ಸ್ಥಾನದಿಂದ ಇನ್ನೊಂದು ಅಂತಸ್ತು ಅಥವಾ ಸ್ಥಾನಕ್ಕೆ, ಒಂದು ಉದ್ಯೋಗದಿಂದ ಇನ್ನೊಂದು ಉದ್ಯೋಗಕ್ಕೆ ಚಲಿಸುವ ಪ್ರಯತ್ನವು ವ್ಯಕ್ತಿ ಮತ್ತು ಸಮೂಹದಲ್ಲಿ ಯಾವಾಗಲೂ ನಡೆಯುತ್ತಲೇ ಇರುತ್ತದೆ. ಈ ಬಗೆಯ ಚಲನೆಯನ್ನು ಸಾಮಾಜಿಕ ಚಲನೆಯೆಂದು ಹೇಳಲಾಗುತ್ತದೆ. ಈ ಅಂಶವನ್ನು ಆಧಾರವಾಗಿಟ್ಟುಕೊಂಡು ಇ ಬಿ ಟೇಲರ್, ಎಲ್ ಎಚ್ ಮಾರ್ಗನ್, ಹರ್ಬರ್ಟ್ ಸ್ಪೆನ್ಸರ್, ಸೈಂಟ್ ಸೈಮನ್, ಅಗಸ್ಟ್ ಕೋಮ್ಟ್, ಎಮಿಲಿ ಡರ್ಖಿಂ ಇವರುಗಳು ಸಮಾಜವು ಸರಳ ರೂಪದಿಂದ ಆರಂಭಗೊಂಡು ಮಂದಗತಿಯಿಂದ ಸಂಕೀರ್ಣ

ಸ್ವರೂಪದತ್ತ ಸಾಗುತ್ತಾ ಬಂದಿದೆ ಎಂದಿದ್ದಾರೆ. ಅಗಸ್ಟ್ ಕೋಮ್ಟ್‌ರವರನ್ನು ಸೇರಿದಂತೆ ಕೆಲವು ಪ್ರಾಚೀನ ಸಮಾಜಶಾಸ್ತ್ರಜ್ಞರು ಮಾನವ ಸಮಾಜವು ಒಂದೇ ದೆಸೆಯಲ್ಲಿ ವಿಕಾಸಾತ್ಮಕವಾಗಿ ಬೆಳವಣಿಗೆಯನ್ನು ಹೊಂದಿದೆ ಎಂದಿದ್ದಾರೆ. ಇವರ ದೃಷ್ಟಿಯಲ್ಲಿ ಬದಲಾವಣೆ ಮತ್ತು ಪ್ರಗತಿ ಸರಿಸಮಾನವಾದವುಗಳು ಎಂದು ಸಮಾಜವು ಸರಳತೆಯಿಂದ ಸಂಕೀರ್ಣತೆಗೆ ಸಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ. ಇವರು ಇಲ್ಲಿ ವಿಕಾಸಾತ್ಮಕ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಿದರು. ಸ್ಪೆಂಗ್ಲರ್, ಟಾಯಿನ್ ಬಿ, ಸೊರೋಕಿನ್‌ರವರು ಸಮಾಜದ ಬದಲಾವಣೆ ಚಕ್ರಗತಿಯನ್ನು ಅನುಸರಿಸುತ್ತದೆ. ಅಂದರೆ ನಾಗರಿಕತೆಯ ಏಳುಬೀಳು ಅವುಗಳ ಬೆಳವಣಿಗೆ ಹಾಗೂ ಅವನತಿ ಚಕ್ರಿಯವಾಗಿ ಸಾಗುತ್ತವೆ ಎಂದು ಗ್ರಹಿಸಿದ್ದಾರೆ.

ಗ್ರೀಸ್‌ದೇಶದಲ್ಲಿ ಪ್ರಾಚೀನ ಕಾಲದಲ್ಲಿ ಗುಲಾಮಗಿರಿ ಅಸ್ತಿತ್ವದಲ್ಲಿತ್ತು ಶ್ರೀಮಂತರು ಕೆಲವು ಜನರನ್ನು ಗುಲಾಮರನ್ನಾಗಿ ಇಟ್ಟುಕೊಳ್ಳುತ್ತಿದ್ದರು ಹಾಗೂ ಅಲ್ಲಿ ಶೋಷಣೆ ಮತ್ತು ಬಲಾತ್ಕಾರದ ದುಡಿಮೆ ಇತ್ತು. ಮಧ್ಯಕಾಲಿನ ಯುರೋಪಿನಲ್ಲಿ ಎಸ್ಟೇಟ್ ಪದ್ಧತಿ ಅಸ್ಥಿತ್ವದಲ್ಲಿತ್ತು. ಬಲಿಷ್ಠ ಭೂಮಾಲಿಕ ಮತ್ತು ದುರ್ಬಲನಾದ ಕೃಷಿಕರ ನಡುವಿನ ಒಂದು ಒಪ್ಪಂದವಾಗಿ ಉಳಿಗಮಾನ್ಯ ಪದ್ಧತಿ(ಎಸ್ಟೇಟ್) ರೂಢಿಯಲ್ಲಿತ್ತು. ಟಿ ಬಿ ಬೋಟ್‌ಮೋರ್ ಇವರು ಹೇಳುವಂತೆ ಉಳಿಗಮಾನ್ಯ ಪದ್ಧತಿ ಕಾನೂನು ಆಧಾರಿತ, ಶ್ರಮವಿಭಜನೆ ರಾಜಕೀಯ ಸಮೂಹಗಳ ಅಧಿಕಾರವಾಗಿತ್ತು. ಉಳಿಗಮಾನ್ಯ ಪದ್ಧತಿಯಲ್ಲಿ ಸಾಮಾಜಿಕ ಚಲನೆ ಸಾಮಾನ್ಯವಾಗಿತ್ತು. ಕಾರಣ ಶ್ರೀಮಂತ ಭೂಮಾಲಿಕ, ಪುರೋಹಿತ ವರ್ಗದವರಿಗೆ ಮಕ್ಕಳು ಇಲ್ಲದಿದ್ದರೆ ಸಾಮಾನ್ಯ ಜನವರ್ಗದವರಿಗೆ ಭೂಮಿಯನ್ನು ನೀಡುತ್ತಿದ್ದರು ಆಗ ಅವನ ಅಂತಸ್ತು ಮೇಲ್ಮುಖವಾಗಿ ಚಲಿಸಿ ಉತ್ತಮ ಸ್ಥಾನಮಾನ ಪಡೆಯುತ್ತಿದ್ದರು. ಇಲ್ಲಿ ಸಾಮಾಜಿಕ ಚಲನೆ ಎದ್ದು ಕಾಣುತ್ತಿತ್ತು.

ದಕ್ಷಿಣಆಫ್ರಿಕ ಮತ್ತು ಅಮೆರಿಕಗಳಲ್ಲಿ ಜನಾಂಗೀಯ ನೆಲೆಯಲ್ಲಿ ವರ್ಣಭೇದ ನೀತಿಯು ಶತಮಾನದವರೆಗೂ ಆಚರಣೆಯಲ್ಲಿತ್ತು. ಈಗಲೂ ಅದನ್ನು ಸಂಪೂರ್ಣವಾಗಿ ತೊಡೆದು ಹಾಕಿಲ್ಲ. ಪ್ರಾಚೀನ ಭಾರತದಲ್ಲಿ ಮುಖ್ಯವಾಗಿ ವೇದಗಳ ಮತ್ತು ಧರ್ಮಶಾಸ್ತ್ರಗಳ ಕಾಲದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ಅಸ್ಥಿತ್ವದಲ್ಲಿದ್ದವು ಎಂಬುದು ತಿಳಿದಿರುವ ಸಂಗತಿ. ಕಾಲ ಬದಲಾದಂತೆ ವರ್ಣ ವ್ಯವಸ್ಥೆಯಲ್ಲಿನ ಶ್ರಮ ವಿಭಜನೆಯ ತತ್ವವು ಬಿತ್ತನೆಗೊಂಡು ಮೊಳಕೆಯೊಡೆಯಿತು. ವರ್ಣವ್ಯವಸ್ಥೆಯಲ್ಲಿ ಕ್ಲಿಷ್ಟತೆ ಹೆಚ್ಚಾಗಿ ಉಚ್ಚ-ನೀಚ ಎಂಬ ಭಾವನೆ ಬಲಿಯತೊಡಗಿತು. ಹಾಗೆಯೇ ನೀಚ ಸಮುದಾಯಕ್ಕೆ ಹೆಚ್ಚು ನಿರ್ಬಂಧಗಳು ಹೊಂದಿದಂತೆ ವರ್ಣ ಸಂಕರಗೊಂಡು ವರ್ಣವ್ಯವಸ್ಥೆಯಿಂದ ಜಾತಿವ್ಯವಸ್ಥೆ ಉದ್ಭವಿಸಿತು. ಈ ಸಂದರ್ಭದಲ್ಲಿ ಸಮಾಜಶಾಸ್ತ್ರದ ಬೆಳವಣಿಗೆ ಮತ್ತು ಭಾರತದಲ್ಲಿ ಪಾಶ್ಚಿಮಾತ್ಯ ತಜ್ಞರ ಅಧ್ಯಯನಗಳು ಅತಿ ಹೆಚ್ಚಾಗಿ ಕಂಡುಬಂದವು. ಸಮಾಜವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಕ್ರಮ ಬೆಳೆದು ಬಂದಿತ್ತು ಜಾತಿ ವ್ಯವಸ್ಥೆಯ ಅಧ್ಯಯನಗಳು ವಿಫುಲವಾಗಿದ್ದವು. ಡಿ ಎನ್ ಮಜುಂದಾರ್ ಇವರು ಸಾಂಪ್ರದಾಯಿಕ ಸಿದ್ಧಾಂತವನ್ನು ಇಟ್ಟುಕೊಂಡು ಮನುಸ್ಮೃತಿ, ಭಗವದ್ಗೀತೆ ಆಧಾರದ ಮೇಲೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ

ಎಂಬ ನಾಲ್ಕು ವರ್ಣಗಳಿಂದ ಜಾತಿ ಹುಟ್ಟಿತೆಂದು ಸಾಂಪ್ರದಾಯಿಕ ಸಿದ್ಧಾಂತದಲ್ಲಿ ಗ್ರಹಿಸಿದ್ದಾರೆ. ಅಂದರೆ ಸೃಷ್ಟಿಕರ್ತ ಬ್ರಹ್ಮನ ಶಿರದಿಂದ ಬ್ರಾಹ್ಮಣರು, ಭುಜದಿಂದ ಕ್ಷತ್ರಿಯರು, ಉದರದಿಂದ ವೈಶ್ಯರು ಮತ್ತು ಪಾದದಿಂದ ಶೂದ್ರರು ಜನಿಸಿದರು ಎಂದು ಮನುಸ್ಮೃತಿಯಲ್ಲಿ ಹೇಳುವಂತೆ ಬ್ರಾಹ್ಮಣರು ವೇದಪಠಣ ಮಾಡುವುದರೊಂದಿಗೆ ಉನ್ನತಸ್ಥಾನವನ್ನು ಪಡೆದಿದ್ದರು, ಕ್ಷತ್ರಿಯರು ಶೂರರಾಗಿದ್ದು ಸಮಾಜದ ರಕ್ಷಣೆ ಅವರ ಕಾಯಕವಾಗಿತ್ತು, ವೈಶ್ಯರು ವ್ಯಾಪಾರ–ವಾಣಿಜ್ಯಗಳಲ್ಲಿ ತೊಡಗಿಸಿಕೊಂಡಿದ್ದು ಮತ್ತು ಶೂದ್ರರು ಈ ಎಲ್ಲಾ ಸಮುದಾಯಗಳ ಸೇವೆಮಾಡುವುದು ಅವರ ಹೊಣೆಯಾಗಿತ್ತು. ಈ ಆಧಾರದ ಮೇಲೆ ಭಾರತೀಯ ಸಾಮಾಜಿಕ ಸ್ತರವ್ಯವಸ್ಥೆ ರೂಪಗೊಂಡಿತ್ತು. ನೆಸ್‌ಫೀಲ್ಡ್‌ರವರು ವೃತ್ತಿಸಿದ್ಧಾಂತವನ್ನು ಇಟ್ಟುಕೊಂಡು ಅನುವಂಶಿಕವಾಗಿ ಕುಟುಂಬದ ಕುಲ–ಕಸುಬುಗಳಿಂದ, ಅವರ ವೃತ್ತಿಯಿಂದ ಕಾಲಾನುಕ್ರಮದಲ್ಲಿ ಜಾತಿಯಾಗಿ ಬೆಳೆದು ಬಂದಿದೆ ಎಂದು ಪ್ರತಿಪಾದಿಸಿದ್ದಾರೆ. ಸರ್ ಹರ್ಬರ್ಟ್ ರಿಸ್ಲೆ, ಡಿ ಎನ್ ಮಜುಂದಾರ್, ಜಿ ಎಸ್ ಘುರ್ಯೆ ಇವರು ಜನಾಂಗಗಳ ಆಧಾರದ ಮೇಲೆ ಜಾತಿ ಬೆಳೆದು ಬಂದಿದೆಯೆಂದು ಜನಾಂಗೀಯ ಸಿದ್ಧಾಂತದ ತತ್ವದಡಿಯಲ್ಲಿ ಪ್ರತಿಪಾದಿಸಿದ್ದಾರೆ. ಹೀಗೆ ಜಾತಿ ವ್ಯವಸ್ಥೆಯ ಕುರಿತು ಹಲವರು ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಆದರೆ ಎಂ ಎನ್ ಶ್ರೀನಿವಾಸ್ ಸೇರಿದಂತೆ ಕೆಲವರು ಜಾತಿ ವ್ಯವಸ್ಥೆಗೆ ಸ್ಪಷ್ಟತೆ ನೀಡುವ ಗೋಜಿಗೆ ಹೋಗಿರುವುದಿಲ್ಲ. ಆದರೆ ಇಂದು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ವ್ಯವಸ್ಥೆ ಹೆಮ್ಮರವಾಗಿ ಬೆಳೆದುನಿಂತಿದೆ.

ಹದಿನೈದು ಮತ್ತು ಹದಿನಾರನೆ ಶತಮಾನದ ಸಮಯದಲ್ಲಿ ಯುರೋಪಿಯನ್ನರು ತಮ್ಮ ವ್ಯಾಪಾರಕ್ಕೋಸ್ಕರ ಭಾರತೀಯ ಸಮಾಜವನ್ನು ಪ್ರವೇಶಿಸಿದರು ಹಲವು ಭಾಷೆ ಮತ್ತು ಜನಾಂಗವನ್ನು ಹೊಂದಿದ ಭಾರತೀಯ ಸಮಾಜವನ್ನು ಅರ್ಥೈಸಿಕೊಳ್ಳುವಲ್ಲಿ ಅವರು ವಿಫಲರಾದರು. ಹಾಗೆಯೇ ಭಾರತದಲ್ಲಿ ಹೆಚ್ಚು ಕೃಷಿ ಅವಲಂಬಿತ ರೈತರು ಹಾಗೂ ಗ್ರಾಮೀಣ ವಾಸಿಗಳಾಗಿದ್ದರಿಂದ ಅವರನ್ನು ಅಧ್ಯಯನ ಮಾಡುವುದು ಅನಿವಾರ್ಯವಾಗಿತ್ತು. ಭಾರತದ ಜನರ ಮೌಢ್ಯತೆ ಮತ್ತು ಅವರ ನಮ್ರತೆಯನ್ನು ದೌರ್ಬಲ್ಯವಾಗಿಸಿಕೊಂಡು ಮತಾಂತರ ಪ್ರಕ್ರಿಯೆಗೆ ಅನೇಕ ಕ್ರಿಶ್ಚಿಯನ್ ಮಿಷಿನರಿಗಳು ಮುಂದಾದವು. ಅದರ ಜೊತೆಜೊತೆಗೆ ಭಾರತೀಯ ಸಮಾಜದ ಅಧ್ಯಯನಗಳು ಆರಂಭವಾದವು. ವೇರಿಯರ್ ಎಲ್ವಿನ್, ಎಡ್ಗರ್ಡ ಥರ್ಸ್ಟನ್, ಫ್ರಾನ್ಸಿಸ್ ಬುಖನಾನ್, ಎಂಥೋವನ್‌ರವರು ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನಗಳನ್ನು ಕೈಗೊಂಡರು ಅದರ ಫಲವೇ ಈ ಮೇಲಿನ ಜಾತಿ ಉಗಮದ ಅಧ್ಯಯನಗಳು. ಪಾಶ್ಚಿಮಾತ್ಯರು ತಮ್ಮ ವರ್ಗವ್ಯವಸ್ಥೆಯನ್ನು ವರ್ಣವ್ಯವಸ್ಥೆಯಲ್ಲಿ ಗ್ರಹಿಸಿದ್ದಾರೆ. ಹೀಗೆ ಅಧ್ಯಯನಗಳು ಆರಂಭವಾದಾಗ ಸಮಾಜದಲ್ಲಿನ ಉನ್ನತ ವ್ಯಕ್ತಿಗಳು ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆಯುತ್ತಿದ್ದರು. ಹೀಗಾಗಿ ಜನರು ತಮ್ಮ ಸಾಮಾಜಿಕ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳಲು ಮತಾಂತರ ಎಂಬ ಪ್ರಕ್ರಿಯೆಗೆ ಒಳಗಾದರು. ಹೀಗೆ ನಡೆದ ಅಧ್ಯಯನಗಳು ಸಹ ಉನ್ನತ ಸ್ತರದ ವ್ಯಕ್ತಿಗಳಿಂದ ಎಂದು ಕಂಡುಬರುತ್ತದೆ. ಅದರಲ್ಲಿ ಜಿ ಎಸ್ ಘುರ್ಯೆ,. ಎಂ ಎನ್ ಶ್ರೀನಿವಾಸ್, ಅನಂತಕೃಷ್ಣ ಅಯ್ಯರ್, ಹೆಚ್ ವಿ ನಂಜುಂಡಯ್ಯ ಇತ್ಯಾದಿ ವ್ಯಕ್ತಿಗಳಿಂದ ಜಾತಿ ಅಧ್ಯಯನಗಳು ನಡೆದವು. ಇವರು ಪಾಶ್ಚಿಮಾತ್ಯರ ಚಿಂತನಾ ಕ್ರಮವನ್ನು ಅನುಸರಿಸಿ ಅಧ್ಯಯನಗಳನ್ನು ನಡೆಸಿದರು. ಅದರಲ್ಲೂ ಎಂ ಎನ್ ಶ್ರೀನಿವಾಸ್ ರವರು ಸಂಸ್ಕೃತೀಕರಣ ಅಥವಾ ಬ್ರಾಹ್ಮೀಣಿಕರಣ ಸಿದ್ಧಾಂತವು ಕೇವಲ

ಬ್ರಾಹ್ಮಣರ ಸಂಸ್ಕೃತಿಯನ್ನು ವಿವರಿಸುತ್ತದೆಯೇ ಹೊರತು ಬೇರೆ ಏನು ಇಲ್ಲ. ಕೆಳಸ್ತರದ ಜನರು ಬ್ರಾಹ್ಮಣರ ರೀತಿ–ರಿವಾಜು, ಆಹಾರ–ಪದ್ಧತಿಯನ್ನು ಅನುಸರಿಸುವುದೆ ಸಂಸ್ಕೃತಿಕರಣ ಎಂದಿರುವರು. ಡಿ ಎನ್ ಮಜುಂದಾರ್ ಇವರು ಎಂ ಎನ್ ಶ್ರೀನಿವಾಸ್‌ರವರ ಸಂಸ್ಕೃತಿಕರಣ ಪ್ರಕ್ರಿಯೆಯನ್ನು ವಿವರಿಸುವಾಗ ಜಾತಿ ವ್ಯವಸ್ಥೆಯಲ್ಲಿ ಊರ್ಧ್ವಮುಖ ಚಲನೆ (ಮೇಲ್ಮುಖ) ಕಾಣಬರುವುದಿಲ್ಲ ಎಂದು ಹೇಳಿದ್ದಾರೆ. ಆದರೆ ಲಾಳಗೊಂಡ ಲಿಂಗಾಯುತರಲ್ಲಿ ಈ ವಿಷಯಗಳನ್ನು ಪರಿಗಣಿಸಿದಾಗ ಅದು ಹುಸಿಯಾಗಿದೆ. ಲಾಳಗೊಂಡರು ತಮ್ಮದೇ ಆದ ಸಂಸ್ಕೃತಿಗಳನ್ನು ಉಳಿಸಿಕೊಂಡು ರಾಜರ ಆಳ್ವಿಕೆಯಲ್ಲಿ ಊರ ಯಜಮಾನಿಕೆ ಪಡೆದು ಗೌಡ, ನಾಡಗೌಡ, ಸರನಾಡ ಗೌಡರಾಗಿರುವರು.

ಲಾಳಗೊಂಡ ಸಮುದಾಯದವರು ಮೂಲತಃ ಮಧ್ಯಪ್ರದೇಶ ಮತ್ತು ಆಂಧ್ರಪ್ರದೇಶದ ಗಡಿ ಭಾಗದಿಂದ ವಲಸೆ ಬಂದಿದ್ದಾರೆ. ಇವರು ಮೂಲತಃ ದ್ರಾವಿಡ ಸಮುದಾಯದವರು ಲಾಳಗೊಂಡ ಎಂಬ ಹೆಸರು ಇವರು 'ಲಾಣ' ಪ್ರದೇಶದಿಂದ 'ಲಗಳಿ' ಹಾಕಿಕೊಂಡು ಒಂದು ಪ್ರದೇಶದಿಂದ ಕೃಷಿಗಾಗಿ ಬಂದವರಾದ್ದರಿಂದ ಇವರಿಗೆ ಈ ಹೆಸರು ಬಂದಿದೆ. ಲಾಣ ಪ್ರದೇಶವು ಗೊಂಡರ ಮೂಲ ನಿವಾಸವಾದ್ದರಿಂದ ಇವರಿಗೆ ಈ ನಾಮಾಂಕಿತ ಬಂದಿದೆ. ಇವರ ಮೂಲ ವೃತ್ತಿ ಪಶುಪಾಲನೆ ಮತ್ತು ಕೃಷಿ. ಇವರು ಆಂಧ್ರದ ಭಾಗವನ್ನು ಸುತ್ತುವರೆದು ತುಂಗಭದ್ರಾ, ಕೃಷ್ಣಾನದಿ ಪಾತ್ರವನ್ನು ಬಳಸಿ ಉತ್ತರ ಕರ್ನಾಟಕದ ಕಡೆ ಪ್ರಯಾಣ ಬೆಳೆಸಿರುವ ಸಾಧ್ಯತೆಗಳಿದ್ದು, ವಿಜಯನಗರ, ಕೆಳದಿ ಸಾಮ್ರಾಜ್ಯಗಳಲ್ಲಿ ತಮ್ಮ ಅಸ್ಥಿತ್ವ ಕಂಡುಕೊಂಡು ಅದರ ಪತನದ ನಂತರ ಬೆಂಗಳೂರು ಗ್ರಾಮಾಂತರ, ಶಿವಮೊಗ್ಗ, ಕೊಪ್ಪಳ, ಬಳ್ಳಾರಿ ಹೀಗೆ ಮುಂತಾದ ಕಡೆ ನೆಲೆಯೂರಿರುವರು. ಲಾಳಗೊಂಡ ಸಮುದಾಯವು ತನ್ನದೇ ಆದ ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವುದನ್ನು ನಾವು ಕಾಣಬಹುದು. ಯಾವುದೇ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ತನ್ನನ್ನು ಗುರುತಿಸಿಕೊಳ್ಳದೇ ಅತಂತ್ರ ಸ್ಥಿತಿಗೆ ಒಳಗಾಗಿದ್ದಾರೆ. ಇದಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿಯನ್ನು ನಂತರದ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ. ಸಂವಿಧಾನದ ಜಾತಿವಾರು ಪಟ್ಟಿಯಲ್ಲಿ ತಮ್ಮನ್ನು ಗುರುತಿಸಿಕೊಳ್ಳದೆ ತಮ್ಮ ನೆಲೆಗಾಗಿ ಹೋರಾಟದ ಹಾದಿಯತ್ತ ಅವರು ದಾಪುಗಾಲು ಇಡುತ್ತಿರುವುದು ಕಂಡುಬಂದಿದೆ. ಸಮುದಾಯದ ಅಧ್ಯಯನದ ಸ್ಥಿತಿ–ಗತಿಗಳ ದೃಷ್ಟಿಕೋನದಿಂದ ಈ ಅಧ್ಯಯನ ಮಹತ್ವದ್ದಾಗಿದೆ.

**ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ**

ಸಿಂಧೂ ನಾಗರಿಕತೆಯು ಕ್ರಿ ಪೂ ೩೦೦೦ ದಷ್ಟು ಪ್ರಾಚೀನವಾದುದೆಂದು ಹೇಳಬಹುದು. ಅಲ್ಲದೆ ಭಾರತೀಯ ನಾಗರಿಕತೆಯ ಮೂಲ ಉಗಮ ಇದು. ಇಲ್ಲಿನ ವ್ಯವಸ್ಥೆ ತುಂಬಾ ಅಚ್ಚುಕಟ್ಟಾಗಿತ್ತು. ರಸ್ತೆಗಳು, ನಗರ ನಿರ್ಮಾಣ, ಒಳಚರಂಡಿ, ಕಟ್ಟಡಗಳು, ಬೀದಿದೀಪ, ವಾಸದ ಮನೆ, ಉಡುಗೆ ತೊಡುಗೆ, ಆಯುಧಗಳು, ಮುದ್ರೆಗಳು ಎಲ್ಲವೂ ನಾಗರಿಕತೆಯ ಪ್ರತಿ ಬಿಂಬವಾಗಿವೆ. ವ್ಯಾಪಾರ, ವಾಣಿಜ್ಯ, ರಾಜಕೀಯ, ಧಾರ್ಮಿಕ, ಆರ್ಥಿಕ ವ್ಯವಸ್ಥೆಗಳನ್ನು ಪೂರೈಸುವಲ್ಲಿ ತುಂಬಾ ವ್ಯವಸ್ಥಿತವಾಗಿತ್ತು.

ಸಿಂಧೂ ಲಿಪಿಯ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳು ವಿಭಿನ್ನವಾಗಿವೆ. ಸಿಂಧೂ ನಾಗರಿಕತೆಯು ಆರ್ಯ ಪೂರ್ವ ನಾಗರಿಕತೆಯಾದುದರಿಂದ "ರೆ ಫಾಧರ್ ಹೆರಾಸ್ ಮತ್ತು ಸರ್ ಜಾನ್

ಮಾರ್ಷಲ್‌ರವರು ಇದು ದ್ರಾವಿಡ ಲಿಪಿಯೆಂದು ಅಭಿಪ್ರಾಯಪಟ್ಟಿದ್ದಾರೆ. ರೆ ವೆರೆಂಡ್ ಫಾದರ್ ಹೆರಾಸ್‌ರು ಈ ಚಿತ್ರ ಲಿಪಿಗಳಲ್ಲಿ ತಮಿಳು ಮತ್ತು ಕನ್ನಡ ಪದಗಳನ್ನು ಕಂಡು ಹಿಡಿದಿದ್ದಾರೆ. ವಡ್ಡಾಲ್ ಮತ್ತು ಪ್ರಾಣಾನಾಥರು ಸಿಂಧೂ ಲಿಪಿಗೆ ಸುಮೇರಿಯನ್ ಲಿಪಿ ಮೂಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ಜೆ ಹಂಟರ್‌ರವರು ಈ ಲಿಪಿ ಈಜಿಪ್ಟ್ ಮತ್ತು ಮೆಸಪೊಟೋಮಿಯ ಲಿಪಿಗಳ ಸಂಗಮದಿಂದ ಉದ್ಭವಿಸಿರಬಹುದೆಂದು ಊಹಿಸಿದ್ದಾರೆ. ವ್ಯಾಂಗ್ಡನ್ ಸಿಂಧೂ ಲಿಪಿ ಬ್ರಾಹ್ಮಿಲಿಪಿಯ ಮೂಲ ರೂಪವೆಂದು ಬಗೆದಿದ್ದಾರೆ. ಪಾರ್ಪೋಲ ಮತ್ತಿತರ ಸ್ಕಾಂಡಿನೇವಿಯನ್ ವಿದ್ವಾಂಸರು ಈ ಲಿಪಿಯನ್ನು ಕಂಪ್ಯೂಟರನ ಮುಖಾಂತರ ಓದಲು ಪ್ರಯತ್ನಿಸಿ ಇದು ದ್ರಾವಿಡ ಭಾಷೆಗಳ ಮೂಲ ರೂಪದ ಸಂಕೇತ ಲಿಪಿಯೆಂದು ತೀರ್ಮಾನಿಸಿದರು. ಮೋರಿಸ್ ಜೆ ಸ್ವಿ ವಾಕ್ ಎಂಬ ಅಮೇರಿಕದ ಪುರಾತತ್ವಜ್ಞರು ಇದು ಹಿಬ್ರೂ ಭಾಷೆಗೆ ಹತ್ತಿರವೆಂದು ಊಹಿಸಿದರೆ, ಎಸ್ ಕೆ ರೇ ಅವರು ಪುರಾತನ ಸಂಸ್ಕೃತ ಭಾಷೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸಿಂಧೂ ಲಿಪಿಯ ಕುರಿತು ಸುದೀರ್ಘ ಅಧ್ಯಯನ ನೆಡೆಸಿರುವ ಪ್ರೊ ಎಸ್ ಆರ್ ರಾವ್ ಅವರು ಇದು ಇಂಡೋ-ಯುರೋಪಿಯನ್ ಮೂಲದ ಇಂಡೋ-ಆರ್ಯರ ಪೂರ್ವ ಭಾಷೆಯಾಗಿದ್ದು, ಇದು ಭಾರತದ ಬ್ರಾಹ್ಮಿ-ಲಿಪಿ, ಸೆಮಿಟಿಕ್-ಲಿಪಿಗಳಿಗೆ ಮಾತೃಸ್ವರೂಪದ ಲಿಪಿಯಾಗಿತ್ತೆಂದು ಅಭಿಪ್ರಾಯಿಸಿದ್ದಾರೆ" (ಸೋಮಶೇಖರ್ ಹೆಚ್:೨೦೧೨: ೩೯-೪೦).

ಈ ಮೇಲಿನ ಎಲ್ಲಾ ಭಾಷಾ ತಜ್ಞರು ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ ಎಂಬುದು ಸಂದೇಹಾತೀತ. ಆದರೆ ಮೊ ಥ ಕಂಗಾಲಿ ಇವರ(ಗೊಂಡಿ ಭಾಷೆಯಿಂದ ಸಿಂಧೂ ರಹಸ್ಯ ಲಿಪಿಯ ಶೋಧ ಮತ್ತು ಓದು) ಎಂಬ ಪುಸ್ತಕವು ಹಿಂದಿ ಭಾಷೆಯಲ್ಲಿ ರಚಿತವಾಗಿದ್ದು ಅವರು ಗೊಂಡಿ ಭಾಷೆ ಮುಖಾಂತರ ಸಿಂಧೂನದಿ ತೀರದ ನಾಗರಿಕತೆಯನ್ನು ಅಧ್ಯಯನಿಸಲು ಪ್ರಯತ್ನಿಸಿದ್ದಾರೆ. ಅವರ ಈ ಬರಹವು ಸತ್ಯಕ್ಕೆ ಸಮೀಪವಿದ್ದರೂ ಸಹ ಅದು ಹಲವು ತಜ್ಞರ ಪ್ರಕಾರ ಸಿಂಧೂ ಸಂಸ್ಕೃತಿ ದ್ರಾವಿಡದ್ದಲ್ಲ ಎಂದು ವಾದಿಸುವವರಿಗೆ ಅಸತ್ಯವೆಂದು ತೋರಬಹುದು, ಇವರ ಪ್ರಯತ್ನ ಸತ್ಯಕ್ಕೆ ಹತ್ತಿರವಾಗಿದೆ. ಸಿಂಧೂ ನಾಗರಿಕತೆಯ ಜನರನ್ನು ಸೈಂಧವ ಜನರೆಂದು ಸಹ ಕರೆಯುತ್ತಾರೆ. ಈ ಹೇಳಿಕೆ ಸೈಂದವ ಲಿಪಿ ಸಂಶೋಧಿಸಿದ ಎಂ ಸಿ ಕಂಗಾಲಿಯವರ ಹೇಳಿಕೆಗೆ ಸಮರ್ಥನೀಯವಾಗಿದೆ.

ಕಂಗಾಲಿ ಇವರು ಸಮಾಜಶಾಸ್ತ್ರ, ಭಾಷಾಶಾಸ್ತ್ರ, ಅರ್ಥಶಾಸ್ತ್ರಗಳಲ್ಲಿ ಸ್ನಾತಕೋತ್ತರ ಪದವಿಗಳನ್ನು ಪಡೆದು ಪರಿಣಿತಿ ಎನಿಸಿಕೊಂಡ ಉನ್ನತ ವಿದ್ವಾಂಸರು ಇವರು ೧೨೫ ಪುಟಗಳಲ್ಲಿ ಸಿಂಧೂ ಲಿಪಿಗಳಲ್ಲಿ ಸಂಕೇತಗಳಿರುವ ಅರ್ಥ ಮತ್ತು ಅವು ಗೊಂಡಿಯಲ್ಲಿ ಅರ್ಥ ಪಡೆದಿರುವ ಬಗೆಯನ್ನು ಅವರು ವಿವರಿಸಿದ್ದಾರೆ. ಇವರು ಗೊಂಡಿ ಭಾಷೆಯು ದ್ರಾವಿಡ ಭಾಷಾ ಬಳಗದಲ್ಲಿ ಒಂದು ಭಾಷೆ ಎಂದು ತಿಳಿಸಿದ್ದಾರೆ. ಭಾರತಕ್ಕೆ ಬಂದ ಆರ್ಯರು ಆಗ ಅಸ್ತಿತ್ವದಲ್ಲಿದ್ದ ಗೊಂಡಿ ಭಾಷೆಯ ಶಬ್ದಗಳನ್ನು ತಮ್ಮ ಸಂಸ್ಕೃತ ಭಾಷೆಗೆ ತೆಗೆದು ಕೊಂಡರು ಎಂದು ಅಭಿಪ್ರಾಯಿಸಿದ್ದಾರೆ.

ಇದರಿಂದ ನಮಗೆ ದ್ರಾವಿಡ ಭಾಷೆಗಳ ಮೂಲ ಮತ್ತು ಸಿಂಧೂ ಹಾಗೂ ಹರಪ್ಪ ಜನರ ಸಂಸ್ಕೃತಿ ಮತ್ತು ಭಾಷೆ, ಅಲ್ಲದೆ ಸೈಂದವ ಜನರ ಮೂಲವನ್ನು ತಿಳಿಯಲು ಅನುಕೂಲವಾಗಿದೆ.

ಅಲ್ಲದೆ ಗೊಂಡ ಜನರ ಸಂಸ್ಕೃತಿ ಗೊಂಡ್ವಾನದ ಸ್ಥೂಲ ಮಾಹಿತಿಯನ್ನು ಕಂಗಾಲಿಯವರ ಮುಖಾಂತರ ಅರಿತು ನಮ್ಮ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಗಿದೆ ಎಂದು ಹೇಳಬಹುದು. ಈ ಎಲ್ಲಾ ಅಂಶಗಳನ್ನು ನಾವು ಅರಿಯಲು ನಾವು ಗೊಂಡ್ವಾನ ಭೂ ಪ್ರದೇಶದ ಅಧ್ಯಯನ ತಿಳಿಯುವುದು ಅತೀ ಅವಶ್ಯ.

ಪಾಲಿಯೋ(ಭೌಗೋಳಿಕ ಯುಗ) ಭೂಗೋಳಶಾಸ್ತ್ರದ ಪ್ರಕಾರ ಈಗಿನ ಗೊಂಡ್ವಾನ್ ಭೂ ಪ್ರದೇಶ ಸಹ ಗೊಂಡ್ವಾನ್ ಲ್ಯಾಂಡ್ ಆಗಿತ್ತು. ಈ ಪ್ರಕಾರ ಪೂರ್ವ ಗೊಂಡ್ವಾನ್ ಮತ್ತು ಪಶ್ಚಿಮ ಗೊಂಡ್ವಾನ್ ಭೂ ಪ್ರದೇಶಗಳು ೫೭೦ ಮತ್ತು ೫೧೦ ಮಿಲಿಯನ್ ವರ್ಷಗಳ ಹಿಂದೆ ಒಂದಕ್ಕೊಂದು ಹೊಂದಿಕೊಂಡಿದ್ದವು ಎನ್ನಲಾಗಿದೆ.

ಸಮಾರು ೩೦೦ ಮಿಲಿಯನ್ ವರ್ಷಗಳ ನಂತರ ಒಂದಕ್ಕೊಂದು ಧೃವೀಕರಣ ಹೊಂದಿ ಗೊಂಡ್ವಾನಲ್ಯಾಂಡ್ ಮತ್ತು ಲೂರೇಷಿಯಾ ಎಂಬ ಎರಡು ಭಾಗವಾಗಿ ಧೃವೀಕರಣವಾಗತೊಡಗಿದವು. ಇದು ಸುಮಾರು ೨೦೦ ರಿಂದ ೧೮೦ ಮಿಲಿಯನ್ ವರ್ಷಗಳವರೆಗೆ ಇತ್ತು. ಆ ನಂತರ ಗೊಂಡ್ವಾನ್ ಭೂ ಪ್ರದೇಶವು ಲೂರೇಷಿಯಾದಿಂದ ಪ್ರತ್ಯೇಕವಾಯಿತು.

ಗೊಂಡ್ವಾನ್ ಭೂ ಪ್ರದೇಶವು ದಕ್ಷಿಣಗೋಳಾರ್ಧದ ಭಾಗವಾಗಿದ್ದು ಇದರಲ್ಲಿ ಆಫ್ರಿಕಾ, ದಕ್ಷಿಣಅಮೇರಿಕಾ, ಅಂಟಾರ್ಟಿಕ, ಮತ್ತು ಆಸ್ಟ್ರೇಲಿಯನ್ ಖಂಡವು ಅದೇ ರೀತಿ ಅರೇಬಿಯನ್ ಮತ್ತು ಭಾರತ ಉಪಖಂಡವು ಈಗ ಸಂಪೂರ್ಣವಾಗಿ ಉತ್ತರಗೋಳಾರ್ದಕ್ಕೆ ಚಲನೆ ಹೊಂದಿವೆ.

ಆಸ್ಟ್ರೇಲಿಯಾದ ವಿಜ್ಞಾನಿ ಎಡ್ವರ್ಡಸ್ಯೂಸ್ ಇವರು ಈ ಭಾಗವನ್ನು ಗೊಂಡ್ವಾನ್ ಖಂಡವೆಂದು ಹೆಸರಿಸಿದರು. ಭಾರತದ ಮಧ್ಯಭಾಗದ ಉತ್ತರ ಕೇಂದ್ರವು ಮೂಲತ ಗೊಂಡ್ವಾನದ ಭಾಗವಾಗಿದೆ. ಈ ಗೊಂಡ್ವಾನ್ ಎಂಬ ಶಬ್ದವು ಸಂಸ್ಕೃತದಿಂದ ಬಂದ ಪದವಾಗಿದ್ದು ಅದನ್ನು ಗೊಂಡ್ವಾನ್ ಭಾಗವೆಂದು ಕರೆದರು, ಆಗಾಗಿ ಅಲ್ಲಿ ವಾಸಿಸುವ ಜನರನ್ನು ಗೊಂಡರೆಂದು ಕರೆಯಲಾಯಿತು. ಈ ಪದವನ್ನು ಪ್ರಥಮ ಬಾರಿಗೆ "೧೮೭೨ ರಲ್ಲಿ ಹೆಚ್ ಬಿ ಮಿಡ್ಲಕಾಟ್ ಇವರು ಭೌಗೋಳಿಕಶಾಸ್ತ್ರದ ಹಿನ್ನೆಲೆಯಲ್ಲಿ ಉಪಯೋಗಿಸಿದರು" (ಎಡ್ವರ್ಡಸ್ಯೂಸ್:೧೮೮೫:೭೬೮). ಈ ಹಿಂದೆ ಗೊಂಡ್ವಾನ್ ಖಂಡಕ್ಕೆ ಕೋಯಿಮೂರ ಮಹಾದ್ವೀಪದ ಹೆಸರಿನಿಂದ ಕರೆಯಲಾಗುತ್ತಿತ್ತು.

೨೦೦೮ ರ ಲಂಡನ್ ವಿಶ್ವವಿದ್ಯಾಲಯದ ಸಮೀಕ್ಷೆಯ ಪ್ರಕಾರ ಗೊಂಡ್ವಾನ್ ಭೂ ಪ್ರದೇಶದ ಭೂಗರ್ಭದ ತಳಭಾಗದಲ್ಲಿ ಜ್ವಾಲಾಮುಖಿ ಕೇಂದ್ರಗಳಿದ್ದು, ಅವು ಜ್ವಾಲಾಮುಖಿಯನ್ನು ಹೊರಸೂಸುತ್ತಿರುತ್ತವೆ. ಇದರ ಪರಿಣಾಮವಾಗಿ ಗೊಂಡ್ವಾನ್ ಭೂ ಭಾಗವು ಪ್ರತಿವರ್ಷ ೧.೨ ಇಂಚುಗಳಷ್ಟು ಭೂ ಧೃವೀಕರಣ(ಚದುರುವಿಕೆ) ಹೊಂದುತ್ತಿರುತ್ತದೆ.

ದಕ್ಷಿಣಅಮೆರಿಕ, ಆಫ್ರಿಕ, ಇಂಡಿಯಾ, ಆಸ್ಟ್ರೇಲಿಯಾ, ಅಂಟಾರ್ಟಿಕ ಮೊದಲಾದ ಖಂಡಗಳೆಲ್ಲವು ದಕ್ಷಿಣಾರ್ದಗೋಳದಲ್ಲಿ ಒಂದೇ ಭೂಭಾಗವಾಗಿ ಒಗ್ಗೂಡಿದ್ದವೆಂದು ಭಾವಿಸಿಕೊಂಡು ಆ ಭೂಭಾಗಕ್ಕೆ ಕೊಟ್ಟ ಹೆಸರು ಪಾಲಿಯೋಜ್ಯೂಯಿಕ್ ಯುಗದ ಕೊನೆಯಲ್ಲಿ (೨೨೫ ದಶಲಕ್ಷ ವರ್ಷ ಪ್ರಾಚೀನ)

ಗೊಂಡ್ವಾನ್ ಖಂಡ ಒಡೆಯಲು ತೊಡಗಿ ಭಿನ್ನ ಖಂಡಗಳು ರೂಪಗೊಂಡು ಕ್ರಮೇಣ ಅವು ದೂರದೂರ ಸರಿದು ಈಗಿರುವ ಸ್ಥಳದಲ್ಲಿ ನಿಂತಿವೆ ಎಂದು ಭೂವಿಜ್ಞಾನ ತತ್ವವೊಂದು ಪ್ರತಿಪಾದಿಸುತ್ತದೆ. ಈ ಖಂಡಗಳೆಲ್ಲವು ಹಿಂದೊಮ್ಮೆ ಒಟ್ಟುಗೂಡಿದ್ದವು ಎನ್ನುವುದಕ್ಕೆ ಹಲವಾರು ಸಾಕ್ಷಿಗಳಿವೆ. ಗೊಂಡ್ವಾನ್ ಖಂಡದ ಭಾಗಗಳಾದ ದಕ್ಷಿಣಇಂಡಿಯಾ, ದಕ್ಷಿಣಆಫ್ರಿಕಾ, ದಕ್ಷಿಣಅಮೇರಿಕ ಮತ್ತು ಆಸ್ಟ್ರೇಲಿಯಾ ಖಂಡಗಳ ಬಹುಭಾಗ ಹಿಮಗಡ್ಡೆಗಳಿಂದ ಮುಚ್ಚಿ ಹೋಗಿದ್ದ ಸೂಚನೆಗಳು ಕಂಡು ಬಂದಿವೆ. ಈಗಿರುವ ಸಾಪೇಕ್ಷ ವಿನ್ಯಾಸದಲ್ಲಿಯೇ ಹಿಂದೆಯೂ ಈ ಖಂಡಗಳು ಇದ್ದಿದ್ದರೆ ಈ ವಲಯದಲ್ಲಿ ಹಿಮ ದಟ್ಟವಾಗಿ ಕವಿಯುವುದಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಏಕೆಂದರೆ ಈ ಪ್ರದೇಶಗಳಲ್ಲಿನ ಬಹುಭಾಗ ಇಂದು ಉಷ್ಣವಲಯಕ್ಕೆ ಸೇರಿವೆ. ಇವೆಲ್ಲಾ ಖಂಡಗಳಲ್ಲಿಯೂ ಒಂದು ಕಾಲದಲ್ಲಿ ಅತೀ ಶೀತದ ವಾತಾವರಣ ಇದ್ದುದಕ್ಕೆ ಕುರುಹುಗಳು ಕಾಣಸಿಗುವುದರಿಂದ ಇವು ಹಿಂದೆ ಸಮಭಾಜಕ ವೃತ್ತದ ದಕ್ಷಿಣಕ್ಕಿದ್ದುದೆಂದು ದಕ್ಷಿಣ ಮೇರುವಿನ ಬಳಿ ಒಂದುಗೂಡಿದ್ದವೆಂದು ಊಹಿಸಲಾಗಿದೆ. ಜರ್ಮನ್ ಭೂವಿಜ್ಞಾನಿ ವೆಗ್ನರ್ ಎಂಬಾತ ಖಂಡಗಳ ಅಲೆತದ ಪರಿಕಲ್ಪನೆಯನ್ನು ಮಂಡಿಸಿದ. ಇದರ ಪ್ರಕಾರ ಭೂ ಖಂಡಗಳು ದಕ್ಷಿಣ ಮೇರುವಿನ ಬಳಿ ಒಂದುಗೂಡಿದ್ದವೆಂದು ಕ್ರಮೇಣ ಈ ಕೂಟ ಒಡೆದು ಖಂಡಗಳು ದೂರದೂರ ಸರಿದವೆಂದು ಇದೆ. ದಕ್ಷಿಣದಲ್ಲಿನ ಖಂಡಗಳೆಲ್ಲವು ಒಟ್ಟುಗೂಡಿ ಯಾವ ರೀತಿ ಗೊಂಡ್ವಾನ್ ಖಂಡವೆಂದು ಪರಿಗಣಿಸಲ್ಪಟ್ಟವೊ ಅದೇ ರೀತಿ ಉತ್ತರದ ಖಂಡಗಳನ್ನು ಲುರೇಷಿಯ ಎಂಬ ಕೂಟದಲ್ಲಿ ಗುರುತಿಸಲಾಗಿದೆ. ಈ ಬೃಹತ್ ಖಂಡಗಳೆರಡರ ನಡುವೆ ಇದ್ದ ಸಾಗರಕ್ಕೆ ತೆಥೀಸ್ ಮಹಾಸಾಗರ ಎಂದು ಹೆಸರು, ದಕ್ಷಿಣಇಂಡಿಯಾ ಉತ್ತರದ ಕಡೆ ಜರುಗುತ್ತಾ ಹೋದಂತೆ ತೆಥೀಸ್ ಸಾಗರದಲ್ಲಿ ನಿಕ್ಷೇಪಗೊಂಡ ಶಿಲಾಸ್ಥರಗಳು ಮಡಿಕೆ ಬಿದ್ದು ನೀರಿನಿಂದ ಮೇಲೆದ್ದು ಉನ್ನತವಾದ ಹಿಮಾಲಯ ಶ್ರೇಣಿಯಾಗಿ ನಿಂತವು. ದಕ್ಷಿಣಖಂಡಗಳು (ಗೊಂಡ್ವಾನ್ ಖಂಡದ ಭಾಗಗಳು) ಉತ್ತರದಕಡೆ ದಾವಿಸಿದಾಗ ಶಿಲೆಗಳು ಮಡಿಕೆ ಬಿದ್ದು ಆಲ್ಪ್ಸ್ ಹಿಮಾಲಯ ಪರ್ವತ ಪಂಕ್ತಿಯಾಗಿ ನಿಂತವು.

ಬಹು ಪ್ರಾಚೀನವಾದ ಈ ಗೊಂಡ್ವಾನ ಖಂಡದ ಭಾಗಗಳನ್ನು ಈಗ ಇಂಡಿಯಾ ಆಸ್ಟ್ರೇಲಿಯಾ, ದಕ್ಷಿಣಆಫ್ರಿಕ, ದಕ್ಷಿಣಅಮೇರಿಕಗಳಲ್ಲಿ ಗುರುತಿಸಬಹುದು ಈ ಎಲ್ಲಾ ಖಂಡಗಳಲ್ಲಿನ ಒಳನಾಡಿನ ಸರೋವರಗಳಲ್ಲಿ ನಿಕ್ಷೇಪಗೊಂಡಿರುವ ಶಿಲಾಸ್ಥರಗಳಲ್ಲಿ ಸಸ್ಯಾವಶೇಷಗಳು ಕಾಣಸಿಗುತ್ತವೆ. ಇಲ್ಲಿ ಶಿಲೆಗಳು ಅವುಗಳಲ್ಲಿನ ಜೀವಾವಶೇಷಗಳು ಸಮಸಮವಾದ ಹೋಲಿಕೆಯನ್ನು ತೋರಿಸುತ್ತವೆ. ಎಲ್ಲಾ ಕಡೆಗಳಲ್ಲಿಯೂ ಯುಗದ ಪ್ರಾರಂಭದಲ್ಲಿಯೂ ಹಿಮಗಡ್ಡೆಗಳಿಂದ ಆಚ್ಛಾಧಿತವಾದ ಭೂ ಭಾಗದ ಚಿಹ್ನೆ ಕಾಣುತ್ತದೆ. ಶೀತ ವಾತಾವರಣ ಕ್ರಮೇಣವಾಗಿ ಕಡಿಮೆಯಾಗುತ್ತಾ ಉಷ್ಣವಲಯವಾಗಿ ಪರಿಣಮಿಸುವುದನ್ನು ಶಿಲೆಗಳಲ್ಲಿ ಗುರುತಿಸ ಬಹುದಾಗಿದೆ. ದೂರದೂರವಿರುವ ಖಂಡ ಭಾಗಗಳೆಲ್ಲದರಲ್ಲಿಯೂ ಈ ಕಾಲದ ಪೆಡಂಭೂತಗಳ ಚಿಹ್ನೆಗಳು ತೋರುತ್ತವೆ. ಯುಗ ಕೊನೆಯಾಗುವ ಹೊತ್ತಿಗೆ ಬೃಹತ್ ಖಂಡ ಛಿದ್ರ ಹೊಂದಿ ದೂರಸರಿದು ಹೋಗಿದ್ದುದೆ ಅಲ್ಲದೆ ಅತ್ಯಂತ ಅಘಾದ ಮೊತ್ತದಲ್ಲಿ ಶಿಲಾರಸ ಉಕ್ಕಿ ಬಂದು ಖಂಡದ ಭಾಗವನ್ನು ಆಕ್ರಮಿಸುವುದು ಕಾಣುತ್ತದೆ.

ಈಗ ಬೇರೆಬೇರೆಯಾಗಿ ತೋರುವ ಭೂ ಖಂಡದ ಭಾಗಗಳು ಹಿಂದೆ ಒಟ್ಟುಗೂಡಿ ಗೊಂಡ್ವಾನ್‌ಖಂಡ ಎಂಬ ಬೃಹತ್ ಖಂಡವಾಗಿ ಕೂಡಿಕೊಂಡಿದ್ದೆನ್ನುವ ತತ್ವವನ್ನು ಎಲ್ಲರೂ

ಒಪ್ಪುವರಾದರೂ ಈ ಖಂಡ ಯಾವರೀತಿ ಒಡೆಯಿತು, ಒಡೆದ ಮೇಲೆ ಹೇಗೆ ಜರುಗುತ್ತಾ ಹೋಗಿ ಈಗಿರುವ ಭೂ ಸ್ಥಿತಿಯ ವಿಷಯವಾಗಿ ಸರ್ವಸಮ್ಮತವಾದ ಅಭಿಪ್ರಾಯಗಳು ಇನ್ನೂ ರೂಪಗೊಂಡಿಲ್ಲ ಭೂ ವಿಜ್ಞಾನ ಅಧ್ಯಯನದಲ್ಲಿ ಇದು ಜೀವಂತ ಪ್ರಶ್ನೆಯಾಗಿ ಉಳಿದಿದೆ.

೧೭ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಮಧ್ಯಭಾರತದ ಗೊಂಡ್ವಾನ (ಗೊಂಡ)ದ ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ಎತ್ತಿ ಹೇಳುತ್ತವೆ. ಮಧ್ಯಭಾರತದಲ್ಲಿ ಗೊಂಡ ಬುಡಕಟ್ಟಿನವರು ಅತೀ ಹೆಚ್ಚು ಸಂಖ್ಯೆಯಲ್ಲಿ ವಾಸವಾಗಿದ್ದರು. ಮಧ್ಯಭಾರತವನ್ನು ಈ ಸಮಯದಲ್ಲಿ ಮುಖ್ಯವಾಗಿ ನಾಲ್ಕು ಗೊಂಡ ರಾಜವಂಶಗಳು ಆಳ್ವಿಕೆ ನಡೆಸುತ್ತಿದ್ದವು. ಅವು (೧) ಘರ್ಥಮಂಡಲ (೧೩೦೦ ಕ್ರಿ ಶ ದಿಂದ ೧೭೮೯ ಕ್ರಿ ಶ), (೨) ಡಿಯೋಘ್ರ (೧೫೯೦ ಕ್ರಿ ಶ ದಿಂದ ೧೭೯೬ ದಿಂದ), (೩) ಚಂದಾ (೧೨೦೦ ಕ್ರಿ ಶ ದಿಂದ ೧೭೫೧ ಕ್ರಿ ಶ) ಮತ್ತು (೪) ಖೆರ್ಲಾ (೧೫೦೦ ಕ್ರಿ ಶ ದಿಂದ ೧೬೦೦ ಕ್ರಿ ಶ). ಪ್ರಸ್ತುತ ಛತ್ತಿಸ್‌ಘರ್ ಮತ್ತು ಮಧ್ಯ ಪ್ರದೇಶದ ಉತ್ತರಕ್ಕೆ ಚದುರಿದ ಭಾಗವನ್ನು ಘರ್ಥ ಮಂಡಲದ ರಾಜ ಮನೆತನವು ಆಳ್ವಿಕೆ ನಡೆಸುತ್ತಿತ್ತು. ಡಿಯೋಘ್ರ ರಾಜಮನೆತನವು ನಾಗಪುರ್ ರಾಜ್ಯವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿತ್ತು. ಚಂದಾ ರಾಜ ಮನೆತನವು ಈಗಿನ ಹಳೆಯ ಚಂದ್ರಪುರ ಜಿಲ್ಲೆಯನ್ನು ಆಳುತ್ತಿದ್ದರೆ, ಸಾತ್ಪುರ್ ಶ್ರೇಣಿಯು ಖೇರ್ಲಾ ರಾಜರ ಅಧೀನದಲ್ಲಿತ್ತು. ಈ ನಾಲ್ಕು ರಾಜ ಮನೆತನಗಳು ೧೮ ನೇ ಶತಮಾನದ ವರೆಗೂ ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದವು. ಇದರ ಮಾಹಿತಿಯನ್ನು ಕನ್ನಡ ವಿಶ್ವಕೋಶದಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಮಾಳವದ ರಜಪೂತರು ಈ ಪ್ರದೇಶಕ್ಕೆ ನುಗ್ಗಿ ಇದನ್ನು ಆಕ್ರಮಿಸಿಕೊಂಡು, ಇಲ್ಲಿನ ಜನರೊಂದಿಗೆ ವಿವಾಹ ಸಂಬಂಧ ಬೆಳೆಸಿದರು ಹೀಗೆ ಸಂಕರಗೊಂಡ ಗೊಂಡರು ಗೊಂಡ ರಜಪೂತರೆಂಬ ಹೆಸರು ತಾಳಿ ಅಲ್ಲಲ್ಲಿ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ಗೊಂಡರು ಸ್ಥಾಪಿಸಿಕೊಂಡ ರಾಜ್ಯಗಳಲ್ಲಿ ಪ್ರಮುಖವಾದವು ನಾಲ್ಕು. ಅವು ಮೊಗಲ್ ಸಾಮ್ರಾಜ್ಯ ಸ್ಥಾಪನೆಯಾಗುವುದಕ್ಕೆ ಹಿಂದೆ ಪ್ರಬಲವಾಗಿದ್ದವು. ಅವುಗಳಲ್ಲಿ ಈ ಮೇಲೆ ವಿವರಿಸಿದಂತೆ ಒಂದು ಗರ್ಹಾ. ಈ ರಾಜ್ಯದ ಅರಸರು ನರ್ಮದಾ ಕಣಿವೆಯಲ್ಲಿ ಆಳುತ್ತಿದ್ದರು. ಮಾಂಡ್ಲ ರಾಜ್ಯವನ್ನು ಸ್ಥಾಪಿಸಿದವನು ಎದುರಾಯ. ತನ್ನ ಮಾವ ಹರಹಾ ರಾಜ್ಯದ ಅರಸ ನಾಗದೇವನ ತರುವಾಯ ಇವನೇ ಗರ್ಹಾ ರಾಜನಾದ (೩೫೮). ಇವನ ವಂಶಜರಲ್ಲಿ ಒಬ್ಬನಾದ ಗೋಪಾಲ ೬೩೪ ರಲ್ಲಿ ಮಾಂಡ್ಲ ರಾಜ್ಯವನ್ನು ಗೆದ್ದು ಕೊಂಡ. ಸಂಗ್ರಾಮ ೧೪೮೦-೧೫೩೦ ರಲ್ಲಿ ಗರ್ಹಾ ರಾಜ್ಯವಾಳಿದ. ೧೫೬೩ ರಲ್ಲಿ ಅಕ್ಬರನ ಸೈನ್ಯ ಆಸಫ್‌ಖಾನನ ನಾಯಕತ್ವದಲ್ಲಿ ಗರ್ಹಾ ರಾಜ್ಯದ ಮೇಲೆ ದಾಳಿ ನಡೆಸಿದಾಗ ಅಲ್ಲಿಯ ಅರಸ ಬೀರನಾರಾಯಣ ಇನ್ನೂ ಹುಡುಗನಾಗಿದ್ದ ಅವನ ತಾಯಿ ರಾಣಿ ದುರ್ಗಾವತಿ ಅಕ್ಬರನ ಸೈನ್ಯವನ್ನು ಎದುರಿಸಿ ಯುದ್ಧ ಮಾಡಿ ಮಡಿದಳು. ೧೭೪೨ ರಲ್ಲಿ ಬಾಲಾಜಿ ಜಾಜಿರಾಯ ಆ ದೇಶದ ಮೇಲೆ ದಂಡೆತ್ತಿ ಹೋದ. ಗೊಂಡರ ಎರಡನೇಯ ರಾಜ್ಯದ ರಾಜಧಾನಿ ಸಾತ್ಪುಡ ಪರ್ವತ ಶ್ರೇಣಿಗಳ ದೇವಘಡ (ದೇವಘರ್). ಈ ರಾಜ್ಯದ ಅರಸರಲ್ಲಿ ಒಬ್ಬನಾದ ಭಕ್ಸ್‌ಬಾಲಂದ್ ಔರಂಗಜೇಬನಿಂದ ಬಂಧಿತನಾದ. ಗೊಂಡರ ೩ನೇ ರಾಜ್ಯ ಬೈಟುಲ್ ಪ್ರದೇಶದಲ್ಲಿತ್ತು, ಖೇರ್ಲಾ ಅದರ ರಾಜಧಾನಿ. ಪ್ರಸಿದ್ಧ ದುರ್ಗಗಳಾದ ಗ್ವಾಲಿಘರ್ ಮತ್ತು ನರ್ನಲ್ಲ ಈ

ರಾಜ್ಯಕ್ಕೆ ಸೇರಿದ್ದು ಇದರ ಅರಸ ನರಸಿಂಗರಾಜ ಮಾಳವದ ಅರಸ ಉಷಾಂಗ್‌ಘೋರಿಯಿಂದ ಸೋತು ಮಡಿದ. ಖೇರ್ಲಾ ನಗರ ಮಾಳವದ ವಶವಾದ ಸ್ವಲ್ಪ ಕಾಲಾನಂತರ ದೇವಘಡದ ಅರಸರಿಗೆ ಸೇರಿಹೋಯಿತು. ಗೋಂಡರ ನಾಲ್ಕನೇ ರಾಜ್ಯದ ರಾಜಧಾನಿ ಚಾಂದಾ. ವರ್ಧಾನದಿಯ ದಂಡೆಯ ಮೇಲೆ ಸ್ಥಾಪಿತವಾಗಿ ಪೂರ್ವ ಹಾಗೂ ಆಗ್ನೇಯಕ್ಕೆ ವ್ಯಾಪಿಸಿತ್ತು. ಔರಂಗಜೇಬನ ಕಾಲದಲ್ಲಿ ಖೇರ್ಲಾಕ್ಕೆ ಅನತಿದೂರದ ಸೋಲಿಘಡದಲ್ಲಿ ಗೊಂಡ ರಾಜರು ಆಳುತ್ತಿದ್ದರು. ಈ ರಾಜ್ಯ ೧೭೬೦-೧೭೭೫ರ ನಡುವೆ ಮರಾಠರ ವಶವಾಯಿತು.

ಈ ಪ್ರಮುಖ ಗೋಂಡಾ ರಾಜ್ಯಗಳಲ್ಲದೇ ಗೋಂಡಾ ರಜಪುತ ಅರಸರು ವಾರಂಗಲ್ಲಿನಲ್ಲಿ ಆಳುತ್ತಿದ್ದರು. ೧೩೧೯ರಲ್ಲಿ ಮಲ್ಲಿಕ್ ಕಾಫುರ್ ವಾರಂಗಲ್ಲನ್ನು ಸೂರೆ ಮಾಡಿದ. ೧೩೨೩ ರಲ್ಲಿ ಅದು ಘೀಯಾಸುದ್ಧೀನನ ಮಗ ಜೌನಾಖಾನನ (ತುಘಲಖ್) ವಶವಾಯಿತು. ಅದರ ಅರಸ ಪ್ರತಾಪರುದ್ರ ಯುದ್ಧದಲ್ಲಿ ಮಡಿದ ೧೫ನೇ ಶತಮಾನದಲ್ಲಿ ಗುಲ್ಬರ್ಗಾದ ಅರಸ ಅಹಮದ್ ಷಾ ವಲಿ ವಾರಂಗಲ್ಲನ್ನು ವಶಮಾಡಿಕೊಂಡು ಅಲ್ಲಿಯ ಅರಸರನ್ನು ಗೋದಾವರಿ ಹತ್ತಿರಕ್ಕೆ ಅಟ್ಟಿದ.

೧೫೧೩ ರಲ್ಲಿ ಗೋಂಡಾ ರಾಜರು ಒಗ್ಗೂಡಿ ಮಾಳವದ ಮೇದನಿರಾಯನ ಪರವಾಗಿ ನಿಂತು ಮಾಳವದ ೨ನೆಯ ಮಹಮದ್‌ನ ವಿರುದ್ಧ ಹೋರಾಡಿದರು. ೧೬ನೇ ಶತಮಾನದ ಕೊನೆಯ ಹೊತ್ತಿಗೆ ಅಕ್ಬರ್ ಗೊಂಡ್ವಾನದ ಪಶ್ಚಿಮಭಾಗವನ್ನು ಪೂರ್ಣವಾಗಿ ಸ್ವಾಧೀನಪಡಿಸಿಕೊಂಡ. ಮರಾಠರು ಏಳಿಗೆಗೆ ಬಂದ ಕಾಲದಲ್ಲಿ ಗೋಂಡರ ಪ್ರಭುತ್ವಕ್ಕೆ ಪೆಟ್ಟುತಾಕಿತು. ೧೭೩೮ ರಲ್ಲಿ ರಘೂಜಿ ಭೋನ್‌ಸ್ಲಾ ದೇವಘಡದ ಉತ್ತರಾಧಿಕಾರದ ಬಗ್ಗೆ ಕೈಹಾಕಿ ಆ ರಾಜ್ಯದ ಹುಟ್ಟುವಳಿಯಲ್ಲಿ ಅರ್ಧಭಾಗವನ್ನು ವಶಪಡಿಸಿಕೊಂಡ.

ಮಧ್ಯಭಾರತದಲ್ಲಿ ದ್ರಾವಿಡ ಬುಡಕಟ್ಟಿನ ಗೋಂಡ ಜನಾಂಗ ನೆಲೆಸಿದ್ದ ನಾಡು. ತೆಲುಗಿನ ಕೊಂಡ (ಬೆಟ್ಟ) ಎಂಬ ಶಬ್ದದಿಂದ ಗೋಂಡ ಬಂದಿದೆ ಎಂದು ಹೇಳಲಾಗಿದೆ. ಗೋಂಡರು ವಾಸಿಸುತ್ತಿದ್ದ ಗುಡ್ಡಗಾಡು ಗೊಂಡ್ವಾನ(ಗೋಂಡರವನ) ಅಥವಾ ಗೊಂದಾರಣ್ಯ ಎನಿಸಿಕೊಂಡಿತು. ೧೪ನೇ ಶತಮಾನದಲ್ಲಿ ಗೋಂಡ್ವಾನ ದಟ್ಟವಾದ ಅರಣ್ಯವಾಗಿತ್ತು. ಉತ್ತರದಲ್ಲಿ ವಿಂಧ್ಯಪರ್ವತಗಳಿಂದ ದಕ್ಷಿಣದಲ್ಲಿನ ಗೋದಾವರಿಯವರೆಗೂ ಪೂರ್ವದಲ್ಲಿ ಪೂರ್ವಘಟ್ಟಗಳವರೆಗೂ ವ್ಯಾಪಿಸಿದ್ದ ಪ್ರದೇಶವನ್ನು ೧೪ನೇ ಶತಮಾನದ ಮುಸ್ಲಿಂ ಚರಿತ್ರೆಕಾರರು ಗೋಂಡ್ವಾನ ಎಂದು ಕರೆದರು. ಅಕ್ಬರನ ರಾಜ್ಯದ ಭೂಪಟದಲ್ಲಿ ಅದಕ್ಕೆ ವಿಶಿಷ್ಟಸ್ಥಾನವಿದೆ. ಅವನ ಆಸ್ಥಾನಿಕ ಅಬುಲ್‌ಫಜಲ್‌ನ ವರ್ಣನೆಯ ಪ್ರಕಾರ ಗೊಂಡ್ವಾನ ಅಥವಾ ಗರ್ಹಾ ಕಟಾಂಗ ಪ್ರದೇಶದ ಎಲ್ಲೆಕಟ್ಟು ಪೂರ್ವಕ್ಕೆ ಛೋಟಾನಾಗ್ಪುರಕ್ಕೆ ಸೇರಿದ ರತ್ನಪುರಿ, ಪಶ್ಚಿಮಕ್ಕೆ ಮಾಳವ, ಉತ್ತರಕ್ಕೆ ಪನ್ನಾ, ದಕ್ಷಿಣಕ್ಕೆ ದಖ್ಖನ್ ಪ್ರದೇಶ. ಅದರ ವಿಸ್ತೀರ್ಣ ನೈರುತ್ಯದಿಂದ ಈಶಾನ್ಯಕ್ಕೆ ೩೮೦ ಮೈಲಿ. ಅದರ ಸರಾಸರಿ ಅಗಲ ೩೦೦ ಮೈಲಿ. ೧.೧೫೦೦ ಚ.ಮೈಲಿ ಪ್ರದೇಶವನ್ನು ಅದು ಒಳಗೊಂಡಿತ್ತು. ಈಗ ಗೊಂಡ್ವಾನದ ಮೇಲ್ನಾಡು ಮತ್ತು ಅರಣ್ಯಗಳು ಇನ್ನೂ ಪರಿಶೋಧನೆಗೆ ಒಳಗಾಗದ ಬಲು ವಿಸ್ತಾರವಾದ ಪ್ರದೇಶವಾಗಿಯೇ ನಮ್ಮ ಭೂಪಟದಲ್ಲಿ ಮರಳುಗಾಡಿನ ಊಟೆಯಂತೆ ಅಗೋಚರವಾಗಿವೆಯೆಂದು ೧೮೫೩ರಲ್ಲಿ ರಾಯಲ್ ಏಷ್ಯಾಟಿಕ್

ಸೊಸೈಟಿಗೆ ಒಪ್ಪಿಸಿದ ವರದಿಯಲ್ಲಿ ಹೇಳಲಾಗಿದೆ. "ಮಾಳವ, ರತ್ನಪುರಿ, ಜಬ್ಬಲ್ಪುರದ ಬಳಿಯ ತ್ರಿಪುರ(ತೇವಾರ್), ಪಶ್ಚಿಮ ಬಂಗಾಳದ ಪೂರ್ವಅಂಚು, ವಾರಂಗಲ್, ಗೋದಾವರಿ ಮತ್ತು ನರ್ಮದಾ ಭಾಗ, ಪೂರ್ವಬಿಹಾರಿನಲ್ಲಿ ವರ್ದಾನದಿಯ ಬಲದಂಡೆಯ ಪ್ರದೇಶ ಹಾಗೂ ಸಾತ್ಪುಡಾ ಪರ್ವತಶ್ರೇಣಿ ಇವು ಗೊಂಡ್ವಾನಕ್ಕೆ ಸೇರಿದ್ದವು"(ಕನ್ನಡ ವಿಶ್ವಕೋಶ:೧೯೭೩:೫೩೦).

ಭಾರತವು ಸುಸಂಸ್ಕೃತವಾದ ಸಂಸ್ಕೃತಿ, ಜೀವನ ಪದ್ಧತಿ ಹಾಗೂ ಮೌಲ್ಯಗಳನ್ನು ಹೊಂದಿದ ಪ್ರಧಾನ ಮಾದರಿಯನ್ನು ಅನುಸರಿಸಿದೆ. ಈ ಅಂಶಗಳನ್ನು ಪಂಡಿತರು ಅಭ್ಯಸಿಸುವಲ್ಲಿ ಮತ್ತು ಅನುಸರಿಸುವಲ್ಲಿ ಉತ್ತಮವಾದ ಲಾಭ ಹೊಂದಿರುವರು. ಇವುಗಳನ್ನು ನಿರೂಪಿಸುವಲ್ಲಿ ಹಿಂದೂ, ಬ್ರಾಹ್ಮಣಧರ್ಮವು ಅತ್ಯಂತ ಪ್ರಭಾವ ಬೀರಿದ ಏಕಮೇವ ಮಾದರಿ ಎಂದು "ಭಾರತದ ಧರ್ಮಗಳು" ಎಂಬ ಕೃತಿಯಲ್ಲಿ ಮ್ಯಾಕ್ಸ್ ವೆಬರ್ ಹೇಳಿದ್ದಾರೆ.

"ಧರ್ಮವೆನ್ನುವುದು ಆತ್ಮ–ಪರಮಾತ್ಮನ ವಿಷಯದಲ್ಲಿ ಒಂದು ಸಮೂಹತಾಳಿದ ಇತ್ಯಾತ್ಮಕ ಇಲ್ಲವೇ ನೇತ್ಯತ್ಮಕ ಮನೋಧರ್ಮವೆನಿಸಿದೆ. ವೈಧಿಕ ಮೊದಲಾದ ಧರ್ಮಗಳು ಪರಮಾತ್ಮನನ್ನು ಸಾಕಾರ ರೂಪದಲ್ಲಿ ಮೂರ್ತೀಕರಿಸಿ, 'ದೇವಾಲಯ' ಕಟ್ಟುತ್ತವೆ. ಬೌದ್ಧ, ಜೈನ, ಧರ್ಮಗಳು ಪರಮಾತ್ಮನನ್ನು ನಿರಾಕರಿಸಿದರು ಜಿನ, ಬುದ್ಧರಂತಹ ಮಹಾತ್ಮರನ್ನು ಪರಮಾತ್ಮನ ಸ್ಥಾನದಲ್ಲಿ ಗೌರವಿಸಿ ಅವರ ಹೆಸರಿನಲ್ಲಿ ಸ್ಮಾರಕಗಳನ್ನು ನಿರ್ಮಿಸುತ್ತವೆ. ಪರಮಾತ್ಮನನ್ನು ನಿರಾಕಾರ ರೂಪದಲ್ಲಿ ಸ್ವೀಕರಿಸಿದ ಮತ್ತು ಮಹಾತ್ಮರನ್ನು ಪರಮಾತ್ಮರೆಂದು ಭಾವಿಸಿದ ಕ್ರೈಸ್ತ, ಮುಸಲ್ಮಾನ ಮತ್ತು ವೀರಶೈವ ಧರ್ಮಗಳು ಸಮೂಹ ಸಂಸ್ಕೃತಿಗಾಗಿ ಚರ್ಚು, ಮಸೀದಿ ಮತ್ತು ಅನುಭವ ಮಂಟಪಗಳಂತಹ ಮಂದಿರಗಳನ್ನು ನಿರ್ಮಿಸುತ್ತವೆ. ಜಗತ್ತಿನಲ್ಲಿ ಇದೇ ರೀತಿ ಕರ್ನಾಟಕದಲ್ಲಿ ಈ ಮೂರು ಬಗೆಯ ನಿರ್ಮಾಣಗಳು ಇವುಗಳಿಗೆ ಹೊಂದಿಕೊಂಡು ಪೂರಕ ನಿರ್ಮಾಣಗಳು ಹುಟ್ಟಿಕೊಳ್ಳುತ್ತಾ ಘರ್ಷಣೆಯಲ್ಲಿ ನಾಶವಾಗುತ್ತಾ ಬಂದಿವೆ" (ಕಲಬುರ್ಗಿ ಎಂ ಎಂ:೧೯೯೮:೩೬).

ಒಂದು ಧರ್ಮದ ಏಳಿಗೆ ಇನ್ನೊಂದು ಧರ್ಮದ ಅಳಿವಿಗೆ ಕಾರಣವಾಗಿದ್ದವು. ಇಲ್ಲಿ ಪಂಡಿತರು, ದಾರ್ಶನಿಕರು ತಮ್ಮ ಧರ್ಮದ ಏಳಿಗೆಗೋಸ್ಕರ ಆಯಾ ಪ್ರಾಂತ್ಯದ ರಾಜರುಗಳನ್ನು ಬಳಸಿಕೊಂಡು ತಮ್ಮ ಧರ್ಮದ ಬೆಳವಣಿಗೆಯನ್ನು ಕಂಡರು.

ಅನಾದಿಕಾಲದಿಂದಲೂ ಜ್ಞಾನವಿಶಾರಧರು, ತತ್ವಜ್ಞಾನಿಗಳು 'ಧರ್ಮ' ಎಂಬ ಪದಕ್ಕೆ ಅರ್ಥ ವಿವರಣೆ ಕೊಡಲು ಪ್ರಯತ್ನಿಸುತ್ತಲೇ ಇದ್ದಾರೆ. ಆದರೆ ಆ ಪದಕ್ಕೆ ನಿಖರವಾದ ಅರ್ಥ ಕೊಡಲು ಸಾಧ್ಯವಾಗಿಲ್ಲ. ಏಕೆಂದರೆ ಧರ್ಮ ಎಂಬ ಪದಕ್ಕೆ ವಿಶಾಲವಾದ ಅರ್ಥವಿದೆ. ಧರ್ಮದ ತತ್ತ್ವಗಳು ಅತಿಗಹನವಾಗಿ, ಸೂಕ್ಷ್ಮವಾಗಿ ಇರುವುದರಿಂದ ಅತಿಸುಲಭವಾಗಿ ವಿವರಿಸಲು ಸಾಧ್ಯವಾಗಿಲ್ಲ. ಒಬ್ಬರು ಹೇಳುವ ವಿಷಯಗಳನ್ನು ಪ್ರಮಾಣ ಸಾಕ್ಷ್ಯಗಳಿಲ್ಲದೆ ಇತರರು ಒಪ್ಪುವುದಿಲ್ಲ. ಆದರೂ ಯಾವ ವ್ಯಕ್ತಿ ಇತರರ ಶ್ರೇಯಸ್ಸಿಗಾಗಿ ತ್ರಿಕರ್ಣ ಪೂರ್ವಕವಾಗಿ ಶ್ರಮಿಸುವನೋ ಅಂತಹವನು ಧರ್ಮವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾನೆಂದು ಹೇಳಬಹುದು. ಆದ್ದರಿಂದ ಜ್ಞಾನಿಗಳು ಅನುಸರಿಸುವ ಮಾರ್ಗವನ್ನು ಜನ ಸಾಮಾನ್ಯರು ಅನುಸರಿಸುವುದು ಲೇಸು.

ಸಾಮಾನ್ಯವಾಗಿ ನಾವು ಧರ್ಮ ಎಂಬ ಪದವನ್ನು ಆಗಾಗ ಉಪಯೋಗಿಸುತ್ತೇವೆ. ಒಂದು ಜನಾಂಗ ಸಾಂಪ್ರದಾಯಿಕವಾಗಿ ಅನುಸರಿಸಿಕೊಂಡು ಬಂದಿರುವ ಆಚಾರ, ಪದ್ಧತಿ ಮತ್ತು ನಿಯಮಗಳಿಗೆ ಧರ್ಮವೆಂದು ಹೆಸರು. ಯಾವುದೇ ಒಂದು ಜೀವಿಗೆ ಧಾರಣ ಶಕ್ತಿಯನ್ನು ಯೋಗ್ಯರೀತಿಯಲ್ಲಿ ಬಾಳುವ ಶಕ್ತಿಯನ್ನು ಕೊಡುವುದೋ ಅದೇ ಧರ್ಮ. ಧರ್ಮ ಎಂಬ ಪದ 'ಧೃ' ಎಂಬ ಸಂಸ್ಕೃತ ಪದದಿಂದ ಬಂದಿದೆ. ಧೃ ಎಂದರೆ ಎತ್ತಿ ಹಿಡಿಯುವುದು ಎಂದರ್ಥ. "ಧರ್ಮೋ ರಕ್ಷತಿ ರಕ್ಷಿತಃ" ಅಂದರೆ ಧರ್ಮ ನಮ್ಮನ್ನು ಕಾಪಾಡುತ್ತದೆ, ನಾವು ಧರ್ಮವನ್ನು ಕಾಪಾಡಬೇಕು ಎಂದು ನಮ್ಮ ಪೂರ್ವಜರು ಹೇಳುತ್ತಿದ್ದರು. ಹೀಗೆ ಧರ್ಮದ ತಳಹದಿಯಲ್ಲಿ ಅನೇಕ ಧರ್ಮಗಳು ಬೆಳೆದು ಬಂದವು.

ಬೌದ್ಧಧರ್ಮದ ಮುಖ್ಯ ಸೂತ್ರ "ಅಹಿಂಸಾ ಪರಮೋ ಧರ್ಮ" ಈ ಸೂತ್ರದಿಂದಲೇ ಕಟ್ಟಿದ ಬೌದ್ಧಧರ್ಮ ಕೆಲವು ಕಾಲ ಸಾಮ್ರಾಜ್ಯ ಪದವಿಯನ್ನು ಅನುಭವಿಸಿ ಕಡೆಗೆ ವೈಧಿಕ ಧರ್ಮದವರ ದಾಳಿಗೆ ಈಡಾಯಿತು. ಅಹಿಂಸಾತತ್ವ ದೇಶದ ಪ್ರಗತಿಗೆ ಅಡ್ಡಿಯಾಗುವುದೆಂದು ರಾಜಾಶ್ರಯ ತಪ್ಪಿಹೋಗುವುದೆಂದು ರಾಜಪುತ್ರರು ವಿರೋದಿಸಿದರು. ಆಗತಾನೆ ಭಾರತಕ್ಕೆ ಕಾಲಿಟ್ಟ ಮುಸ್ಲಿಮರ ದಾಳಿಯನ್ನು ತಡೆಗಟ್ಟಲು ಶಕ್ತಿಸಾಮರ್ಥ್ಯಗಳಿಲ್ಲದುದು ಬೌದ್ಧ ಧರ್ಮದ ಅವನತಿಗೆ ಕಾರಣವಾಯಿತು ಅದು ಭಾರತದಲ್ಲಿ ಹುಟ್ಟಿದ್ದರು ಅದು ಬೆಳೆದು ನಿಂತಿರುವುದು ಹೊರದೇಶದಲ್ಲಿ.

ಜೈನಧರ್ಮವು ಸಹ ಬೌದ್ಧಧರ್ಮದ ಹಾಗೆ ಪ್ರಧಾನವಾಗಿ ವೈಧಿಕಧರ್ಮಕ್ಕೆ ಪ್ರತಿಯಾಗಿ ಹುಟ್ಟಿದ್ದು. ೨೪ ತೀರ್ಥಂಕರರನ್ನೊಳಗೊಂಡ ಜೈನಧರ್ಮದ ಮುಖ್ಯನೀತಿ ಸಹ ಆಧ್ಯಾತ್ಮ ಮಾರ್ಗವನ್ನು ಭೋಧಿಸುವುದು. ಮೂಲತಃ ಕ್ಷತ್ರಿಯರಿಂದ ಪೋಷಿತವಾದ ಈ ಧರ್ಮ ಜಾತಿಪದ್ಧತಿ, ಯಜ್ಞಯಾಗಾಧಿಗಳಲ್ಲಿ ಕೊಡುವ ಬಲಿ ಪದ್ಧತಿಯ ವಿರುದ್ದ ಹೋರಾಡಿತು.

"ದೇವಾಲಯದ ಮೂಲಕ ಶ್ರೀಮಂತವಾಗಿದ್ದ ಮಠಗಳ ಶೋಷಣೆ ೧೩ನೇ ಶತಮಾನದ ಜೈನ ವರ್ತಕರಿಂದ ಆರಂಭವಾಗಿದೆ. ಆರಂಭದಲ್ಲಿ ವರ್ತಕರು ತ್ಯಾಗ ಭಾವನೆಯಿಂದ ದಾನಮಾಡಿ ಮಠ, ದೇವಾಲಯಗಳ ಅಭಿವೃದ್ಧಿಯನ್ನು ಹೆಚ್ಚಿಸಿಕೊಂಡು ಬಂದರು. ಆದರೆ ಈ ಸಂಸ್ಥೆಗಳು ಶ್ರೀಮಂತಿಕೆಯಿಂದ ಭದ್ರವಾದಂತೆ ಅವುಗಳ ಉಪಯೋಗವನ್ನು ಪಡೆಯಲು ವರ್ತಕರು ಅಡ್ಡದಾರಿ ಹಿಡಿದರು. ಅದರಿಂದಾಗಿ ೧೩ನೇ ಶತಮಾನದಲ್ಲಿ ನಯಕೀರ್ತದೇವನು ಶ್ರವಣಬೆಳಗೊಳದ ವರ್ತಕರೊಂದಿಗೆ ಒಡಂಬಡಿಕೆ ಮಾಡಿಕೊಂಡು ರಾಮದೇವನಾಯಕ ಮಂತ್ರಿಯ ಸಮಕ್ಷಮ ಒಂದು ಪರಿಪತ್ರ ಹೊರಡಿಸಿ ವರ್ತಕರೆಲ್ಲರು ಮಠಕ್ಕೆ ತಪ್ಪದೆ ದಾನ ನೀಡಬೇಕೆಂದು ಮುಖಂಡರಂತೆ ನಟಿಸುತ್ತಾ ಆಚಾರ್ಯರನ್ನು ಮೋಸವಂಚನೆಗೆ ಈಡು ಮಾಡಬಾರದೆಂದು ಕೇಳಿಕೊಂಡಿದ್ದಾರೆ"(ಹಿರೇಮಲ್ಲೂರು ಈಶ್ವರನ್:೧೯೯೭:೪೯). ಹೀಗೆ ಜೈನ ಧರ್ಮವು ಸಹ ಅವನತಿಯನ್ನು ಕಂಡಿತು.

ಬೌದ್ಧ ಮತ್ತು ಜೈನಧರ್ಮದಂತೆ ಇಸ್ಲಾಂಧರ್ಮ ಭಾರತದ ಮೇಲೆ ೭ನೇ ಶತಮಾನದ ವೇಳೆ ಬಹು ಪ್ರಭಾವವನ್ನು ಬೀರಿತ್ತು. ಮೊಹಮದ್ ಎಂಬುವನು ಸಿಂಧ್ ಪ್ರಾಂತ್ಯದ ಮೇಲೆ ದಂಡೆತ್ತಿ ಬಂದು ಮುತ್ತಿ ಅಲ್ಲಿಯ ರಾಜನನ್ನು ಸೋಲಿಸಿ ತನ್ನ ಆಳ್ವಕೆಯನ್ನು ನೆಲೆಗೊಳಿಸಿದ. ನಂತರ ಬಂದ ಮೊಹಮದ್‌ಘಜ್ನಿ ಪಂಜಾಬ್‌ನ್ನು ಮುತ್ತಿಗೆ ಹಾಕಿ ಅಲ್ಲಿಯ ರಾಜನನ್ನು ಸೋಲಿಸಿದನು. ನಂತರ

ಅವನು ತನ್ನ ರಾಜ್ಯವನ್ನು ವಿಸ್ತರಿಸುತ್ತಾ ಕೊಳ್ಳೆ, ವಿಗ್ರಹರಾಧಕರ ಮೇಲೆ ಹೂಡಿದ ಪವಿತ್ರ ಯುದ್ಧದ ನೆಪ, ಇವೆಲ್ಲವು ಸೇರಿ ಅನೇಕರು ಅವನ ಸೈನ್ಯಕ್ಕೆ ಸೇರಿಕೊಂಡರು. ನಂತರ ಬಂದ ತೈಮೂರ್, ಔರಂಗಜೇಬ, ಟಿಪ್ಪುಸುಲ್ತಾನ್ ಮೊದಲಾದವರು ಸಹ ಒಂದೆಡೆ ವಿಗ್ರಹವನ್ನು ಹೊಡೆಯುವುದು ಮತ್ತೊಂದೆಡೆ ಕೆಲವರನ್ನು ಇಸ್ಲಾಮಿಗೆ ಬಲಾತ್ಕಾರವಾಗಿ ಸೇರಿಸುವುದು, ಆದರೆ ಅವರಾರು ಇಸ್ಲಾಂಧರ್ಮ ಪ್ರಚಾರಕ್ಕಾಗಿ ಕೆಲಸ ಮಾಡಲಿಲ್ಲ. ಆದರೆ ಪರ್ಶಿಯ, ಅರೇಬಿಯಾದಿಂದ ಬಂದ ವಿದ್ವಾಂಸರಿಗೆ ಇವರು ನೆಲೆಸಲು ಸಹಾಯ ಮಾಡಿದರು. ಇವರು ಭಾರತದ ಭಾಷೆ, ಆಚಾರ ವ್ಯವಹಾರಗಳನ್ನು ಅನುಸರಿಸಿ ಅವರ ತತ್ವಗಳನ್ನು ಇಲ್ಲಿನ ಜನರಿಗೆ ಇಲ್ಲಿಯ ಸಂಸ್ಕೃತಿಯೊಂದಿಗೆ ಹೊಂದಿಕೊಂಡು ಸಾವಿರಗಟ್ಟಲೆ ಜನರನ್ನು, ಮುಖ್ಯವಾಗಿ ಕೆಳವರ್ಗದವರನ್ನು ಇಸ್ಲಾಂ ಮತಕ್ಕೆ ಸೇರಿಸಿಕೊಂಡರು. ಅದರೂ ಸಹ ಇಸ್ಲಾಂ ಧರ್ಮದ ಪ್ರಭಾವ ಘಜ್ನಿಮೊಹಮದ್ ಬರುವುದಕ್ಕೂ ಮುಂಚೆ ಅಷ್ಟೊಂದು ಪ್ರಭಾವ ಭಾರತದ ಮೇಲೆ ಆಗಲಿಲ್ಲ. ಕಾಲಾಂತರದಲ್ಲಿ ರಾಜರ ಆಳ್ವಿಕೆ ಬರಬರುತ್ತಾ ಜಾತಿ, ವರ್ಣ, ವರ್ಗವ್ಯವಸ್ಥೆಗಳು ಸಮಾಜದಲ್ಲಿ ಬೆಳೆದು ಉತ್ತಮ, ಮಧ್ಯಮ, ಕೆಳವರ್ಗ ಎಂಬ ಬಿರುಕು ಸಮಾಜದಲ್ಲಿ ಮೂಡ ತೊಡಗಿದವು.

ವರ್ಣವ್ಯವಸ್ಥೆ ಹಿಂದೂ ಸಂಸ್ಕೃತಿಯ ಒಂದು ಆದರ್ಶ ವ್ಯವಸ್ಥೆ. ಹಿಂದೂ ಧರ್ಮ ಶಾಸ್ತ್ರಗಳಲ್ಲಿ ನಾಲ್ಕು ವರ್ಣಗಳ ವಿವರಣೆ ಬರುತ್ತದೆ. ಋಗ್ವೇದದ ಪುರುಷ ಸೂಕ್ತದಲ್ಲಿ ವಿರಾಟ ಪುರುಷನಾದ ಬ್ರಹ್ಮನ ವಿವಿಧ ಅವಯವಗಳಿಂದ ವಿವಿಧ ವರ್ಣಗಳು ಸೃಷ್ಟಿಯಾದವು ಎನ್ನಲಾಗಿದೆ. ಬ್ರಹ್ಮನ ಬಾಯಿಯಿಂದ ಬ್ರಾಹ್ಮಣನು ಸೃಷ್ಟಿಯಾದ. ಈತನು ಜ್ಞಾನದ ಸಂಕೇತ. ಭುಜಗಳಿಂದ ಕ್ಷತ್ರಿಯನು ಸೃಷ್ಟಿಯಾದನು. ಈತ ಬಲ ಅಥವಾ ಶಕ್ತಿಯ ಸಂಕೇತ. ತೊಡೆಗಳಿಂದ ವೈಶ್ಯನೂ, ಈತನು ವಾಣಿಜ್ಯ ಉತ್ಪಾದನೆಯ ಸಂಕೇತ. ಪಾದಗಳಿಂದ ಶೂದ್ರನು ಸೃಷ್ಟಿಯಾದನು ಈತನು ಈ ಮೇಲಿನ ಮೂವರಿಗೆ ಸೇವೆಯನ್ನು ಒದಗಿಸಬೇಕು. ಇನ್ನೊಂದು ರೀತಿ ಹೇಳುವುದಾದರೆ ಜನ್ಮತ: ಬ್ರಾಹ್ಮಣ ಶಿಕ್ಷಕ; ಕ್ಷತ್ರಿಯ ರಕ್ಷಕ; ವೈಶ್ಯ ಧಾರಕ; ಶೂದ್ರ; ಸೇವಕ ಇದು ಹಲವಾರು ಹಿಂದೂ ಧರ್ಮಶಾಸ್ತ್ರಗಳಲ್ಲಿ, ಮನುಸ್ಮೃತಿಯಲ್ಲಿ ಈ ತರನಾದ ವಿವರಣೆ ಕಾಣಬಹುದು.

ಆದರೆ ವರ್ಣ ವ್ಯವಸ್ಥೆಯಲ್ಲಿ ಜನಿಸಿದ ಮಾತ್ರಕ್ಕೆ ನಾವು ಇತರರಿಗಿಂತ ಶ್ರೇಷ್ಠ ಅಥವಾ ಕನಿಷ್ಠ, ಮೇಲೂ ಅಥವಾ ಕೀಳು ಎಂದು ಬಾವಿಸಕೂಡದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣಗಳು ಒಂದೇ ದೇಹಕ್ಕೆ ಸೇರಿದ ಅಂಗಗಳು ಎಂಬುವುದನ್ನು ಗಮನದಲ್ಲಿಟ್ಟುಕೊಂಡು ಕಾರ್ಯನಿರ್ವಹಿಸಬೇಕು. ಅಂದರೆ ದೇಹದ ಯಾವುದೇ ಒಂದು ಅಂಗ ಕಾರ್ಯನಿರ್ವಹಿಸದಿದ್ದರೆ ಇಡೀ ದೇಹಕ್ಕೆ ತೊಂದರೆಯಾಗುವುದೋ ಹಾಗೇ ಒಂದು ವರ್ಣದಲ್ಲಿ ಜನಿಸಿದ ವ್ಯಕ್ತಿಗಳು ಕಾರ್ಯಮಗ್ನರಾಗದಿದ್ದರೆ ಸಮಾಜಕ್ಕೆ ಹಾನಿಯಾಗುತ್ತದೆ. ವೇದಗಳ ಕಾಲದಲ್ಲಿ ವ್ಯಕ್ತಿಯು ತನಗಿಷ್ಟ ಬಂದ ವೃತ್ತಿಯನ್ನು ಆಯ್ಕೆಮಾಡಿಕೊಳ್ಳಬಹುದಾಗಿತ್ತು. ಇಲ್ಲಿ ಎಲ್ಲದಕ್ಕೂ ಮುಕ್ತ ಅವಕಾಶವಿತ್ತು. ಆದ ಕಾರಣ ವ್ಯಕ್ತಿಗಳು ತಮಗನುಗುಣವಾಗುವ ವೃತ್ತಿ, ವಿವಾಹ, ಆಯ್ಕೆ ಮಾಡತೊಡಗಿದರು ಎನ್ನಬಹುದು.

ಕಾಲಕ್ರಮೇಣ ವರ್ಣಗಳ ನಡುವೆ ಭೇದಗಳುಂಟಾಗಿ ಇಂತಹ ವರ್ಣಕ್ಕೆ ಸೇರಿದ ವ್ಯಕ್ತಿ ಇಂತಹದ್ದೇ ವೃತ್ತಿಯನ್ನು ಅವಲಂಬಿಸಬೇಕು ಎಂಬ ನಿಯಮ ರೂಢಿಗೆ ಬಂದಿತು. ಒಂದೊಂದು ವರ್ಣದವರಿಗೆ ಒಂದೊಂದು ಬಗೆಯ ನಿಯಮವನ್ನು ವಿಧಿಸಲಾಯಿತು. ವ್ಯಕ್ತಿಗಳು ತಮ್ಮ ವೃತ್ತಿ ನಿಯಮವನ್ನು ಚಲಾಯಿಸುವ ಬದಲು ಉಲ್ಲಂಘಿಸಿ ಕರ್ತವ್ಯ ಮರೆತು ಹಕ್ಕುಗಳನ್ನು ಚಲಾಯಿಸುವ ಸ್ವಾರ್ತಿಗಳಾದರು.

ಹಲವಾರು ಸಿದ್ಧಾಂತಕಾರರ ಪ್ರಕಾರ ಆರ್ಯರ ಆಗಮನಕ್ಕೂ ಪೂರ್ವದಲ್ಲಿ ಈ ತೆರನಾದ ವಿಂಗಡಣೆ ಇರಲಿಲ್ಲ. ಆರ್ಯರಲ್ಲಿ ಶ್ರೇಷ್ಠತೆಯ ಭ್ರಮೆ ಇತ್ತು. ಈ ಶ್ರೇಷ್ಠತೆಗೆ ಅವರ ದೈಹಿಕ ಅಥವಾ ಜನಾಂಗೀಯ ಲಕ್ಷಣಗಳು ಪೂರಕವಾಗಿದ್ದವು. ಆರ್ಯ ದ್ರಾವಿಡರ ಘರ್ಷಣೆಯಲ್ಲಿ ಆರ್ಯರು ಶ್ರೇಷ್ಠರು, ದ್ರಾವಿಡರು ಕನಿಷ್ಠರಾದರು. ಈ ತೆರನಾದ ಜನಾಂಗೀಯ ವ್ಯತ್ಯಾಸವನ್ನು ನಾವು ಇಲ್ಲಿ ಕಾಣಬಹುದು.

"ಆರ್ಯರು ಭಾರತಕ್ಕೆ ಬರುವ ಮುನ್ನವೇ ಸಿಂಧೂನದಿಯ ತೀರದಲ್ಲಿ ವಾಸಮಾಡುತ್ತಿದ್ದ ಜನರಲ್ಲಿ ಬಗೆಬಗೆಯ ಕಸುಬುಗಳ ಆಧಾರದ ಮೇಲೆ ಕುಲಗಳ ಅಥವಾ ಶ್ರೇಣಿಗಳ ವಿಭಾಗಗಳಿದ್ದವೆಂದು ಹರಪ್ಪಾ, ಮಹೆಂಜೋದಾರೋ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ಈ ಸಂಶೋಧಕರ ಪ್ರಕಾರ ಪಂಡಿತರು, ಯೋಧರು, ವ್ಯಾಪಾರಗಾರರು, ಕುಶಲ ಕಲೆಗಾರರು ಅಂದರೆ ಗಾರೆಯರು, ನೇಯ್ಗೆಯವರು, ಅಕ್ಕಸಾಲಿಗರು ಮುಂತಾದವರು ಉಳಿದ ಕೆಲಸಗಳನ್ನು ಮಾಡುತ್ತಿದ್ದ, ಚಮ್ಮಾರರು, ಮೇದಾರರು, ರೈತರು, ಬೆಸ್ತರು ಮೊದಲಾದ ಪಂಗಡಕ್ಕೆ ಸೇರಿದವರು ಇದ್ದರು, ಸಿಂಧೂ ಆರ್ಯಸಂಸ್ಕೃತಿಯ ನಿರ್ಮಾಣವಾದ ಮೇಲೆ ಈ ಕುಲ ಭೇದಗಳು ಮುಂದುವರೆದವು" (ನಂಜಮ್ಮಣ್ಣಿ ಎಂ:೧೯೮೨:೧೦೩).

ಪ್ರಸಿದ್ಧ ಸಮಾಜಶಾಸ್ತ್ರಜ್ಞ ನೆಸ್‌ಫೀಲ್ಡ್‌ರವರು ವೃತ್ತಿಯ ಹಿನ್ನೆಲೆಯಲ್ಲಿ ಜಾತಿಯ ಮೂಲವನ್ನು ವಿವರಿಸಿದ್ದಾರೆ. ಮಾನವನ ಸಾಮೂಹಿಕ ಬದುಕಿಗೆ ವಿವಿಧ ವೃತ್ತಿಗಳನ್ನು ಪೂರೈಸುವ ಜನ ಬೇಕಾಗುತ್ತಾರೆ. ಯಾವುದೇ ಒಂದು ವೃತ್ತಿಯನ್ನು ಒಂದು ಜನರ ಗುಂಪು ನಿರಂತರವಾಗಿ ಅನುಸರಿಸಿಕೊಂಡು ಬಂದಾಗ ಆ ವೃತ್ತಿ ಸಮೂಹಗಳೇ ಒಳಬಾಂದವ್ಯ ರೂಪಿಸಿಕೊಂಡು ಜಾತಿಗಳಾದವು. ಆ ವೃತ್ತಿಯ ಹೆಸರು ಜಾತಿಗೆ ಬಂದವು ಅವುಗಳೇ ಕುಲ ಕಸುಬುಗಳಾದವು ಎಂದು ನೆಸ್‌ಫೀಲ್ಡ್ ವಿವರಿಸಿದ್ದಾರೆ.

ಘುರ‍್ರೆ, ರಿಸ್ಲೆ ಮುಂತಾದವರು ಜನಾಂಗೀಯ ಅಂಶಗಳ ಹಿನ್ನೆಲೆಯಲ್ಲಿ ಜಾತಿಯನ್ನು ವಿವರಿಸಿದ್ದಾರೆ, ಆರ್ಯರ ಆಗಮನ ಸ್ಥಳೀಯ ಜನಾಂಗದೊಡನೆ ಘರ್ಷಣೆ, ಸ್ತ್ರೀಯರ ಕೊರತೆ, ಮುಂತಾದವುಗಳೆಲ್ಲಾ ಜನಾಂಗಸಂಕರ ಸೃಷ್ಟಿಸಿದವು. ಅನುಲೋಮ–ಪ್ರತಿಲೋಮದಂತಹ ವಿವಾಹಗಳು ಜರುಗಿದವು. ಜನಾಂಗ ಮಿಶ್ರಣವೇ ಜಾತಿಗೆ ಕಾರಣ ಎಂಬ ವಾದವನ್ನು ಮಂಡಿಸಿದರು. ಅಭೆ–ದುಬೆಯವರು ಇದು ಬ್ರಾಹ್ಮಣರ ಕೃತ್ರಿಮ ಕೊಡುಗೆ ಎಂದು ವಾದಿಸಿದ್ದಾರೆ.

ಅನೇಕ ಸಮಾಜಶಾಸ್ತ್ರಜ್ಞರು ಐತಿಹಾಸಿಕ ಪುರಾವೆಗಳನ್ನು ಇಟ್ಟುಕೊಂಡು "ವೇದ ಪೂರ್ವ ಕಾಲದಲ್ಲಿ ಹಾಗೂ ವೇದಕಾಲದ ಮೊದಲ ಹಂತದಲ್ಲಿ (ಕ್ರಿ ಪೂ ೬೦೦ ರಿಂದ ಕ್ರಿ ಶ ೩೦೦) ಜಾತಿ

ಇರಲಿಲ್ಲ ವಿಶೇಷವಾಗಿ ಆದಿವಾಸಿ ಗುಂಪುಗಳಲ್ಲಿ ದ್ರಾವಿಡ ಜನಾಂಗದಲ್ಲಿ ಜಾತಿ ಇರಲಿಲ್ಲ. ಆರ್ಯರ ಆಗಮನ ಹಾಗೂ ಗಂಗಾನದಿ ಬಯಲಿನಲ್ಲಿ ಅವರು ವಾಸಿಸಲು ಪ್ರಾರಂಭಿಸಿದ ನಂತರ ಅನೌಪಚಾರಿಕ ಸ್ತರವಿನ್ಯಾಸ ರೂಪಗೊಂಡಿರಬಹುದು ಎಂದಿದ್ದಾರೆ. (ವೆಂಕಟೇಶ್ ಎಚ್ ಎಲ್:೨೦೧೦:೩೬). ಆದರೂ ಸಹ ಸಿಂಧೂ ಸಂಸ್ಕೃತಿಯಿದ್ದ ಕುಲಕಸುಬುಗಳು ಮೇಲು-ಕೀಳು ಎಂಬ ಬಾವವಿಲ್ಲದೆ ಅವರವರ ವೃತ್ತಿಯನ್ನು ಅವರು ನಿರ್ವಹಿಸುತ್ತಿದ್ದರು ಎನ್ನಬಹುದು.

ನಂಜಮ್ಮಣ್ಣಿಯವರು ಮುಂದೆ ವಿವರಿಸುತ್ತಾ "ಭಾರತದ ಜಾತಿಪದ್ಧತಿಗೂ, ವರ್ಣಧರ್ಮಕ್ಕೂ ಬಹಳ ಅಂತರವಿದೆ. ಒಂದು ದೃಷ್ಟಿಯಿಂದ ನೋಡಿದರೆ ಇವೆರಡಕ್ಕೂ ಪರಸ್ಪರ ಸಂಬಂಧವೇ ಇಲ್ಲ. ಜಾತಿಪದ್ಧತಿ ಬೆಳೆದದ್ದು ಕಸುಬುಗಳ ಆಧಾರದ ಮೇಲೆ ಸಮಾಜದ ಬೇಡಿಕೆಗಳು ಹೆಚ್ಚಾಗುತ್ತಾ ಹೆಚ್ಚುಹೆಚ್ಚು ಕುಲಕಸುಬುಗಳ ಅಗತ್ಯ ಕಂಡುಬಂದು ಜಾತಿಗಳ ಸಂಖ್ಯೆ ಕ್ರಮೇಣ ಹೆಚ್ಚಾಗುತ್ತಾ ಬಂದಿತು. ಋಗ್ವೇದದಲ್ಲಿ ರಾಜನ್ಯ, ರಥಕಾರ, ಬಡಗಿ, ಅಕ್ಕಸಾಲಿಗ, ರಜಕ, ಇತ್ಯಾದಿ ಅನೇಕ ಜಾತಿಗಳ ಹೆಸರು ಕಂಡುಬರುತ್ತದೆ. ಕ್ರಮೇಣ ನಾಗರಿಕತೆ ಬೆಳೆದಂತೆ ಜನಜೀವನ ಹೆಚ್ಚು ಸಂಕೀರ್ಣವಾದಂತೆ ಜಾತಿಗಳ ಸಂಖ್ಯೆ ಹೆಚ್ಚಾಯಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅನೇಕ ಕಸುಬುಗಳ, ಜಾತಿಗಳ ಹೆಸರು ಬರುತ್ತದೆ".

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಒಂದಲ್ಲಾ ಒಂದು ರೀತಿಯಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಜಾತಿಪದ್ಧತಿ ಕಂಡೂಕಾಣದಂತೆ ಬೆಳವಣಿಗೆ ಇಲ್ಲವೇ ತನ್ನ ಅಸ್ಥಿತ್ವವನ್ನು ಕಂಡುಕೊಂಡಿದೆ. ಇದರಿಂದ ಅಸ್ಪೃಶ್ಯತೆಯ ಕಳಂಕ ಹೆಚ್ಚಾಯಿತು. ಮಧ್ಯಕಾಲೀನ ಭಾರತದಲ್ಲಿ ವಿದೇಶಿಯರ ಆಕ್ರಮಣ ಅವರು ತಮ್ಮ ತತ್ವಗಳನ್ನು ಭಾರತೀಯರ ಮೇಲೆ ಹೇರಲು(ಇಸ್ಲಾಂ, ಕ್ರೈಸ್ಥ) ಪ್ರಾರಂಭಿಸಿದರು. ಇದೇ ಸಂದರ್ಭದಲ್ಲಿ ಅನೇಕ ಭಕ್ತಿ ಚಳುವಳಿಗಳು ಪ್ರಾರಂಭವಾದವು. ಸಾಮಾಜಿಕ ಕ್ರಾಂತಿಯ ಮೂಲಕ ಅನೇಕರು ಮತಾಂತರ ಹೊಂದಲು ಮುಂದಾದರು ಎನ್ನಬಹುದು.

ಈ ಮತಾಂತರ ಪ್ರಕ್ರಿಯೆಯಲ್ಲಿ ಸಮಾಜದಲ್ಲಿ ಯಾವ ಜಾತಿ ಅಥವಾ ಯಾವ ಸಮುದಾಯಗಳಿಗೆ ಸ್ಥಾನಮಾನದ ಕೊರತೆ ಇತ್ತೋ ಅಂತ ಸಮುದಾಯಗಳು ಉನ್ನತ ಸ್ಥಾನಕ್ಕೆ ಬರಲು ಮುಂದಾಗಿ ಮತಾಂತರ ಪ್ರಕ್ರಿಯೆಗೆ ಒಳಗಾದವು ಎನ್ನಬಹುದು. ಅದೇ ರೀತಿ ಭಕ್ತಿ ಚಳುವಳಿ ಸಂದರ್ಭದಲ್ಲಿ ಅಂದರೆ ೧೧ ಮತ್ತು ೧೨ನೇ ಶತಮಾನದಲ್ಲಿ ಅನೇಕ ಸಮುದಾಯಗಳು ಮತಾಂತರ ಪ್ರಕ್ರಿಯೆಗೆ ಒಳಗಾದವು ಎನ್ನಬಹುದು.

ದೇಶ ಅಥವಾ ಭಾರತದ ಗರಿಷ್ಠ ಎಲ್ಲಾ ಸಮುದಾಯಗಳು ಆದಿವಾಸಿ ಹಂತದಿಂದ ನಾಗರಿಕ ಸಮುದಾಯಕ್ಕೆ ಕಾಲಿಟ್ಟಿವೆ ಎನ್ನಬಹುದು. ಅದೇ ರೀತಿ ಲಾಳಗೊಂಡ ಸಮುದಾಯದವರು ಸಹ ಮೊದಲು ಪಶುಪಾಲನೆಯಿಂದ ಕೃಷಿಗೆ ವಾಲಿದವರು. ನಂತರ ಲಾಳಗೊಂಡರು ಸ್ಥಾಯಿಯಾಗಿ ನೆಲೆನಿಂತು ಗೌಡ-ಸರನಾಡಗೌಡ, ನಾಡಗೌಡರಾಗಿ ಲಿಂಗಾಯತರಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಪರಿವರ್ತನೆ ಹೊಂದುತ್ತಿರುವವರು, ಇಂದು ಕೃಷಿ ಇವರ ಪ್ರಧಾನ ಕಾಯಕವಾಗಿದೆ ಎಂದು ಈ ಅಧ್ಯಯನದಿಂದ ತಿಳಿದುಕೊಳ್ಳಬಹುದು.

ಸುಮಾರು ೫೦ ವರ್ಷಗಳಿಂದೀಚೆಗೆ ಸಂಸ್ಕೃತಿ ಕುರಿತಾದ ಸಂಶೋಧನೆಗೆ ಒತ್ತು ದೊರೆತಿರುವುದು ಹಾಗೂ ಇತ್ತೀಚಿನ ದಿನಗಳಲ್ಲಿ ಉಪಸಂಸ್ಕೃತಿಯನ್ನು ಕುರಿತಾಗಿ ಆಸಕ್ತಿ ಹೆಚ್ಚುತ್ತಿರುವುದು ಗಮನಾರ್ಹ ವಿಚಾರ. ಇಂತಹ ಕುತೂಹಲ ಅಧ್ಯಯನ ಮತ್ತು ಸಂಶೋಧನೆಗಳಿಂದ ಸಮಸ್ಯೆಗಳಾಗಿಯೇ ಉಳಿದಿರುವ ಎಷ್ಟೋ ವಿಚಾರಗಳ ಪರಿಶೀಲನೆಗೆ ಅವಕಾಶವಾಗುತ್ತಿದೆ. ಇದು ವಿಳಂಬಕ್ಕೆಡೆಕೊಡದಂತೆ ಆಗಲೇ ಬೇಕಾಗಿರುವ ತುರ್ತುಕೆಲಸ. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಗೊಂಡಿ ಭಾಷೆಯ ಬಗೆಗೆ ಶಂ ಬಾ ಜೋಶಿಯವರು ಮತ್ತು ಇನ್ನೂ ಹಲವು ಲೇಖಕರು ವಿದ್ವಾಂಸರು ಗಂಭೀರ ಚಿಂತನೆ ನಡೆಸಿದ್ದಾರೆ. ಭಾರತದ ಕೆಲವು ಪ್ರದೇಶಗಳಲ್ಲಿ ಇನ್ನೂ ಉಳಿದಿರುವ ಗೊಂಡಿ ಭಾಷೆಯು ದ್ರಾವಿಡ ವರ್ಗಕ್ಕೆ ಸೇರಿದೆ ಎಂಬ ವಿಚಾರದಲ್ಲಿ ಚರ್ಚೆಗಳು ಮುಂದುವರೆಯಬೇಕಾದ ಅವಶ್ಯಕತೆ ಇದೆ. ಗೊಂಡರು ಈಗಲೂ ಇದ್ದಾರೆಯೇ? ಮತ್ತು ಅವರು ತಮ್ಮ ಸಂಸ್ಕೃತಿಯನ್ನು ಇನ್ನೂ ಕಾಪಾಡಿಕೊಳ್ಳುತ್ತಿದ್ದಾರೆಯೇ? ಎನ್ನುವ ವಿಚಾರದ ಬಗ್ಗೆ ಸಂಶೋಧನೆ ಹಾಗೂ ಹೆಚ್ಚಿನ ಅಧ್ಯಯನಗಳು ನಡೆಯುವ ಅವಶ್ಯಕತೆ ಇದೆ.

ಕನ್ನಡ ನಾಡಿನ ಹಾಗೂ ಸಾಮಾಜಿಕ ಚರಿತ್ರೆಯಲ್ಲಿ ಬಸವಪೂರ್ವಯುಗ, ಬಸವಯುಗ, ಎರಡು ಮಹತ್ವದ ಕಾಲ ಘಟ್ಟಗಳು. ಬಸವಯುಗ ಕುರಿತಂತೆ ಸಂಶೋಧನ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಆಗಿದ್ದು ಇನ್ನೂ ಆ ಕೆಲಸ ಆಗುತ್ತಲೇ ಇದೆ. ಆದರೆ ಬಸವಪೂರ್ವಯುಗದ ಅಧ್ಯಯನ ಅಷ್ಟಾಗಿ ನಡೆಯದಿದ್ದುದು ಒಂದು ಕೊರತೆಯೆನಿಸಿದೆ. ಅದರಲ್ಲಿ ವೀರಶೈವ ಎಂಬ ಸಮುದಾಯದಲ್ಲಿ ಬೆರೆತು ಹೋಗಿರುವ ಲಾಳಗೊಂಡ ಎಂಬ ಸಮುದಾಯದ ಅಧ್ಯಯನ ಅಷ್ಟಾಗಿ ನಡೆದಿಲ್ಲ ಎಂದು ಹೇಳಬಹುದು.

ಒಕ್ಕಲಿಗರಂತೆಯೇ ಕಾಣಸಿಗುವ ಲಾಳಗೊಂಡ ಎಂಬ ಹೆಸರಿನ ಒಂದು ಜಾತಿ ಬಳ್ಳಾರಿಯಿಂದ ದೊಡ್ಡಬಳ್ಳಾಪುರದವರೆಗೂ ಮತ್ತು ತಮಿಳುನಾಡು, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿ ಪಸರಿಸಿ ಬದಲಾದ ಸಾಮಾಜಿಕ ಸ್ಥಿತಿಯಿಂದ ಲಾಳಗೊಂಡರು ಇಂದು ತಾವು ಲಿಂಗಾಯತರೆಂದು ಹೇಳಿಕೊಳ್ಳುತ್ತಾರೆ.

"ಭಾರತದ ಹಲವಾರು ಸಮುದಾಯಗಳು ಸಾಮಾಜಿಕ ಸ್ಥಾನಮಾನದ ಕೊರತೆಯಿಂದಾಗಿ ಮತಾಂತರ ಗೊಂಡಿರುವವು. ಅಂತಹವುಗಳಲ್ಲಿ ಲಾಳಗೊಂಡ ಬುಡಕಟ್ಟು ಲಿಂಗಾಯತ, ವೈಷ್ಣವ ಮತ್ತು ಕ್ರೈಸ್ಥ ಮತಗಳಿಗೆ ಮತಾಂತರಗೊಂಡಿದೆ. ಮತಾಂತರಗೊಳ್ಳಲು ಜನಪದ ವ್ಯಾಖ್ಯೆಗಳು ತಮ್ಮ ಸಾಮಾಜಿಕ ಸ್ಥಾನಮಾನದ ಕೊರತೆಯನ್ನು ತಿಳಿಸುತ್ತವೆ. ೧. ಒಂದು ಸೂಜಿ ೯ ಜನ ಹೊತ್ತವರು ೨. ಲಾಳಗೊಂಡರು ತಾಯಿಗಂಡರು. ಮೊದಲನೆ ವ್ಯಾಖ್ಯೆ ಆಸ್ತಿಯ ಪರಿಕಲ್ಪನೆಯನ್ನು ಪ್ರತಿನಿಧಿಸುತ್ತದೆ ಎರಡನೇ ವ್ಯಾಖ್ಯೆ ಇವರ ಸ್ವಭಾವವನ್ನು ತಗ್ಗಿಸಿ ಇವರನ್ನು ತಮ್ಮ ಹಿಡಿತದಲ್ಲಿರಿಸಿಕೊಳ್ಳಲು ಅನ್ಯರಿಂದ ವ್ಯವಸ್ಥಿತವಾಗಿ ಪ್ರಚಾರಪಡಿಸಲಾಯಿತು ಈ ಎರಡು ವಾಕ್ಯಗಳು ಲಾಳಗೊಂಡರಿಗೆ ಮಾನಸಿಕವಾಗಿ ನೋವನ್ನುಂಟು ಮಾಡಿದವು. ಸಾಮಾಜಿಕ ಅಭದ್ರತೆಯಿಂದ ಮುಕ್ತಿ ಹೊಂದಲು ಇವರು

ಅನಿವಾರ್ಯವಾಗಿ ಮತಾಂತರಗೊಂಡರು ಎಂದು ಕೆ ಎಂ ಮೇತ್ರಿ ಇವರು ಲಾಳಗೊಂಡರ ಚರಿತ್ರೆ ಎಂಬ ಲೇಖನದಲ್ಲಿ ತಿಳಿಸಿದ್ದಾರೆ".

"ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಲಿಂಗಾಯತರು ಶಿವನ ಆರಾಧಕರು. ಜೊತೆಗೆ ಇಷ್ಟಲಿಂಗ ಧರಿಸುತ್ತಾರೆ. ಅದು ಶಿವನ ಪ್ರತಿರೂಪ ಎಂದು ಭಾವಿಸುತ್ತಾರೆ. ಇವರಲ್ಲಿ ಹಲವಾರು ಉಪಜಾತಿಗಳಿವೆ ಎಲ್ಲಾ ಲಿಂಗಾಯತರು ಇಷ್ಟಲಿಂಗ ಧರಿಸುತ್ತಾರೆ. ಈ ಸಮುದಾಯ ೧೨ ನೇ ಶತಮಾನದಲ್ಲಿ ಬಸವೇಶ್ವರರಿಂದ ಸ್ಥಾಪನೆಯಾಯಿತೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಈ ಸಮುದಾಯ ಬೇರೆಕಡೆ ಹೆಚ್ಚು ಹರಡಲಿಲ್ಲ. ಎಂಥೋವನ್ (೧೯೨೨) ಪ್ರಕಾರ ಮೂಲತಃ ಇದು ಒಂದು ಬ್ರಾಹ್ಮಣರ ವಿರುದ್ಧ ಬಂಡಾಯವೆದ್ದ ಒಂದು ಸಮುದಾಯ ಮುಂದುವರೆದು ಹೇಳುತ್ತ ಅದು ಬರೀ ಬ್ರಾಹ್ಮಣರ ಶ್ರೇಣಿಕೃತೆಯನ್ನು ಮಾತ್ರ ತಿರಸ್ಕರಿಸಲಿಲ್ಲ. ಆದರೆ ಹಿಂದೂಧರ್ಮದ ಎಲ್ಲಾ ಜಾತಿವ್ಯವಸ್ಥೆಯ ವಿರುದ್ಧ ಬಂಡಾಯವೆದ್ದಿತು ಎಂದು ಹೇಳುತ್ತಾರೆ. ಈ ಧಾರ್ಮಿಕಚಳುವಳಿ ಬಸವೇಶ್ವರರ ನಾಯಕತ್ವದಲ್ಲಿ ಪ್ರಾರಂಭವಾಯಿತು" (ಪ್ರಶಾಂತ ಎಚ್ ಡಿ: ೨೦೦೦:೧೦೮). ಆದರೆ ಇವರು ಲಿಂಗಾಯತ ಸಮುದಾಯದ ಕೆಲವೊಂದು ಪಂಗಡಗಳ ಕುರಿತು ಮಾತ್ರ ವಿವರಿಸಿದ್ದು ಲಾಳಗೊಂಡರ ವಿವರಣೆಯನ್ನು ನೀಡಿರುವುದಿಲ್ಲ.

ಗೊಂಡ ಎಂಬ ಪದವು ಹೊರಡಿಸುವ ಅರ್ಥವು ಮೂಲತಃ ನಾಯಕ, ಒಡೆಯ, ಶಕ್ತಿಶಾಲಿ ಮನುಷ್ಯ, ಗುಂಪುಗಳ ಒಡೆಯ ಎಂದು ಸಾಮಾನ್ಯವಾಗಿ ಅರ್ಥೈಸಬಹುದು. ಇತಿಹಾಸ ಪೂರ್ವ ಕಾಲದಲ್ಲಿ ಮಾನವನ ಕೆಲಸಗಳು, ಕೇವಲ ಪ್ರಾಣಿಗಳ ಸಾಕಾಣಿಕೆ ಮತ್ತು ಅವುಗಳ ಪಾಲನೆಯಾಗಿತ್ತು. ಅಂದಿನ ಕಾಲದಲ್ಲಿ ಮಾನವನಿಗೆ ಉಪಯುಕ್ತ ಹಾಗೂ ಹೊಂದಾಣಿಕೆಯ ಪ್ರಾಣಿಗಳು ಎಂದರೆ, ಪಶುಗಳು ಹಾಗೂ ಕುರಿಗಳು. ಇವುಗಳಲ್ಲಿ ಕೆಲವರು ಪಶುಪಾಲನೆಯಲ್ಲಿ ತೊಡಗಿದರೆ ಮತ್ತೆ ಕೆಲವರು ಕುರಿಗಾಹಿಗಳಾದರು. ಹೀಗೆ ಸಂಘ ಜೀವಿಗಳಾಗಿ ಗುಂಪುಗಳನ್ನು ಕಟ್ಟಿಕೊಂಡು ಅರಣ್ಯದಲ್ಲಿ ವಾಸಿಸುವ ಒಂದೊಂದು ಗುಂಪಿಗೆ ಒಬ್ಬ ನಾಯಕನಿರುತ್ತಿದ್ದ ಅವನೇ "ಗೊಂಡ", ಗುಂಪಿನ ಒಡೆಯ. ಅವನೇ ಶಕ್ತಿಶಾಲಿ ಮನುಷ್ಯ, ಅವನ ನಿರ್ದೇಶನದಂತೆ ಆ ಗುಂಪು ಕೆಲಸ ಮಾಡಬೇಕಾಗುತ್ತಿತ್ತು. ಸದಾ ಸಂಚಾರಿಗಳಾಗಿರುತ್ತಿದ್ದ ಆ ಗುಂಪುಗಳು ಬರಬರುತ್ತಾ ಒಂದುಕಡೆ ಕಾಲೂರಿ ನಿಲ್ಲುವ ಪರಿಸ್ಥಿತಿ ನಿರ್ಮಾಣವಾಯಿತು. ಆಗ ಕ್ರಮೇಣ ಆ ಸ್ಥಳಗಳೆ ವಸತಿ ಪ್ರದೇಶಗಳಾದವು. ಹೀಗೆ ನೆಲೆಸಿದ ಸ್ಥಳಗಳು ಒಂದೊಂದು ಹೆಸರನ್ನು ಪಡೆದುಕೊಂಡವು ಆ ಗುಂಪುಗಳ ನಾಯಕನ ಹೆಸರಿನಿಂದಲೇ ಆ ಸ್ಥಳಗಳು ಕರೆಯಲ್ಪಡತೊಡಗಿದವು. 'ಭೈರ' ಎಂಬ ನಾಯಕನಿಂದ "ಭೈರಗೊಂಡನಹಳ್ಳಿ", 'ಮಾಚ'ಎಂಬ ನಾಯಕನಿಂದ "ಮಾಚಗೊಂಡನಹಳ್ಳಿ", ಹೀಗೆ ಈ ನಾಯಕರ ಹೆಸರುಗಳು ಕೂಡಾ ಗೊಂಡ ಪದಕ್ಕೆ ಅಂಟಿಕೊಂಡವು. ಹೀಗೆ ಈ ಗುಂಪುಗಳು ನೆಲೆಸಿದ ಕಡೆ ಗೊಂಡ ಎಂಬ ಪದವನ್ನು ಅಂಟಿಸಿಕೊಂಡ ಅನೇಕ ಊರುಗಳು ನಮಗೆ ಹೇರಳವಾಗಿ ಸಿಗುತ್ತವೆ.

ಹೀಗೆ ನಾಗರಿಕತೆ ಬೆಳೆದು ದೊಡ್ಡದೊಡ್ಡ ನಾಯಕರಾಗಿ ಪ್ರಾಂತೀಯ ಅಧಿಕಾರಿಗಳಾಗಿ, ರಾಜಮಹಾರಾಜರಾದ ಮೇಲೂ ಕೂಡಾ ಈ ಗೊಂಡ ಪದ ಅವರ ಹಿರಿಮೆ, ಕೀರ್ತಿಗೊಸ್ಕರವಾಗಿ

ಬಳಕೆಯಾಗುತ್ತಲೇ ಬಂದಿದೆ. ಉದಾ: ಪಾಂಡ್ಯ ಅರಸರನ್ನು "ಚೇರನಾಡ" ಗೊಂಡರೆಂದು, ರಾಷ್ಟ್ರಕೂಟರನ್ನು "ತೇಜೇಯ" ಗೊಂಡರೆಂದು, ಚೋಳ ಅರಸರನ್ನು "ಮಲೆಂದು" ಗೊಂಡರೆಂದು, ಗಂಗರನ್ನು "ಗಂಗೈ" ಗೊಂಡರೆಂದು, ಹೊಯ್ಸಳರನ್ನು "ತಲಕಾಡಿನ" ಗೊಂಡರೆಂದು, ನೊಳಂಬರನ್ನು "ನೊಳಂಬವಾಡಿ" ಗೊಂಡರೆಂಬ ಬಿರುದುಗಳಿಂದ ಅವರೆಲ್ಲ ಅಲಂಕೃತರಾಗಿದ್ದರೆಂದು ಹೇಳಬಹುದು. ದಕ್ಷಿಣಭಾರತದ ಸುಪ್ರಸಿದ್ಧ ರಾಜಮನೆತನಗಳ ಉದಯ ಹಾಗೂ ಆಡಳಿತ ಗೊಂಡ ಸಮುದಾಯದಿಂದಲೇ ನಿರ್ಮಾಣವಾಗಿದೆಯೆಂದು ಹೇಳಬಹುದು. ಇವರೆಲ್ಲ ತಮ್ಮ ಮೂಲ ವಂಶ ಹಾಗೂ ಧರ್ಮದ ಬಗ್ಗೆ ಅಪಾರ ಗೌರವವನ್ನು ಹೊಂದಿದ್ದರೆಂದು ಹೇಳಬಹುದು. ಆಂಧ್ರದ ಪ್ರಸಿದ್ಧ ರಾಜ ಮನೆತನವಾದ ಕಾಕತೀಯರನ್ನು "ರಾಜ" ಗೊಂಡರೆಂದು ಕರೆಯುತ್ತಿದ್ದರು. ದಕ್ಷಿಣಭಾರತವಷ್ಟೆ ಅಲ್ಲದೆ, ಉತ್ತರ ಮತ್ತು ಮಧ್ಯಭಾರತದ ಪ್ರಸಿದ್ಧ ರಾಜಮನೆತನಗಳಾದ ಮೌರ್ಯರು, ಯಾದವರು, ಗುಪ್ತರು ಕೂಡ ಗೊಂಡ ಗೋತ್ರದ ರಾಜಮನೆತನಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

ಕರ್ನಾಟಕದಲ್ಲಿ ಬಸವಣ್ಣನವರ ವೈಚಾರಿಕ ಕ್ರಾಂತಿ ಹಲವಾರು ಸಮಾಜೋ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾದುದು ಒಂದು ಐತಿಹಾಸಿಕ ಸತ್ಯ. ತಮ್ಮ ತಮ್ಮ ಕುಲಕಸುಬುಗಳನ್ನು ಜೀವನಾಧಾರವಾಗಿಸಿಕೊಂಡು ದುಡಿಯುವ ಜನ ಸಮುದಾಯವನ್ನು ಒಗ್ಗೂಡಿಸಿದ ಅಪೂರ್ವ ಕೀರ್ತಿ ಬಸವಣ್ಣನಿಗೆ ಸಲ್ಲಬೇಕು.

ಕೂಡು ಒಕ್ಕಲಿಗ "ಕುಡುಒಕ್ಕಲಿಗ" ಅಥವಾ "ಕುಡಿಒಕ್ಕಲಿಗ" ಎಂದು ಕರೆಯಿಸಿಕೊಳ್ಳುವ ಕರ್ನಾಟಕದ ಅಲ್ಪಸಂಖ್ಯಾತ ಜನಸಮುದಾಯ ಮೂಲತಃ ಕೃಷಿ ಮತ್ತು ಕೃಷಿ ಚಟುವಟಿಕೆಗಳನ್ನೆ ಅವಲಂಬಿಸಿದ ಒಂದು ವಿಶಿಷ್ಟ ಜನಸಮುದಾಯ. ಮಣ್ಣು, ಹೊಲ, ಎತ್ತು, ಎಮ್ಮೆ, ಆಕಳು, ಆಡು, ಕುರಿ, ನೇಗಿಲ, ಮಿಣಿ ಈ ಮುಂತಾದ ಕೃಷಿ ಲೋಕದಲ್ಲೇ ಬದುಕು ಸಾಗಿಸುತ್ತಿದ್ದ ಈ ಜನಸಮುದಾಯ ಸಂಸ್ಕೃತಿಯ ಮೂಲದಲ್ಲಿರುವ ಪಳೆಯುಳಿಕೆಗಳನ್ನು ಅತ್ಯಂತ ಜೀವಂತವಾಗಿ ಜತನದಿಂದ ಕಾಯ್ದುಕೊಂಡು ಬಂದಿರುವುದನ್ನು ಕಂಡು ಒಕ್ಕಲಿಗರನ್ನು ಅಧ್ಯಯನ ಮಾಡಿರುವುದನ್ನು ಸಮಾಜ ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ.

ಇತಿಹಾಸದ ಪುಟಗಳನ್ನು ಹೆಕ್ಕಿನೋಡಿ ಅದರಲ್ಲಿ ಬರುವ ವಿಷಯಗಳನ್ನು ವಿಶ್ಲೇಷಿಸಿದರೆ ಒಂದು ಸಂಗತಿ ಸ್ಪಷ್ಟ. ಇತಿಹಾಸದ ಆಧಾರಗಳಿಂದ ಹೇಳುವುದಾದರೆ ಗೊಂಡಾರಣ್ಯದಲ್ಲಿ ಬದುಕಿದ್ದ ಆದಿವಾಸಿಗಳು ಭಾರತದ ಪ್ರಾಚೀನ ಜನಸಮುದಾಯ. ಗೊಂಡಾರಣ್ಯ ಎಂಬುದು ತುಂಬಾ ವಿಸ್ತಾರವಾದ ಪ್ರದೇಶವನ್ನು ಹೊಂದಿ ಖಂಡಾಂತರ ವ್ಯಾಪ್ತಿಯನ್ನು ಪಡೆದುದು ಸ್ಪಷ್ಟವಿದೆ. ಈ ಗೊಂಡ ಅರಣ್ಯದ ಮೂಲ ನಿವಾಸಿಗಳು ಕಾಲ ವಿಸ್ತಾರವಾದ ಪರದಿಯಲ್ಲಿ ಹಲವಾರು ಧರ್ಮ, ಸಂಸ್ಕೃತಿ ಮತ್ತು ಜೀವನ ವಿಧಾನವನ್ನು ರೂಡಿಸಿಕೊಂಡ ಮೇಲೆ ಬೇರೆ ಬೇರೆ ಜನಾಂಗಗಳಾಗಿ, ಸಮುದಾಯಗಳಾಗಿ ಆಕಾರವನ್ನು ಪಡೆದುಕೊಂಡರು. ಹೀಗೆ ಗೊಂಡಾರಣ್ಯ ಮೂಲ ನಿವಾಸಿಗಳಿಗೂ 'ಕುಡುಒಕ್ಕಲಿಗ' ಸಮುದಾಯಕ್ಕೂ ಅತ್ಯಂತಿಕ ಸಂಬಂಧವಿರುವುದನ್ನು ಸಮಾಜವಿಜ್ಞಾನಿಗಳು ಗುರುತಿಸಿದ್ದಾರೆ. ಇವತ್ತೂ ಕೂಡ ಕುಡುಒಕ್ಕಲಿಗ ಜನಸಮುದಾಯದಲ್ಲಿ ಕಾಣಬರುವ ಲಾಳಗೊಂಡ, ರಾಜಗೊಂಡ, ಸಾಯಗೊಂಡ, ಹೆಳವಗೊಂಡ, ಮಾಳಗೊಂಡ, ಜಾಯಗೊಂಡ ಮುಂತಾದ(ಅಡ್ಡಹೆಸರು)ಗಳಿರುವುದು ಗೊಂಡರಿಗೂ

ಮತ್ತು ಕುಡುಒಕ್ಕಲಿಗರಿಗೂ ಇರುವ ಜನಾಂಗೀಯ ಸಂಬಂಧಗಳನ್ನು ಸ್ಪಷ್ಟ ಪಡಿಸುತ್ತದೆ. ಲಾಳಗೊಂಡರು ಉತ್ತರಕರ್ನಾಟಕದಲ್ಲಿ ವ್ಯಾಪಕವಾಗಿದ್ದರೆ, ದಕ್ಷಿಣಕರ್ನಾಟಕದಲ್ಲಿ ಕುಡುಒಕ್ಕಲಿಗರು ಹೇರಳವಾಗಿ ಬೇರು ಬಿಟ್ಟಿರುವುದನ್ನು ಗುರುತಿಸುತ್ತೇವೆ. ಕರ್ನಾಟಕ ರಾಜ್ಯ ಒಂದರಲ್ಲಿಯೇ ಸುಮಾರು ಐದುನೂರಕ್ಕು ಹೆಚ್ಚಿನ ಇಂತಹ ಸ್ಥಳನಾಮ ದೊರಕುವುದನ್ನು ಕಾಣುತ್ತೇವೆ ಅಷ್ಟೇ ಅಲ್ಲ, ಗೊಂಡ ಬುಡಕಟ್ಟಿನಿಂದ ಕವಲೊಡೆದು, ಕುಡಿಯೋಡೆದ ಕುಡುಒಕ್ಕಲಿಗ ಮತ್ತು ಲಾಳಗೊಂಡರಲ್ಲಿ ಹಾಗೂ ಅವರ ಜೀವನ ಪದ್ಧತಿಯಲ್ಲಿ ಹಲವಾರು ಹೋಲಿಕೆ ಇರುವುದನ್ನು ಸಮುದಾಯಿಕ ಅಧ್ಯಯನದ ಇತಿಹಾಸಕಾರರು ಹೇಳುವುದನ್ನು ಇಲ್ಲಿ ಗಮನಿಸಬೇಕು.

ಜಗತ್ತಿನ ಖಂಡಾಂತರ ಅಧ್ಯಯನ ಸಂದರ್ಭದಲ್ಲಿ ಒಂದು ಅಂಶ ಸ್ಪಷ್ಟವಾಗುತ್ತದೆ. ಅದೆಂದರೆ ಉತ್ತರಅಮೇರಿಕ ಮತ್ತು ಯುರೋಪ್‌ಖಂಡಗಳನ್ನು ಹೊರತುಪಡಿಸಿ ಆಫ್ರಿಕಾ, ದಕ್ಷಿಣಅಮೇರಿಕ, ಆಸ್ಟ್ರೇಲಿಯಾ, ಮತ್ತು ಅಂಟಾರ್ಟಿಕ ಖಂಡಗಳು ಗೊಂಡರ ಖಂಡಗಳೆಂದು ಪ್ರಸಿದ್ಧಿ (ಗೊಂಡವನ್- ಗೊಂಡ ಜನರು ವಾಸಿಸುವ ಪ್ರದೇಶ) ಪಡೆದಿದ್ದವು.

"ಹಾಲುಮತ ಪುರಾಣದಲ್ಲಿ ಕೂಡ ಕುರುಬರು ಮತ್ತು ಕುಡುಒಕ್ಕಲಿಗರ ಸಂಬಂಧದ ಪ್ರಸ್ತಾಪ ಬರುವುದು ಗಮನಾರ್ಹ. ಹಾಲುಮತದ ವಿವರಣೆ ಪ್ರಕಾರ ಕುಡುಒಕ್ಕಲಿಗ, ಕುರುಬ ಮತ್ತು ರೆಡ್ಡಿ ಜನಾಂಗಗಳ ನಡುವೆ ಸಹ ಸಂಬಂಧ ಇರುವುದನ್ನು ಗಮನಿಸಬಹುದು. ಹೀಗೆ ಗೊಂಡ ಮೂಲ ನಿವಾಸಿಗಳೆ ಕಾಲ, ಸಂದರ್ಭ, ಸನ್ನಿವೇಶಗಳ ಅವಶ್ಯಕತೆಗಳಿಗೆ ತಕ್ಕಂತೆ ರೂಪಾಂತರ ಹೊಂದುತ್ತ ಸಾಗಿರಬೇಕೆಂದು ಸಾಂಸ್ಕೃತಿಕ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಈ ಗೊಂಡ ಜನಸಮುದಾಯದ ಪಳೆಯುಳಿಕೆಗಳು ವರ್ತಮಾನದ ಕುಡುಒಕ್ಕಲಿಗ ಜನಸಮುದಾಯದಲ್ಲಿ ಇಂದಿಗೂ ಕಂಡುಬರುವುದನ್ನು ಗಮನಿಸುತ್ತೇವೆ. ಇಂದಿನ ಕಾಮಗೊಂಡ, ಜನಗೊಂಡ, ಮುಡಗೊಂಡ, ಗೌರಗೊಂಡ, ಎಲಗೊಂಡ, ಜಾಯಗೊಂಡ, ಮಾಳಗೊಂಡ, ಭೈರಗೊಂಡ, ಬೀರಗೊಂಡ, ಭದ್ರಗೊಂಡ, ಬಿರಾಗೊಂಡ, ಆಡಿಗೊಂಡ, ಸಂಕಗೊಂಡ, ಚನಗೊಂಡ, ಲಕ್ಕಗೊಂಡ, ಮೂಲಗೊಂಡ, ಗಂಗರಗೊಂಡ ಹೀಗೆ ಗೊಂಡ, ಲಾಳಗೊಂಡ, ಗೊಂಡ ಒಕ್ಕಲ, ಕೂಡು ಒಕ್ಕಲಿಗರಾಗಿ ಕಾಣಿಸಿಕೊಂಡಿದ್ದನ್ನು ಗಮನಿಸುತ್ತೇವೆ"(ಕಲಬುರ್ಗಿ ಎಂ ಎಂ, ೦೮)

ಈ ಮೇಲೆ ಚರ್ಚಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಮುಂದುವರೆದಿದೆ. ಈ ನಿಟ್ಟಿನಲ್ಲಿ ಸಾಹಿತ್ಯ ಪರಾಮರ್ಶನ ಮಾಡಲಾಗಿದೆ. ಇಲ್ಲಿ ಪ್ರಸ್ತುತ ಸ್ಥಿತಿ ಕುರಿತು ಮತ್ತು ಅದು ನಡೆದು ಬಂದ ಹಾದಿಯನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲು ಪ್ರಯತ್ನ ಮಾಡಲಾಗಿದೆ.

**೧.೨ ಇದೂವರೆಗಿನ ಸಾಹಿತ್ಯಾವಲೋಕನ (ಈ ಹಿಂದೆ ನಡೆದ ಅಧ್ಯಯನಗಳು)**

ಲಾಳಗೊಂಡರ ಚಲನೆ ಮತ್ತು ಸ್ಥಿತ್ಯಂತರದ ಕುರಿತು ಸಂಶೋಧನೆ ಆರಂಭಿಸಿದಾಗ ಈ ಹಿಂದೆ ನಡೆದ ಅಧ್ಯಯನಗಳ ಬಗ್ಗೆ ತಿಳಿಯುವುದು ಮತ್ತು ಅವುಗಳನ್ನು ನಮ್ಮ ಅಧ್ಯಯನದಲ್ಲಿ ಕೇಂದ್ರೀಕರಿಸುವ ಅಗತ್ಯವಿದೆ.

ಲಾಳಗೊಂಡ ಸಮುದಾಯದ ಕುರಿತಾಗಿ ನಡೆದ ಅಧ್ಯಯನಗಳು ತುಂಬಾ ಕಡಿಮೆ, ಕಾರಣ ಲಾಳಗೊಂಡ ಎಂಬ ಸಮುದಾಯದ ಹೆಸರು ಸಹ ಸಂವಿಧಾನದ ಮೀಸಲಾತಿ ಪಟ್ಟಿಯಲ್ಲಿ ಕಾಣ ಸಿಗುವುದಿಲ್ಲ. ಏಕೆಂದರೆ ಲಾಳಗೊಂಡರು ವೀರ ಶೈವದಲ್ಲಿ ಸೇರಿದ್ದು ಅದರ ಪರಿಚಯವು ಸಹ ಸಮಾಜಕ್ಕಿಲ್ಲವಾಗಿದೆ. ಇವೆಲ್ಲಾ ಅಂಶಗಳನ್ನು ಆಧರಿಸಿ ಸಾಹಿತ್ಯಾವಲೋಕನ ಮಾಡಲಾಗಿದೆ. ಲಾಳಗೊಂಡರ ಕುರಿತಾಗಿ ಈವರೆಗೆ ಅನೇಕ ವಿದ್ವಾಂಸರು ಅಧ್ಯಯನಗಳನ್ನು ಮಾಡಿದ್ದಾರೆ. ಈ ಅಧ್ಯಯನಗಳೆಲ್ಲವು ಶೈವ, ವೀರಶೈವ, ಗೊಂಡರ ಐತಿಹಾಸಿಕವಾಗಿ ಕೇಂದ್ರೀಕರಿಸಿಕೊಂಡು ಅವುಗಳನ್ನು ಹಿಡಿದಿಡುವ ನಿಟ್ಟಿನಲ್ಲಿ ಆ ಅಧ್ಯಯನಗಳು ಸೀಮಿತಗೊಳಿಸಿಕೊಂಡಿದ್ದು ಇದೆ ಎಂಬುವುದಾಗಿ ಕಂಡುಬರುತ್ತದೆ. ಅಂತಹ ಕೆಲವೊಂದು ಅಧ್ಯಯನಗಳು ಈ ರೀತಿಯಾಗಿವೆ. ಲಾಳಗೊಂಡರ ಸಂಪ್ರದಾಯಗಳ ಕುರಿತು ಬುಖಾನನ್ ಫ್ರಾನ್ಸಿಸ್, ಕೆ ಎಂ ಮೇತ್ರಿ ಇವರ ಗೊಂಡರು ಲಾಳಗೊಂಡರು, ಪಂಪನಗೌಡ ಇವರ ಗೊಂಡ್ವಾನ್ ಸಂಸ್ಕೃತಿ, ಜಿ ವೀರಭದ್ರಗೌಡ ಇವರ ಲಾಳಗೊಂಡ ಲಿಂಗಾಯುತರು. ಎಂಬ ಕೃತಿಗಳಲ್ಲಿ ಇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ.

೧. ಜಿ ವೀರಭದ್ರಗೌಡ ಇವರು ಲಾಳಗೊಂಡ ಲಿಂಗಾಯತ ಎಂಬ ಲೇಖನವನು ರಚಿಸಿದ್ದು ಇದು ಎಂ ಎಂ ಕಲಬುರ್ಗಿ ಇವರ ಸಂಪಾದಕತ್ವದಲ್ಲಿ ಲಿಂಗಾಯತ ಉಪಪಂಗಡಗಳ ದಾಖಲೀಕರಣ ಮಾಲೆಯಿಂದ ಅನಾವರಣಗೊಂಡಿದೆ. ಲೇಖಕರು ಸಮುದಾಯದ ಚಿತ್ರಣವನ್ನು ನೀಡುತ್ತಾ ಲಾಳಗೊಂಡ ಸಮುದಾಯದ ಹಿನ್ನೆಲೆ, ಪದ ನಿಶ್ಪತ್ತಿ, ಪರ್ಯಾಯ ನಾಮಗಳನ್ನು ಅಮೂಲಾರ್ಗವಾಗಿ ಕಟ್ಟಿಕೊಟ್ಟಿದ್ದಾರೆ. ಲಾಳಗೊಂಡರ ಕುರಿತಾದ ಒಂದು ಲೇಖನವಾಗಿದೆ ಇದು ಉತ್ತರ ಕರ್ನಾಟಕದ ಭಾಗಗಳಾದ ಬಳ್ಳಾರಿ, ರಾಯಚೂರು ಹೆಚ್ಚಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಇವರ ಅಧ್ಯಯನ ಕೆಲವೇ ಕೆಲವು ಜಿಲ್ಲೆಗಳನ್ನು ಅನುಲಕ್ಷಿತಗೊಂಡಿದೆ.

ಜಿ ವೀರಭದ್ರಪ್ಪ ಇವರ ಅಧ್ಯಯನವನ್ನು ಗಮನಿಸಿದಾಗ ಲಾಳಗೊಂಡರು ಮಧ್ಯಪ್ರದೇಶದಿಂದ ಬಂದವರೆಂದು ಇವರನ್ನು ಗೊಂಡ ಸಮುದಾಯಕ್ಕೆ ಸೇರಿದವರೆಂದು ಸಮೀಕರಿಸಿ ಹೇಳಿದ್ದಾರೆ. ಆದರೆ ಗೊಂಡರಲ್ಲಿ ರಾಜಗೊಂಡ, ಗೊಂಡರು ಮೀಸಲಾತಿ ಪಟ್ಟಿಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿರುವರು. ಆದರೆ ಲಾಳಗೊಂಡರು ಮಿಸಲಾತಿ ಪಟ್ಟಿಯಲ್ಲಿ ಇಲ್ಲ. ಇದರ ಕುರಿತಾಗಿ ಎಲ್ಲಿಯೂ ಉಲ್ಲೇಖವಿಲ್ಲ ಇನ್ನೊಂದು ಕಡೆ ಲಾಳಗೊಂಡರು ಕುರುಗೋಡು ನೀಲಮ್ಮನ ವಂಶಕ್ಕೆ ಸೇರಿದವರೆಂದು ಬಿಂಬಿಸಲಾಗಿದೆ. ಈ ಕುರಿತು ಅಧ್ಯಯನದ ಅಂಶಗಳಲ್ಲಿ ಮಿತಿಗಳಿವೆಯಾದರು ಲಾಳಗೊಂಡರ ಕುರಿತಾಗಿ ಅಧ್ಯಯನ ಮಾಡಿದವರಲ್ಲಿ ಇವರು ಒಬ್ಬರು ಇದು ಸಂಶೋಧನೆಗೆ ಮಾರ್ಗದರ್ಶನ ನೀಡುವುದರಲ್ಲಿ ಎರಡು ಮಾತಿಲ್ಲ. ಈ ಕೃತಿಯಲ್ಲಿ ಲಿಂಗಾಯತ ಒಳಪಂಗಡಗಳ ಸಾಮಾಜಿಕ ಅಧ್ಯಯನ ಮಾಡಲಾಗಿದೆ. ಇಲ್ಲಿ ಪ್ರಮುಖವಾಗಿ ಸಮಾಜದ ಒಳವಿನ್ಯಾಸ, ಸಾಮಾಜಿಕ, ಧಾರ್ಮಿಕ ಆಚರಣೆ, ಉಡುಗೆ ತೊಡಿಗೆ, ನಂಬಿಕೆ, ಕೌಟುಂಬಿಕ, ಸಾಮಾಜಿಕ ಸಂಬಂಧ, ಆಹಾರ ಪದ್ಧತಿ ಇತ್ಯಾದಿಗಳ ಬಗೆಗೆ ಬೆಳಕು ಚೆಲ್ಲುವಂತಹ ಒಂದು ಉತ್ತಮ ಕೃತಿಯಾಗಿದೆ. ಇನ್ನೊಂದು ಮುಖ್ಯ ಸಂಗತಿಯೆಂದರೆ, ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಈ ಉಪಪಂಗಡಗಳು ತೀವ್ರ ಬದಲಾಗುತ್ತಿವೆ.

ಸಮಾಜದ ಸ್ವರೂಪ ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಒಂದಿಷ್ಟು ಭಿನ್ನವಾಗಿರುತ್ತವೆ. ಕೆಲವೊಮ್ಮೆ ಒಂದೇ ಪ್ರದೇಶದಲ್ಲಿ, ಒಂದೇ ಊರಿನಲ್ಲಿ ಒಂದಿಷ್ಟು ವಿಭಿನ್ನವಾಗಿರುತ್ತವೆ. ಈ ಅಂಶಗಳನ್ನು ಗ್ರಂಥದಲ್ಲಿ ತೆರೆದಿಡಲಾಗಿದೆ. ಇಲ್ಲಿ ಪ್ರಮುಖವಾಗಿ ಲಿಂಗಾಯುತವೆನ್ನುವುದು ಒಂದು ಜನಾಂಗವಲ್ಲ, ಅದು ಒಂದು ಸಮುದಾಯ. ಇಲ್ಲಿ ಬೇರೆಬೇರೆ ಸಮುದಾಯಗಳು ಮತಾಂತರಗೊಂಡಿವೆ. ಈ ಕೃತಿಯಲ್ಲಿ ಇನ್ನೂ ಅನೇಕ ಉಪಪಂಗಡಗಳನ್ನು ಶೋಧಿಸಿ ವಿಷಯವನ್ನು ಪೂರ್ಣಗೊಳಿಸಬಹುದಾಗಿತ್ತು. ಈ ಉಪಪಂಗಡಗಳ ದಾಖಲೀಕರಣದ ಸಂದರ್ಭದಲ್ಲಿ ಅತ್ಯಂತ ಕೆಲವು ಗಂಭೀರವಾಗಿ ಚರ್ಚಿಸುವ ಸೂಕ್ಷ್ಮ ವಿಷಯಗಳನ್ನು ಇಲ್ಲಿ ಹೆಚ್ಚು ಸಂಕ್ಷಿಪ್ತವಾಗಿ ವಿವರಣೆ ನೀಡಲಾಗಿದೆ. ಈ ಕೃತಿಯ ಹಿನ್ನೆಲೆಯಲ್ಲಿ ಲಾಳಗೊಂಡರು ಲಿಂಗಾಯುತರಲ್ಲಿ ಹೇಗೆ ಉಪಪಂಗಡವಾಯಿತು ಎಂಬುವುದನ್ನು ತಿಳಿಸಲಾಗಿದೆ.

೨. ಎಂ ವ್ಹಿ ಹೋರಿ ಇವರು ಗೊಂಡರ ಸಂಸ್ಕೃತಿಗಳು ಮತ್ತು ಧೃವೀಕರಣ ಎಂಬ ಪುಸ್ತಕದಲ್ಲಿ ಗೊಂಡರು ಮತ್ತು ಇತರ ಲಿಂಗಾಯುತ ಉಪಪಂಗಡಗಳಾಗಿರುವ ನೊಣಬ, ಕುಡು ಒಕ್ಕಲಿಗ, ಲಾಳಗೊಂಡ ಇವರಿಗೆ ಸಂಬಂಧವಿದೆಯೆಂದು ತಿಳಿಸಿದ್ದಾರೆ. ಇವರ ಅಧ್ಯಯನವು ಸಂಸ್ಕೃತಿಯನ್ನು ಆಧರಿಸಿದೆ ಇದರಲ್ಲಿ ಲಾಳಗೊಂಡ ನೊಣಬ, ಕುಡು ಒಕ್ಕಲಿಗರು ಗೊಂಡರಿಂದ ಕವಲೊಡೆದ ಸಮುದಾಯಗಳಾಗಿವೆ ಎಂದು ಹೇಳಿದ್ದಾರೆ ಇದರಲ್ಲಿ ಲಾಳಗೊಂಡರು ಗೊಂಡ ಬುಡಕಟ್ಟಿಗೆ ಸೇರಿದವರೆಂದು ತಿಳಿಸಿರುವುದರಿಂದ ಕುಲಶಾಸ್ತ್ರೀಯ ಅಧ್ಯಯನ ಮಾಡುವ ಅಗತ್ಯವಿದೆ. ತಮ್ಮ ಲೇಖನದಲ್ಲಿ ಲಾಳಗೊಂಡರು ಗೊಂಡರಿಗೆ ಇರುವ ಇನ್ನೊಂದು ಹೆಸರು ಎಂದು ತಿಳಿಸಿದ್ದಾರೆ. ದಕ್ಷಿಣಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ನೊಳಂಬ ಕುಡಿಯರೆಂದರೆ ಉತ್ತರಕರ್ನಾಟಕ, ಮಹಾರಾಷ್ಟ್ರ ರಾಜ್ಯದಲ್ಲಿ ಕುಡಿಒಕ್ಕಲಿಗರೆಂದು, ಹೈದರಾಬಾದ್ ಕರ್ನಾಟಕದಲ್ಲಿ ಲಾಳಗೊಂಡರೆಂದು ತಿಳಿಸಿದ್ದಾರೆ. ಇವರು ತಮ್ಮ ಕೃತಿಯಾದ "ಗೊಂಡ ಸಂಸ್ಕೃತಿಯ ಕವಲುಗಳು ಮತ್ತು ಧೃವೀಕರಣ"ದಲ್ಲಿ ಕುಡಿಒಕ್ಕಲಿಗರು ಮತ್ತು ನೊಳಂಬರ ಕುರಿತು ಹೆಚ್ಚು ವಿವರಣೆ ಹೇಳಿದ್ದು ಲಾಳಗೊಂಡರ ಕುರಿತು ಸಂಕ್ಷಿಪ್ತ ವಿವರಣೆ ನೀಡಿದ್ದಾರೆ. ಹೀಗಿದ್ದರು ಐತಿಹಾಸಿಕ ಹಿನ್ನೆಲೆಯನ್ನು ತಿಳಿಸಿದ್ದರಿಂದ ಇನ್ನೂ ಹೆಚ್ಚಿನ ಹಿನ್ನೆಲೆ ಮತ್ತು ಚರಿತ್ರೆಯನ್ನು ಕೊಂಡೊಯ್ಯುವ ಪ್ರಯತ್ನ ಮಾಡಲಾಗಿದೆ.

೩. ಸಿದ್ದಣ್ಣ ಉತ್ನಾಳ್ ಇವರು ತಮ್ಮ ಕೃತಿಯಾದ "ಕುಡುಒಕ್ಕಲಿಗರು ಮತ್ತು ಲಾಳಗೊಂಡರು" ಎಂಬ ಲೇಖನದಲ್ಲಿ ಗೊಂಡರು, ಕುಡುಒಕ್ಕಲಿಗರು, ಲಾಳಗೊಂಡರು ಇವರೆಲ್ಲರು ಒಂದೇ ಸನ್ನಿವೇಶಗಳ ಅವಶ್ಯಕತೆಗಳಿಗೆ ತಕ್ಕಂತೆ ರೂಪಾಂತರ ಹೊಂದುತ್ತಾ ಬಂದಿದ್ದಾರೆ. ರಾಜಗೊಂಡ, ಗೌರಗೊಂಡ, ಜಲಗೊಂಡ, ಜಾಯಗೊಂಡ, ಮಾಳಗೊಂಡ, ಬೈರಗೊಂಡ, ಬೀರಗೊಂಡ, ಹೀಗೆ 'ಗೊಂಡ' ಲಾಳಗೊಂಡ, ಗೊಂಡೊಕ್ಕಲ, ಕುಡುಒಕ್ಕಲ ಹೀಗೆ ರೂಪಾಂತರವಾಗಿರಬೇಕೆಂದು ತಿಳಿಸಿದ್ದಾರೆ.

ಈ ಕುರಿತು ಇವರು ಗೊಂಡರು, ಕುಡುಒಕ್ಕಲಿಗರು ಮತ್ತು ಲಾಳಗೊಂಡರಿಗಿರುವ ಸಾಮ್ಯತೆಯನ್ನು ಗುರುತಿಸಿದ್ದಾರೆ, ಇದರಿಂದ ಪಶುಪಾಲನೆ ಮತ್ತು ಕೃಷಿ ಹೀಗೆ ವೈಜ್ಞಾನಿಕ ಮನೋಭೂಮಿಕೆ ಹಾಗೂ ಇತಿಹಾಸವನ್ನು ಅರಿಯಲು ಉತ್ತಮ ಮಾರ್ಗಸೂಚಿಯಾಗಿದೆ.

೪. ಕೆ ಎಂ ಮೇತ್ರಿ, ಮೃತ್ಯುಂಜಯ ರುಮಾಲೆ ಇವರು "ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ" ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರಕಟಿಸಿದ ಕಿರು ಪುಸ್ತಕದಲ್ಲಿ ಲಾಳಗೊಂಡರ ಲಾಳಗೊಂಡ ಪದದ ಹಿನ್ನೆಲೆ, ಪ್ರಬೇಧಗಳು, ಸಂಪ್ರದಾಯಗಳು, ಲಾಳಗೊಂಡರ ಜನಸಂಖ್ಯೆ ಇವುಗಳ ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಹಾಗೆಯೇ ಕುರುಗೋಡು ನೀಲಮ್ಮನ ಹಿನ್ನೆಲೆ, ವಂಶಾವಳಿಯ ಕುರಿತು ತಿಳಿಸಿದ್ದಾರೆ. ಕೆ ಎಂ ಮೇತ್ರಿ ಇವರು ಸುಮಾರು ಆರು ಪುಟದಷ್ಟು ಲಾಳಗೊಂಡರ ಕುರಿತು ಲೇಖನವನ್ನು ಪ್ರಕಟಿಸಿದ್ದಾರೆ. ಈ ಒಂದು ಕೃತಿ ಮಾತ್ರ ಲಾಳಗೊಂಡರಿಗೆ ರಚಿತವಾದ ಮೊದಲ ಕೃತಿಯಾಗಿದೆ. ಲಾಳಗೊಂಡರ ಹಿನ್ನೆಲೆ, ಪದ ನಿಶ್ಪತ್ತಿ, ಲಾಳಗೊಂಡರ ಸ್ಥಿತ್ಯಂತರದ ಕುರಿತು ಅಮೂಲಾಗ್ರವಾಗಿ ಕಟ್ಟಿಕೊಟ್ಟಿದ್ದಾರೆ ಇವರ ಇಡೀ ಜನಸಂಖ್ಯೆಯನ್ನು ಸಹ ಇವರು ಅಂಕಿಅಂಶಗಳಲ್ಲಿ ದಾಖಲಿಸಿದ್ದಾರೆ. ಹೀಗಾಗಿ ಲಾಳಗೊಂಡ ಸಮುದಾಯದವರು ಎಲ್ಲಿ ವಾಸಿಸುತ್ತಿರುವರು ಎಂಬ ಮಾಹಿತಿ ಅಧ್ಯಯನಕ್ಕೆ ತುಂಬಾ ಸಹಾಯಕವಾಗಿದೆ. ಈ ಒಂದು ಲೇಖನವನ್ನು ಆಧಾರವಾಗಿಟ್ಟು ಕೊಂಡು ಇನ್ನುಳಿದ ಎಲ್ಲಾ ಅಧ್ಯಯನಗಳು ಬೆಳಕಿಗೆ ಬಂದಿವೆ.

ಕೆ ಎಂ ಮೇತ್ರಿ ಇವರ ಅಧ್ಯಯನವನ್ನು ಗಮನಿಸಿದಾಗ ಲಾಳಗೊಂಡರು ಗೊಂಡ ಸಮುದಾಯಕ್ಕೆ ಸಮೀಕರಿಸುವ ದೃಷ್ಟಿಕೋನವನ್ನು ಹೊಂದಿರುವರು ಗೊಂಡ, ರಾಜಗೊಂಡ, ಲಾಳಗೊಂಡ ಹೆಸರುಗಳು ಗೊಂಡರ ಪರ್ಯಾಯ ಪದಗಳು ಎಂದು ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಕಾಲಾಂತರದಲ್ಲಿ ಕವಲೊಡೆದರು ಸಹ ಇವರ ಮತ್ತು ಅವರ ನಡುವಿನ ಅಂತರ ಬಹಳಷ್ಟಿದೆ. ಆದರೂ ಸಹ ಸಮುದಾಯದ ಅಧ್ಯಯನಕ್ಕೆ ಇದು ಪೂರಕವಾಗಿದೆ.

೫. ಪಂಪನಗೌಡ ಎಂ ಆರ್ ಇವರ ಸಂಪಾದಕತ್ವದಲ್ಲಿ "ಗೊಂಡ್ವಾನ್ ಸಂಸ್ಕೃತಿ" ಎಂಬ ಕೃತಿಯು ಅನಾವರಣಗೊಂಡಿದ್ದು, ಇತಿಹಾಸವನ್ನು ಅಮೂಲಾಗ್ರವಾಗಿ ಕಟ್ಟಿಕೊಟ್ಟಿದ್ದಾರೆ. ಗೊಂಡರ ಸಾಂಸ್ಕೃತಿಕ ಪರಂಪರೆ, ಜಾಗತಿಕ ಧರ್ಮ, ಭಾಷೆ, ಸಂಸ್ಕೃತಿಯ ಮೇಲೆ ಗೊಂಡ್ವಾನ ಸಂಸ್ಕೃತಿಯ ಪ್ರಭಾವ, ಗೊಂಡ್ವಾನ ರಾಜಲಾಂಛನ, ಲಾಕುಳಸಿದ್ಧಾಂತ, ಗೊಂಡರು ಮತ್ತು ಮತಾಂತರ ಇತ್ಯಾದಿ ಅಂಶಗಳು ಈ ಕೃತಿಯಲ್ಲಿ ವಿವರಿಸಲಾಗಿದೆ. ಲಾಳಗೊಂಡರು ಗೊಂಡರ ಮೂಲದಿಂದ ಬಂದವರೆಂದು ಈ ಕೃತಿ ತಿಳಿಸುತ್ತದೆ. ಇಲ್ಲಿ ಗೊಂಡರ ಐತಿಹಾಸಿಕ ಹಿನ್ನೆಲೆ ಬಿಂಬಿತವಾಗಿದೆ. ಇದರಲ್ಲಿ ಬೇರೆ ಬೇರೆ ಲೇಖಕರು ಇತಿಹಾಸದ ಕುರಿತು ವಿವರಿಸಿದ್ದಾರೆ. ಲಾಳಗೊಂಡರ ಇತಿಹಾಸದ ಕುರಿತು ಆಳವಾಗಿ ಅಧ್ಯಯನ ಮಾಡಿದವರಲ್ಲಿ ಮೊದಲಿಗರು. ಆದರೆ ಇವರ ಅಧ್ಯಯನದಲ್ಲಿ ಲಾಳಗೊಂಡರು ಹೇಗೆ ಸಾಮಾಜಿಕ ಚಲನೆ ಹೊಂದಿದರು ಎಂಬುದನ್ನು ಮಾತ್ರ ತಿಳಿಸಿಲ್ಲ. ಈ ಕೃತಿಯಲ್ಲಿ ಹೆಚ್ಚಾಗಿ ಐತಿಹಾಸಿಕ ಹಿನ್ನೆಲೆಯಿಂದ ಕಟ್ಟಿಕೊಡಲಾಗಿದೆಯೇ ಹೊರತು ಲಾಳಗೊಂಡರ ಸದ್ಯದ ಪರಿಸ್ಥಿತಿ, ಲಾಳಗೊಂಡರ ಸ್ಥಾನಮಾನ ಕುರಿತು ವಿವರಣೆ ನೀಡಿಲ್ಲ. ಆದರೂ ಇದೊಂದು ಇತಿಹಾಸ ತಿಳಿಸುವಲ್ಲಿ ಉತ್ತಮ ಕೃತಿಯಾಗಿದೆ.

೬. The New Encyclopedia Britannica Vol:7 University of Chicogo 1992:111

ಈ ವಿಶ್ವಕೋಶದಲ್ಲಿ ವಿವರಿಸಿರುವಂತೆ ಲಾಲ ಎಂಬ ಪಶುಪಾಲಕ ಜನವರ್ಗವು ಪೂರ್ವನೈಜಿರಿಯಾ ದೇಶದಲ್ಲಿಯೂ ಇರುವುದನ್ನು ವ್ಯಕ್ತಪಡಿಸಲಾಗಿದೆ. ಇದು ಅಧ್ಯಯನಕ್ಕೆ ಪೂರಕವಾಗಿದೆ.

೭. Herdekar Manjappa, Basava-The Dimension of Universal Man, H M S Granthamala:1966:22 ತಮ್ಮ ಕೃತಿಯಲ್ಲಿ ಲಾಲ ಎಂಬ ದೇಶದ ಉಲ್ಲೇಖವು ಬಳ್ಳಿಗಾವಿಯ ಶಾಸನದಲ್ಲಿಯೂ ಹೀಗೆ ಉಲ್ಲೇಖಗೊಂಡಿದೆ. ಮೂಲಿಗ......ಈ ಶೆಟ್ಟಿಗಳು ದೂರದ ನೇಪಾಳ, ಕುರುಂಬ, ಕಾಂಬೋಜ, ಗೊಲ್ಲ, ಲಾಲ, ಬರ್ಬರ ದೇಶಗಳಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು ಎಂಬುವುದನ್ನು ಉಲ್ಲೇಖಿಸಿದ್ದಾರೆ. ಇದು ನಮ್ಮ ಅಧ್ಯಯನಕ್ಕೆ ಪೂರಕವಾಗಿದೆ.

೮. ಚಂದ್ರಶೇಖರ್ ಟಿ ಆರ್ (ಅನುವಾದ), ಜಾನ್‌ಪೀಟರ್‌ಶೌಟನ್(ಮೂಲ), ಅನುಭಾವಿಗಳಕ್ರಾಂತಿ, ವೀರಶೈವ ಅಧ್ಯಯನ ಸಂಸ್ಥೆ, ಗದಗ:೨೦೦೦:೧೫೨.ಕೃಷ್ಣ, ತುಂಗಭದ್ರ ಜಲಾಶಯದ ಮಧ್ಯಕರ್ನಾಟಕದ ಲಾಳಗೊಂಡರು ಲಿಂಗಧಾರಿ ಶೈವರು ಹಾಗೂ ವೈಷ್ಣವ ಮತಾವಲಂಬಿಗಳಾದರು ಕೃಷಿಕ ಮತ್ತು ಎತ್ತು ಬಾಡಿಗೆಯವರು ಲಿಂಗಧಾರಿ ಲಾಳಗೊಂಡರಾದರೆ, ತೋಟಗಾರಿಕೆ, ಮಣ್ಣಿನ ಕೆಲಸ ಮತ್ತು ವ್ಯಾಪಾರವನ್ನು ಸಾಂಪ್ರದಾಯಿಕ ವೃತ್ತಿಯನ್ನಾಗಿಸಿಕೊಂಡವರು ವೈಷ್ಣವ ಲಾಳಗೊಂಡರಾಗಿದ್ದಾರೆ ಎಂದು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

೯. Kittel, Rev F A Kannada- English Dictionary ಯಲ್ಲಿ ಕಿಟ್ಟೆಲ್ ಇವರು ಲಾಳ್ ಎಂಬ ಪದಕ್ಕೆ ಲಿಂಗವತ್ತಿಗೆ, ಲಾಳ ಎಂದರೆ ನಾಲ, ಲಾಳಿ ಎಂದರೆ ನೆಯ್ಯುವವ ಎಂದು ಮತ್ತು ರಾಜವೈಭವದ ವಿವರಣೆ ನೀಡಿರುವವರಲ್ಲದೆ ಲಾಲಾ ಎಂದರೆ ಅಸುರ ಎಂಬ ಅರ್ಥವನ್ನು ನೀಡಿರುವರು ಲಿಂಗವತ್ತಿಗೆ ಎಂಬ ವಿವರಣೆಯಲ್ಲಿ ಲಾಲಿಗೊಂಡರು ಲಿಂಗಾಯಿತರೆಂದಿದ್ದಾರೆ. ಈ ಪದಗಳು ಲಾಳಗೊಂಡರ ಪದ ನಿಷ್ಪತ್ತಿ ಬಿಡಿಸಲು ಸಹಾಯಕವಾಗಿದೆ.

೧೦. Rusell R V and Herella, "The Tribes and Castes of The Central Provinces of India" ಇವರು ತಮ್ಮ ಗ್ರಂಥದಲ್ಲಿ ಲಾಳಗೊಂಡ ಜನರ ಕುರಿತು ವಿವರಿಸುತ್ತಾ ಮಧ್ಯಪ್ರದೇಶ ಮತ್ತು ಆಂಧ್ರಪ್ರದೇಶದ ಗಡಿಭಾಗದ ಒಂದು ಪ್ರಾಂತ 'ಲಾಣ' ಈ ಪ್ರಾಂತವು ಗೊಂಡರಿಂದ ಆಳಲ್ಪಟ್ಟಿದೆ. ಇಲ್ಲಿಯ ಜನರೇ ಲಾಣಗೊಂಡರು>ಲಾಳಗೊಂಡರು. ಈ ಅಧ್ಯಯನವು ಲಾಳಗೊಂಡರ ಮೂಲ ನೆಲೆಯನ್ನು ತಿಳಿಯುವಲ್ಲಿ ಸಹಾಯಕವಾಗಿದೆ.

೧೧. Buchanan Francis, "Jurney from Madras Through the Contries of Mysore, Canara and Malabar, Asian Educational Services, ಎಂಬ ಕೃತಿಯಲ್ಲಿ ಲಾಳಿಗೊಂಡರು ಕರ್ನಾಟಕದ ಬುಡಕಟ್ಟಿನ ಮೂಲದವರಾಗಿರುವರು. ಇವರು ತಮ್ಮನ್ನು ಲಿಂಗಬಣಜಿಗರೆಂದು ಹೇಳಿಕೊಂಡರು ಅವರು ಲಿಂಗಬಣಜಿಗರೊಂದಿಗೆ. ಆಹಾರ ಸೇವನೆ ಹಾಗೂ

ವೈವಾಹಿಕ ಸಂಬಂಧ ಮಾಡುವುದಿಲ್ಲ. ಈ ಜನಾಂಗ ಕೃಷಿ ಮತ್ತು ನೇಯ್ಗೆಯ ಉದ್ಯಮದಲ್ಲಿ ನಿರತರಾಗಿದ್ದಾರೆ ಶಿವನ ಆರಾಧಕ ಲಾಳಗೊಂಡರ ಗುರುಗಳು ಲಿಂಗಧಾರಕ ಸನ್ಯಾಸಿಗಳಾಗಿದ್ದು ಮೈಲಾರದಲ್ಲಿರುವರು. ಅತೀ ಕಡಿಮೆ ಪದಗಳಲ್ಲಿ ಲಾಳಗೊಂಡರ ಸಂಪ್ರದಾಯಗಳ ಕುರಿತು ವಿವರಿಸಿದ್ದಾರೆ. ಇವರು ದೊಡ್ಡಬಳ್ಳಾಪುರ ಪ್ರದೇಶದ ಲಾಳಗೊಂಡರ ಕುರಿತು ವಿವರಣೆ ನೀಡಿದ್ದು ಅವರು ಎತ್ತುಗಳ ಬಾಡಿಗೆ ಮಣ್ಣಿನ ಕೆಲಸ, ಕೃಷಿ ಕೆಲಸ ಇವರ ಕಾರ್ಯಗಳು. ಇವರು ಕುರಿ ಮತ್ತು ಮೇಕೆ ಸಾಕುವುದನ್ನು ಇಷ್ಟ ಪಡುವುದಿಲ್ಲ ಎಂದು ತಿಳಿಸಿದ್ದಾರೆ. ಲಾಳಗೊಂಡರ ಗೋಡೆ ನಿರ್ಮಾಣ ಕಾರ್ಯ ಇಂದು ಕಾಣಸಿಗದು. ಇವರು ಹೇಳಿರುವ ಎತ್ತುಗಳ ಪೋಷಣೆ ಇವರದ್ದು ಮೇಲುಗೈ ಆದರೆ ಅನುವಂಶಿಕ ವೃತ್ತಿ ಎಂದು ಯಾವುದು ಕಾಣಸಿಗದು. ಆದರೆ ಕೃಷಿ ಇವರ ಪ್ರಧಾನ ಕೆಲಸ. ಆದರೆ ಬುಖನಾನ್ ಇವರು ಕಂಡ ಲಾಳಗೊಂಡರ ಸಂಪ್ರದಾಯಕ್ಕೂ ಈಗಿನ ಲಾಳಗೊಂಡರ ಸಂಪ್ರದಾಯಕ್ಕೂ ಸಾಮಿಪ್ಯತೆಯನ್ನು ಕಾಣಬಹುದು. ಲಾಳಗೊಂಡರನ್ನು ಲಿಂಗಾಯತ ಮತಕ್ಕೆ ಸಂಬಂಧಿಸಿದ ಜಾತಿಗಳಲ್ಲಿ ಗಣಿಸಿದ್ದಾರೆ ಎಂದು ಇವರು ತಮ್ಮ ಪ್ರಯಾಣದ ಮುಖಾಂತರ ಈ ಒಂದು ಸಣ್ಣ ಟಿಪ್ಪಣಿ ಬರೆದಿದ್ದು, ಈ ಒಂದು ಟಿಪ್ಪಣಿ ಮಾತ್ರ ಲಾಳಗೊಂಡರ ಕುರಿತು ಇರುವ ಹಳೆಯ ನಿದರ್ಶನವಾಗಿದೆ.

೧೨. ಬೋನಾ ಬಸವರಾಜ್, ಕುರುಬರ ಗೋತ್ರಗಳು ಹಾಗೂ ಬೆಡಗುಗಳು, ಎಂಬ ಕೃತಿಯಲ್ಲಿ ಇವರು ವಿವರಿಸುವಂತೆ ಲಾಲ, ಲಾಳ, ಲಾಳಿ, ನಾಳಿ ಬಳಿಗಳು ಕುರುಬ ಸಮುದಾಯದ ಬಳಿಗಳು ಎಂದು ತಮ್ಮ ಕೃತಿಯಲ್ಲಿ ವಿವರಿಸಿರುವರು.

ಈ ಮೇಲೆ ನೀಡಿದ ಎಲ್ಲಾ ಪುಸ್ತಕ ಮತ್ತು ಲೇಖನಗಳ ವಿವರಣೆಯನ್ನು ನನ್ನ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲು ಸಹಾಯವಾಗಿದೆ. ಇದರಿಂದ ಇನ್ನು ಹೆಚ್ಚಿನ ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕವಾಗಿ ನೀಡಿದ ಕೊಡುಗೆಗಳನ್ನು ಈ ಸಂಶೋಧನಾ ಅಧ್ಯಯನದಲ್ಲಿ ಮಾಡಲಾಗಿದೆ. ಹಾಗೆಯೇ ಈ ಹಿನ್ನೆಲೆಯಲ್ಲಿ ಲಾಳಗೊಂಡರ ಸಾಮಾಜಿಕ ಚಲನೆ, ಸಾಂಸ್ಕೃತಿಕವಾಗಿ, ಧಾರ್ಮಿಕ ವಿಷಯಗಳ ಅಧ್ಯಯನ ಕ್ರೂಢೀಕರಿಸಿಕೊಂಡು ಲಾಳಗೊಂಡ ಸಮುದಾಯವು ಸಾಮಾಜಿಕ ಬದಲಾವಣೆಯಲ್ಲಿ ಎಷ್ಟು ಬೇಗ ಮಾರ್ಪಾಟಾಗಿದೆ ಎಂದು ಅಭ್ಯಸಿಸಲು ಪ್ರಯತ್ನ ಮಾಡಿದ್ದೇನೆ. ಲಾಳಗೊಂಡರ ಕುರಿತಾಗಿ ಕಡಿಮೆ ಅನುಷಂಗಿಕ ಆಕರಗಳು ಇವೆ. ಅದೇ ರೀತಿ ಸಂಶೋಧನೆಯು ನಿರಂತರವಾಗಿ ಸಾಗುವಂತಹದ್ದು, ಹಾಗಾಗಿ ಈ ಅನುಷಂಗಿಕ ಆಕರಗಳು ಎಲ್ಲವನ್ನು ಕಟ್ಟಿಕೊಡಲು ಸಾಧ್ಯವಾಗುವುದಿಲ್ಲ. ಅಧ್ಯಯನದ ಆಳತೆ ತಿಳಿಯಲು ಮತ್ತು ಸಮುದಾಯವನ್ನು ಸಂಶೋಧನಾ ಚೌಕಟ್ಟಿನೊಳಗೆ ತರಲು ಪ್ರಸ್ತುತ ಸಂಶೋಧನೆ ನೆರವಾಗುತ್ತದೆ.

**೧.೩ ಅಧ್ಯಯನದ ಪ್ರಾಕ್‌ಕಲ್ಪನೆಗಳು**

ಪ್ರಾಕ್ ಕಲ್ಪನೆ ಎಂದರೆ ಸಂಶೋಧನೆ ಮಾಡುವ ಪೂರ್ವದಲ್ಲಿ ಸಂಶೋಧಕನು ಸಂಶೋಧನೆ ಮಾಡುವ ವಿಷಯದ ಕುರಿತು ಇಟ್ಟುಕೊಳ್ಳಬಹುದಾದ(ಊಹಿಸಬಹುದಾದ) ಉದ್ದೇಶಗಳಾಗಿರುತ್ತವೆ.

ಈ ಊಹೆಗಳು ಸಂಶೋಧನಾ ಫಲಿತತೆ ನಂತರ ನಿಜ ಅಥವಾ ಸುಳ್ಳು ಆಗಬಹುದು. ನನ್ನ ಸಂಶೋಧನಾ ಶೀರ್ಷಿಕೆಯು ಅಂತಿಮಗೊಂಡ ನಂತರ ಅಧ್ಯಯನದ ಕುರಿತು ಸಾಹಿತ್ಯಾವಲೋಕನ ಮಾಡಿ ಅದರ ಆಧಾರದ ಮೇಲೆ ಈ ಕೆಳಗಿನ ಪ್ರಾಕ್ ಕಲ್ಪನೆ ಅಥವಾ ಊಹೆಯನ್ನು ಮಾಡಲಾಗಿದೆ.

೧. ಲಾಳಗೊಂಡರು ಗೊಂಡ ಬುಡಕಟ್ಟಿಗೆ ಸೇರಿದ ಅತೀ ಪುರಾತನ ಸಮುದಾಯ.

೨. ಲಾಳಗೊಂಡರು ಚಲನೆಗೊಂಡು ಸಾಂಸ್ಕೃತಿಕ ಸ್ಥಿತ್ಯಂತರದಲ್ಲಿ ವೀರಶೈವ ಲಿಂಗಾಯತರೂ ಆಗಿರುವರು.

ಲಾಳಗೊಂಡರ ಸಾಮಾಜಿಕ ಚಲನೆ ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು ಕ್ಷೇತ್ರ ಭೇಟಿಗಾಗಿ ಹೋದಾಗ ಈ ಸಮುದಾಯವು ದೊಡ್ಡಬಳ್ಳಾಪುರ, ಬಳ್ಳಾರಿ, ಕೊಪ್ಪಳ, ರಾಯಚೂರು, ಬಾಗಲಕೋಟೆಗೆ ಹೋದಾಗ ಇವರುಗಳನ್ನು ಗೌಡ, ನಾಡಗೌಡ, ಸರನಾಡಗೌಡರೆಂತಲೂ ಮತ್ತು ಲಾಳಗೊಂಡ, ಲ್ವಾಳಗೊಂಡ, ನಾಳಿಗೊಂಡ ಹೀಗೆ ಮುಂತಾದ ಪರ್ಯಾಯವಾಚಿ ಹೆಸರುಗಳಿಂದ ಕರೆಯಲಾಗುತ್ತದೆ ಎಂದು ತಿಳಿದುಬಂದಿತು. ಸಮುದಾಯದ ಹೆಸರುಗಳಿಗಿರುವ ಚಾರಿತ್ರಿಕ ಹಿನ್ನಲೆ ಮತ್ತು ಹೆಸರಿನಲ್ಲಿರುವ ಸಂವಿಧಾನಿಕ ತೊಡಕುಗಳನ್ನು ತಿಳಿದ ನಂತರ ಈ ಮೇಲ್ಕಂಡ ಊಹೆಗಳನ್ನು ಅಂದಾಜಿಸಿಕೊಂಡು ಅವುಗಳ ಸತ್ಯಾಸತ್ಯತೆಗಳ ಅಧ್ಯಯನಕ್ಕಾಗಿ ಅಧ್ಯಯನದ ಉದ್ದೇಶಗಳನ್ನು ಸಂಶೋಧನೆಯಲ್ಲಿ ಸಂಶೋಧಿಕರಿಸಲು ಈ ಕೆಳಗಿನಂತೆ ನೀಡಲಾಗಿದೆ.

### ೧.೪ ಅಧ್ಯಯನದ ಉದ್ದೇಶಗಳು

ಸಂಶೋಧನೆಗೆ ಒಂದು ಚೌಕಟ್ಟು ಇರಬೇಕು ಮತ್ತು ಆ ಚೌಕಟ್ಟಿನಲ್ಲಿ ಅಧ್ಯಯನ ಮುಂದುವರೆಯಬೇಕು. ಹೀಗೆ ಸಂಶೋಧನೆ ಮಾಡಬೇಕಾದರೆ ಸಂಶೋಧನೆಯ ಉದ್ದೇಶಗಳು ಮುಖ್ಯವಾಗಿರುತ್ತವೆ. ಈ ಉದ್ದೇಶಗಳ ಅಡಿಯಲ್ಲಿ ಸಂಶೋಧನಾ ವಿಧಾನಗಳು ರೂಪಗೊಂಡಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

೧. ಲಾಳಗೊಂಡರ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳುವುದು.

೨. ಲಾಳಗೊಂಡರ ನೆಲೆಗಳನ್ನು ಮತ್ತು ಚಲನೆಯನ್ನು ಶೋಧಿಸುವುದು.

೩. ಲಾಳಗೊಂಡರ ಸಾಂಸ್ಕೃತಿಕ ಸ್ಥಿತ್ಯಂತರ ಕುರಿತು ವಿಶ್ಲೇಷಿಸುವುದು.

೪. ಲಾಳಗೊಂಡರ ಪ್ರಸ್ತುತ ಸಾಮಾಜಿಕ ಜೀವನವನ್ನು ಅರಿಯುವುದು.

೫. ಲಾಳಗೊಂಡರ ಪ್ರಸ್ತುತ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದು.

### ೧.೫ ಸಂಶೋಧನಾ ಅಧ್ಯಯನದ ವ್ಯಾಪ್ತಿ

ಸಂಶೋಧನೆಗೆ ತನ್ನದೇ ಆದ ಒಂದು ನೀತಿ ಇದೆ. ಕಾರಣ ಸಂಶೋಧನೆಯನ್ನು ಇಡಿಯಾಗಿ ಗ್ರಹಿಸುವುದು ಸುಲಭವಲ್ಲ. ಸಂಶೋಧನೆಗೆ ವಸ್ತುನಿಷ್ಠತೆ ಬರಬೇಕಾದರೆ ನಾವು ಆಯ್ಕೆಮಾಡಿದ ಅಧ್ಯಯನಕ್ಕೆ ಒಂದು ಎಲ್ಲೆ ಅಥವಾ ಸೀಮೆಯನ್ನು ರೂಪಿಸಬೇಕು. ಲಾಳಗೊಂಡ ಸಮುದಾಯವು ಮಧ್ಯಪ್ರದೇಶದಿಂದ ವಲಸೆ ಬಂದು ಆಂಧ್ರದಲ್ಲಿ ನೆಲೆಯೂರಿ ನಂತರ ತುಂಗಭದ್ರಾ ಗಡಿಭಾಗದಲ್ಲಿ

ಹಾಗೂ ಉತ್ತರ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ನೆಲೆಯೂರಿದ್ದಾರೆ. ಈ ನೆಲೆಯಲ್ಲಿ ಕರ್ನಾಟಕದ ರಾಜ್ಯವನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ. ಕರ್ನಾಟಕ ರಾಜ್ಯದ ಜೊತೆಗೆ ಆಂಧ್ರ ಕರ್ನಾಟಕದ ಗಡಿ ಭಾಗದಲ್ಲಿ, ತಮಿಳುನಾಡು ಗಡಿಭಾಗದಲ್ಲಿ ಇವರು ನೆಲೆಸಿರುವರು. ಕರ್ನಾಟಕದ ರಾಯಚೂರು, ಧಾರವಾಡ, ಬಳ್ಳಾರಿ, ಹಾವೇರಿ, ಗುಲ್ಬರ್ಗ, ಗದಗ, ಶಿವಮೊಗ್ಗ, ತುಮಕೂರು, ಚಿತ್ರದುರ್ಗ, ದಾವಣಗೆರೆ, ಬೆಳಗಾವಿ, ಕೊಪ್ಪಳ, ಬಾಗಲಕೋಟೆ, ದಕ್ಷಿಣ ಕರ್ನಾಟಕದ ದೊಡ್ಡಬಳ್ಳಾಪುರ ತಾಲೂಕಿನಲ್ಲಿ ನೆಲೆಸಿದ್ದು ಮಾಹಿತಿ ಸಂಗ್ರಹಿಸಲಾಗಿದೆ. ಇದರಿಂದಾಗಿ ಉತ್ತರ ಕರ್ನಾಟಕದ ಜೊತೆಗೆ ದೊಡ್ಡಬಳ್ಳಾಪುರದ ಲಾಳಗೊಂಡರೊಂದಿಗೆ ಸಂಶೋಧನೆಯ ತುಲನಾತ್ಮಕವಾಗಿ ವಿಶ್ಲೇಶಿಸಲು ಸಹಕಾರಿಯಾಗಿದೆ.

"ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ" ಕುರಿತು ಅಧ್ಯಯನ ಮಾಡುವಾಗ ಯಾವುದೇ ನಿರ್ಧಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೇ ಇಡೀ ಲಾಳಗೊಂಡ ಸಮುದಾಯವು ಎಲ್ಲಿ ವಾಸವಾಗಿರುತ್ತದೆಯೋ ಆ ಪ್ರದೇಶಗಳನ್ನು ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ. ಅಧ್ಯಯನದ ದೃಷ್ಟಿಯಿಂದ ಲಾಳಗೊಂಡರು ಹೆಚ್ಚಾಗಿರುವ ಉತ್ತರ ಕರ್ನಾಟಕದ ಬಳ್ಳಾರಿ, ರಾಯಚೂರು, ಕಲಬುರ್ಗಿ, ಬೀದರ ಮತ್ತು ದಕ್ಷಿಣಕರ್ನಾಟಕದ ದೊಡ್ಡಬಳ್ಳಾಪುರ ಜಿಲ್ಲೆಯಲ್ಲಿಯ ಲಾಳಗೊಂಡರ ನೆಲೆಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಆಂಧ್ರ ಪ್ರದೇಶದ ಅಂಚಿನಲ್ಲಿಯೂ ಇವರು ಕಂಡುಬರುತ್ತಾರೆ. ಇಲ್ಲಿ ಲಾಳಗೊಂಡರು ಮೊದಲು ಯಾವ ಸಮುದಾಯಕ್ಕೆ ಸೇರಿದವರು, ಅವರು ಸಾಮಾಜಿಕ ಬದಲಾವಣೆಯಿಂದಾಗಿ ಅವರ ಚಲನೆ ಹೇಗಾಯಿತು ಮತ್ತು ಅವರ ಪ್ರಸ್ತುತ ಪರಿಸ್ಥಿತಿಯ ಕುರಿತು ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಮುಖ್ಯ ಗುರಿಯಾಗಿದೆ.

ಮೇತ್ರಿ ಕೆ ಎಂ ಅವರು 'ಲಾಳಗೊಂಡರ ಚರಿತ್ರೆ' ಎಂಬೀ ಲೇಖನದಲ್ಲಿ ಲಾಳಗೊಂಡರನ್ನು ಕುರಿತು ಹೀಗೆ ಹೇಳಿದ್ದಾರೆ. "ಲಾಳಗೊಂಡರು ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ಹರಡಿಕೊಂಡಿದ್ದಾರೆ. ೧೮೮೧ರ ಜನಗಣತಿ ವರದಿಯ ಪ್ರಕಾರ ಮದ್ರಾಸ್ ರಾಜ್ಯದ ಚೆಂಗಾಲಪುಟ್, ಉತ್ತರ ಆರ್ಕಾಟ್, ಕೊಯಿಮತ್ತೂರು ಮತ್ತು ಮದ್ರಾಸ್ ಜಿಲ್ಲೆಗಳಲ್ಲಿ ತಮಿಳು ಜಾತಿಯ ಲಾಲ ಎಂಬೀ ಹೆಸರಿನ ೪೪೯ ಜನ ದಾಖಲಾದರೆ ತೆಲುಗು ಜಾತಿಗಳೆಂದು ಗೋದಾವರಿ, ಕರ್ನೂಲು, ಬಳ್ಳಾರಿ ಜಿಲ್ಲೆಗಳಲ್ಲಿ ಲಾಲಿಗೊಂಡ ೮೮೧೯, ಗಂಜಾಮ್, ಕರ್ನೂಲು, ಬಳ್ಳಾರಿ ಜಿಲ್ಲೆಗಳಲ್ಲಿ ಲಾಲಿಗೊಂಡ ಬಲಿಜ ೯೩, ಬಳ್ಳಾರಿ ಜಿಲ್ಲೆಯಲ್ಲಿ ಲಾಲಿಗೊಂಡ ಗೊಲ್ಲ ೯, ಲಾಲಿಗೊಂಡ ಕಾಪು ೨೬೦ ಮತ್ತು ಲಾಲಿಗೊಂಡ ಯಾಪಲಿಂಗಧಾರಿ ೧ ದಾಖಲಾಗಿದ್ದಾರೆ. ಪ್ರಸ್ತುತ ಸಮೀಕ್ಷೆ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಸು. ೫೦ಸಾವಿರ ಲಾಲಗೊಂಡರು ೩೦೦ ಗ್ರಾಮಗಳಲ್ಲಿ ಹಾಗೂ ಹಲವಾರು ನಗರಗಳಲ್ಲಿ ನೆಲೆಸಿರುತ್ತಾರೆ. ಬಳ್ಳಾರಿ, ಸಿರುಗುಪ್ಪ, ರಾಯಚೂರು, ಸಿಂಧನೂರು ತಾಲೂಕುಗಳಲ್ಲಿ ದಟ್ಟವಾಗಿಯೂ ಹಾಗೂ ಬಾಗಲಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ಬೈಲಹೊಂಗಲ, ಹೊಸಪೇಟೆ, ಸಂಡೂರು, ಧಾರವಾಡ, ಹುಬ್ಬಳ್ಳಿ, ಗದಗ, ಮುಂಡರಗಿ, ಶಿರಹಟ್ಟಿ, ಹಾವೇರಿ, ರಾಣಿಬೆನ್ನೂರು, ಸವಣೂರು, ಶಹಾಪುರ, ಗಂಗಾವತಿ, ಕೊಪ್ಪಳ, ಕುಷ್ಟಗಿ, ಯಲಬುರ್ಗಾ, ದೇವದುರ್ಗ ತುಮಕೂರು, ಶಿವಮೊಗ್ಗ ತಾಲೂಕುಗಳಲ್ಲಿ ವಿರಳವಾಗಿ ಹರಡಿಕೊಂಡಿದ್ದಾರೆ"

(ಪಂಪನಗೌಡ ಎಂ ಆರ್ (ಸಂ), ೨೦೧೨, ೭೫). ಆದರೆ, ಇಲ್ಲಿ ಲಾಳಗೊಂಡ ಎನ್ನುವ ಪದ ಸಂವಿಧಾನದ ಜಾತಿವಾರು ಪಟ್ಟಿಯಲ್ಲಿ ನಮೂದನೆ ಆಗಿರುವುದಿಲ್ಲ ಮತ್ತು ಹಲವರು ಲಾಳಗೊಂಡ ಎನ್ನುವ ಪದದ ಬಳಕೆ ಬಿಟ್ಟು ಹಿಂದೂ ವೀರಶೈವ/ವೀರಶೈವ ಇನ್ನು ಅನೇಕ ಪದಗಳಿಂದ ತಮ್ಮನ್ನು ಗುರುತಿಸಿಕೊಂಡಿರುತ್ತಾರೆ. ಇಷ್ಟೊಂದು ಸಂಖ್ಯೆಯಲ್ಲಿ ಕರ್ನಾಟಕದಲ್ಲಿ ನೆಲೆಸಿರುವರೆ? ಎನ್ನುವ ಅಂಶವನ್ನು ಅಧ್ಯಯನದಿಂದ ಕಂಡುಕೊಳ್ಳುವ ಅವಶ್ಯಕತೆ ಇದೆ.

ಸಂಶೋಧಕನು ಒಂದು ಅಧ್ಯಯನವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟವಾಗಿ ಮತ್ತು ವಸ್ತುನಿಷ್ಠವಾಗಿ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಸಂಶೋಧನಾ ಕಾರ್ಯನಿರ್ವಹಿಸಬೇಕಾದರೆ ಅಧ್ಯಯನಕ್ಕೊಂದು ನಿರ್ದಿಷ್ಟವಾದ ವ್ಯಾಪ್ತಿ ಅವಶ್ಯಕ. ಆಗ ಮಾತ್ರ ಈ ಕ್ಷೇತ್ರದಲ್ಲಿ ಯಶಸ್ಸನ್ನು ಸಾಧಿಸಬಹುದು. ಅದಕ್ಕಾಗಿ ಅಧ್ಯಯನದ ಪರಿಪೂರ್ಣತೆಗಾಗಿ ನಿರ್ದಿಷ್ಟ ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದ್ದು, "ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ" ಎಂಬ ಶೀರ್ಷಿಕೆಯ ಅಡಿಯಲ್ಲಿ ಈ ಸಮುದಾಯದ ಅಧ್ಯಯನ ಮಾಡಲಾಗುತ್ತದೆ. ಅಲ್ಲದೇ ಈ ಸಮುದಾಯದ ರಾಜ್ಯದ ಹೊರ ವಲಯದಲ್ಲಿ ಕಂಡು ಬರುತ್ತದೆ. ಆದ್ದರಿಂದ ಇದರ ಒಳತಿರುವನ್ನು ಕುರಿತು ಅಧ್ಯಯನಿಸುವುದು ಅವಶ್ಯವಾಗಿದೆ.

**೧.೬ ಸಂಶೋಧನಾ ಅಧ್ಯಯನದ ವಿಧಾನಗಳು**

ಸಂಶೋಧನೆಯಲ್ಲಿ ಕ್ಷೇತ್ರಕಾರ್ಯದ ಮುಖಾಂತರ ಸಂಗ್ರಹಿಸಿದ ಮಾಹಿತಿಯನ್ನು ಪ್ರಾಥಮಿಕ ಮಾಹಿತಿಯೆಂದು ಮತ್ತು ಈಗಾಗಲೇ ಅಧ್ಯಯನ ಮಾಡಿ ಸಂಗ್ರಹಿಸಿ ಬರೆದಿರುವ ಮಾಹಿತಿಯನ್ನು ಅನುಷಂಗಿಕ ಮಾಹಿತಿಯೆಂದು ಕರೆಯಲಾಗುತ್ತದೆ. ಈ ಸಂಶೋಧನೆಯಲ್ಲಿ ಅನೇಕ ವಿಧಾನಗಳನ್ನು ಬಳಸಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಂದರ್ಶನ, ಪ್ರಶ್ನಾವಳಿ, ಸಹಭಾಗಿ ಅವಲೋಕನ, ವ್ಯಕ್ತಿ ಅಧ್ಯಯನದ ಮೂಲಕ ಕ್ಷೇತ್ರಕಾರ್ಯವನ್ನು ಕೈಗೊಂಡು ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಲಾಳಗೊಂಡ ಸಮುದಾಯದ ಅನುಷಂಗಿಕ ಮಾಹಿತಿ ಆಕರ ಅಷ್ಟಾಗಿ ನಡೆದಿಲ್ಲ.

ಲಾಳಗೊಂಡರು ಕರ್ನಾಟಕದಲ್ಲಿ ಹೇರಳವಾಗಿದ್ದು ಜನಸಂಖ್ಯೆಯು ಸಹ ತುಂಬಾ ಹೆಚ್ಚಾಗಿದೆ ಎನ್ನಬಹುದು. ಈ ದೃಷ್ಟಿಯಿಂದ ರಾಜ್ಯದಲ್ಲಿ ಒಟ್ಟು ೨೧೯ ಕುಟುಂಬಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ ಕೌಟುಂಬಿಕ ಸಮೀಕ್ಷೆ ಮೂಲಕ ನಡೆಸಿದ ಅಧ್ಯಯನದಿಂದ ಪ್ರಸ್ತುತ ಸಂಶೋಧನೆಯ ಫಲಿತತೆಗಳಿಗೆ ಸಹಾಯಕವಾಗಿದೆ.

ಅಧ್ಯಯನದ ವಿಧಾನಗಳಲ್ಲಿ ಲಾಳಗೊಂಡ ಸಮುದಾಯದ ಕುರಿತಾಗಿ ಈ ಕೆಳಗಿನ ಐತಿಹಾಸಿಕ ತೌಲನಿಕ ವಿಧಾನ, ಪ್ರಶ್ನಾವಳಿ, ದತ್ತಾಂಶ ಸಂಗ್ರಹ (ಅಂಕಿ-ಸಂಖ್ಯೆಶಾಸ್ತ್ರೀಯ) ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಸಹಭಾಗಿ ಅವಲೋಕನದ ಮೂಲಕ ಸಮುದಾಯದ ಆಚರಣೆಗಳ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಯಾವುದಾದರು ಒಂದು ವಿಷಯವನ್ನು ತಿಳಿದುಕೊಳ್ಳುವ ಸಂದರ್ಭದಲ್ಲಿ ಅದರ ಬಗ್ಗೆ ಅನುಸರಿಸುವ ಕ್ರಮವನ್ನು ವಿಧಾನ ಅಥವಾ ಪದ್ಧತಿಯೆಂದು ಕರೆಯುತ್ತಾರೆ. ಪ್ರತಿಯೊಂದು ವಿಜ್ಞಾನವು

ತನ್ನದೇ ವಸ್ತು, ವಿಷಯಕ್ಕೆ ಸಂಬಂಧಪಟ್ಟಂತೆ, ಸೂಕ್ತವಾದ ಕ್ರಮವನ್ನು ಅನುಸರಿಸಿ ಅಧ್ಯಯನ ನಡೆಸುತ್ತದೆ. ಈ ರೀತಿಯಾಗಿ ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಮಾಹಿತಿ ಸಂಗ್ರಹಣೆಗಾಗಿ ವೈಜ್ಞಾನಿಕ ತಂತ್ರ, ವಿಧಾನಗಳನ್ನು ಬಳಸಿಕೊಂಡು ಕ್ಷೇತ್ರ ಅಧ್ಯಯನ ಮಾಡಿ, ಗುಣಾತ್ಮಕ ಸ್ವರೂಪದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾಹಿತಿಯನ್ನು ಸಂಗ್ರಹಿಸುವಾಗ ಹಲವು ರೀತಿಯ ಪದ್ಧತಿಗಳನ್ನು ಅನುಸರಿಸಲಾಗಿದೆ.

ಪ್ರಾಥಮಿಕ ಮಾಹಿತಿ ಸಂಗ್ರಹಣೆಯಿಂದ ಲಾಳಗೊಂಡರ ಪರ್ಯಾಯ ಹೆಸರು, ಜನಸಂಖ್ಯೆ, ವೈವಾಹಿಕಸ್ಥಿತಿ, ದೇವರು, ಪೀಠ, ಕೃಷಿಭೂಮಿ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಗತಿ ಇತ್ಯಾದಿ ಅಂಶಗಳನ್ನು ಕ್ಷೇತ್ರ ಅಧ್ಯಯನದ ಮೂಲಕ ಸಂಗ್ರಹಿಸಲಾಗಿದೆ.

ವ್ಯಕ್ತಿ ಅಧ್ಯಯನದಲ್ಲಿ ನಾಳಗೊಂಡೇಶ್ವರ, ಕುರುಗೋಡು ನೀಲಮ್ಮ, ಕುರುಗೋಡು ಬಸವೇಶ್ವರ ಕುರಿತು ವ್ಯಕ್ತಿ ಅಧ್ಯಯನ ವಿಧಾನದ ಮೂಲಕ ಮಾಹಿತಿ ಪಡೆಯಲಾಗಿದೆ.

ವಿಷಯ ಅಧ್ಯಯನ ಲಾಳಗೊಂಡರ ಆಚಾರ–ವಿಚಾರ, ನಂಬಿಕೆ, ಜೀವನಾವರ್ತಕ ಆಚರಣೆಗಳು, ಅವರ ಧಾರ್ಮಿಕ ಹಾಗೂ ಐತಿಹಾಸಿಕ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆಗಳನ್ನು ಸಂಗ್ರಹಿಸಲು ಒಟ್ಟು ೨೦ ಜನರನ್ನು ವಿಷಯ ಅಧ್ಯಯನ ವಿಧಾನದ ಮೂಲಕ ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ.

ಐತಿಹಾಸಿಕ ವಿಧಾನ ಭೂತಕಾಲವನ್ನು ಬಲ್ಲವನು ವರ್ತಮಾನವನ್ನು ರೂಪಿಸಬಲ್ಲ. ಸಮಕಾಲೀನ ಸಾಮಾಜಿಕ ಜೀವನ, ಅದರ ರೂಪ, ವೈಶಿಷ್ಟತೆ, ಬದಲಾವಣೆಗಳನ್ನು ತಿಳಿಯುವದಕ್ಕೋಸ್ಕರ ಇತಿಹಾಸವನ್ನು ಅರ್ಥಮಾಡಿಕೊಳ್ಳುವುದು ಮತ್ತು ಅಧ್ಯಯನಿಸುವುದು ಅಗತ್ಯ. ಪ್ರಾಚೀನ ಸಂಸ್ಕೃತಿ ಮತ್ತು ನಾಗರಿಕತೆಗಳು ಹಾಗು ಅವುಗಳಿಗೆ ಸಂಬಂಧಿಸಿದ ದಾಖಲೆಗಳು, ಪ್ರಕ್ರಿಯೆಗಳು, ರೂಢಿಸಂಪ್ರದಾಯಗಳು, ಆಚರಣಾ ಪದ್ಧತಿಗಳು, ಜೀವನದ ರೀತಿನೀತಿಗಳು, ಮಾದರಿಗಳು ಇತಿಹಾಸದಿಂದ ವಿಕಾಸವಾದವುಗಳಾಗಿವೆ. ಆದುದರಿಂದ ಪ್ರಸ್ತುತ ಸಾಮಾಜಿಕ ಜೀವನವನ್ನು ನಿಖರವಾಗಿ ಅರ್ಥಮಾಡಿಕೊಳ್ಳಲು ಈ ಐತಿಹಾಸಿಕ ವಿಧಾನವು ಆಧಾರವಾಗಿದೆ. ಶಾಸನಗಳು, ಕಥೆಗಳು, ಕೈಫಿಯತ್ತುಗಳು, ಹಾಡುಗಳು, myth ಇವುಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಲಾಳಗೊಂಡರ ಸಾಮಾಜಿಕಚಲನೆ ಮತ್ತು ಸಾಮಾಜಿಕ ಸ್ಥಿತ್ಯಂತರ ಅಧ್ಯಯನ ಎಂಬ ವಿಷಯುವಾಗಿರುವುದರಿಂದ ಒಟ್ಟಾರೆ ಲಾಳಗೊಂಡ ಸಮುದಾಯುದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನದ ವಿಧಾನವನ್ನು ಸರಿಹೊಂದಿಸಲಾಗಿದೆ.

ತೌಲನಿಕ ವಿಧಾನ ವಿವಿಧ ಸಮಾಜಗಳನ್ನು ಅಥವಾ ಯಾವುದೇ ಸಮಾಜದ ವೈವಿಧ್ಯತೆಯನ್ನು ಒಂದೇ ತೆರನಾಗಿವೆ ಅಥವಾ ಪರಸ್ಪರ ಭಿನ್ನವಾಗಿವೆ ಎಂಬುವುದನ್ನು ಪರಸ್ಪರ ಹೋಲಿಸಿ ನೋಡುವುದರ ಮುಖಾಂತರ ವಿಶ್ಲೇಷಿಸುವ ವಿಧಾನವನ್ನು ತೌಲನಿಕ ವಿಧಾನ ಎನ್ನುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ ಲಾಳಗೊಂಡರ ಆಚರಣೆಗೆ ಸಂಬಂಧಿಸಿದಂತೆ, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವೈವಾಹಿಕ ಆಚರಣೆಗಳಲ್ಲಿ ಹೇಗೆ ಭಿನ್ನವಾಗಿದೆ. ಹಾಗೂ

ಇವುಗಳಲ್ಲಿ ಹೇಗೆ ಸಾಮ್ಯತೆಯನ್ನು ಒಳಗೊಂಡಿದೆ ಎಂಬುದನ್ನು ತೌಲನೀಕರಿಸಿ ಗುರುತಿಸಲಾಗಿದೆ. ಸಂಶೋಧನೆಗೆ ಅಗತ್ಯವಿರುವ ಮಾಹಿತಿಗಳನ್ನು, ಮಾರ್ಗದರ್ಶಕರ, ವಿಷಯ ಪರಿಣಿತರ, ತಜ್ಞರ ಸಹಾಯದಿಂದ ವಿಷಯ ಅಧ್ಯಯನ ವಿಧಾನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ದತ್ತಾಂಶಗಳ ಮೂಲ ಈ ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಅಂಕಿ ಅಂಶ ಮೂಲಗಳನ್ನು ಬಳಸಿಕೊಳ್ಳಲಾಗಿದೆ. ಈಗಾಗಲೇ ಮೇಲೆ ಹೇಳಿರುವಂತೆ ಸಂದರ್ಶನಾನುಸೂಚಿ, ಪೂರ್ವರಚಿತ ಮತ್ತು ಅರಚಿತ ಪ್ರಶ್ನಾವಳಿ ಮುಖಾಂತರ ಪ್ರಾಥಮಿಕ ಮಾಹಿತಿಯನ್ನು ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಲಾಳಗೊಂಡ ಸಮುದಾಯಗಳ ಊರುಗಳಿಗೆ ಭೇಟಿ ನೀಡಿ ಪಡೆಯಲಾಗಿದೆ ಮತ್ತು ಸಂಬಂಧಿಸಿದ ಇಲಾಖೆಗಳಿಗೆ(ಗ್ರಾಮಪಂಚಾಯತಿ, ಅಂಗನವಾಡಿ, ತಾಲೂಕುಪಂಚಾಯತಿ) ಭೇಟಿ ನೀಡಿ ಅಧಿಕಾರಿಗಳೊಂದಿಗೆ ಚರ್ಚಿಸಿ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಹಾಗೂ ಅಂತರ್ಜಾಲದಲ್ಲಿ ಲಭ್ಯವಿರುವ ಕೆಲವು ಮಾಹಿತಿಗಳು ಆನುಷಂಗಿಕ ಮೂಲಗಳಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಆನುಷಂಗಿಕವಾಗಿ ಕ್ರೂಢೀಕರಿಸಿಕೊಂಡ ಆಕರಗಳ ವಿವರ:**

ಮೂಲ ಆಕರಗಳು ಅನುಸೂಚಿಯನ್ನು ಬಳಸಿಕೊಂಡು ಸಹಭಾಗಿತ್ವದ ಅವಲೋಕನ ಹಾಗು ಅಸಹಭಾಗಿತ್ವ ಅವಲೋಕನದ ಮೂಲಕ ಆಧುನಿಕ ಸಲಕರಣೆಗಳನ್ನು ಬಳಸಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಆನುಷಂಗಿಕ ಆಕರಗಳು: ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ಹಿನ್ನೆಲೆಯಲ್ಲಿ ಅಧ್ಯಯಿನಿಸಲಾಗಿದೆ. ಜೊತೆಗೆ ಸಮಕಾಲೀನ ಸಾಹಿತ್ಯ, ಗ್ಯಾಜಿಟಿಯರ್‌ಗಳು, ಸಮೀಕ್ಷಾ ವರದಿಗಳು, ವಿಶ್ವಕೋಶಗಳು, ನಿಘಂಟುಗಳು, ಪ್ರಕಟಿತ ಹಾಗೂ ಅಪ್ರಕಟಿತ ಕೃತಿಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ವಕ್ತೃವಿವರ: ಲಾಳಗೊಂಡ ಸಮುದಾಯದ ಮೂಲ ಆಶಯಗಳಲ್ಲಿರುವ ಆಚರಣೆ, ವಿಧಿ ವಿಧಾನಗಳು, ಸಂಪ್ರದಾಯ, ಕಾರ್ಯ ಮತ್ತು ಮುಂತಾದ ಕೌಟುಂಬಿಕ ಹಾಗೂ ಸಾಮುದಾಯಿಕ ಮಾಹಿತಿಯನ್ನು ವಕ್ತೃಗಳ ಮೂಲಕ ಪಡೆದುಕೊಳ್ಳಲಾಗಿದೆ.

ಹೀಗೆ ಹಲವು ಕಡೆಗಳಿಂದ ಸಂಗ್ರಹಿತಗೊಂಡ ಮಾಹಿತಿಗಳನ್ನು ಇಟ್ಟಕೊಂಡು ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರದ ಕುರಿತು ವಿಮರ್ಶಾತ್ಮಕವಾಗಿ ಹಾಗೂ ವಿಶ್ಲೇಶಣಾತ್ಮಕವಾಗಿ ನೋಡುವ ಮತ್ತು ಅಧ್ಯಯಿನಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ಸೈದ್ಧಾಂತಿಕ ಹಿನ್ನೆಲೆ**

ಚಲನೆ ಸಮಾಜದ ಪ್ರಮುಖ ಲಕ್ಷಣ ಸಾಮಾಜಿಕ ಚಲನೆ ಇಲ್ಲದೆ ವ್ಯಕ್ತಿ ಸಮುದಾಯ ಸಮಾಜದ ಹುಟ್ಟಿನಿಂದ ನಡೆದು ಬಂದ ಒಂದು ಪ್ರಕ್ರಿಯೆ. ಅದೇ ರೀತಿ ಎಲ್ಲಾ ಸಮುದಾಯ ಮತ್ತು ಸಮಾಜದಲ್ಲಿ

ಅತೀ ವೇಗವಾಗಿ ಇಲ್ಲವೆ ನಿಧಾನಗತಿಯಲ್ಲಿ ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ಚಲನೆ ಕಂಡು ಬರುತ್ತದೆ.

ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದಂತೆ ಹಲವು ಚಿಂತಕರು ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಆದರೆ ಅನೇಕ ಸಿದ್ಧಾಂತಗಳು ಕಾಲಾನುಗತಿಯಲ್ಲಿ ಹೊಸ ಸಿದ್ಧಾಂತಗಳ ಅನುಗುಣವಾಗಿ ಬದಲಾವಣೆ ಹೊಂದುತ್ತವೆ. ಸಮಾಜದ ಪ್ರಸ್ತುತ ಪರಿಸ್ಥಿತಿಗೆ ಕಾರಣಗಳು ಕೆಲವೊಮ್ಮೆ ಸಿಗುವುದಿಲ್ಲ. ಅಂತಹ ಸಂದರ್ಭದಲ್ಲಿ ಅವುಗಳ ಇತಿಹಾಸವನ್ನು ಹೊಕ್ಕು ನೋಡಬೇಕಾಗುತ್ತದೆ. ವ್ಯಕ್ತಿ, ಸಮಾಜ ಹಾಗೂ ಬೇರೆಬೇರೆ ಸಾಮಾಜಿಕ ವ್ಯವಸ್ಥೆಗಳು ಹೇಗೆ ನಡೆದುಕೊಂಡು ಬಂದಿವೆ ಎಂಬುವುದನ್ನು ವಿಕಾಸಾತ್ಮಕ ದೃಷ್ಟಿಕೋನದಲ್ಲಿ ನೋಡಲಾಗಿದೆ. ಈ ಸಿದ್ಧಾಂತದಲ್ಲಿ ಚಾರ್ಲ ಡಾರ್ವಿನ್, ವೆಬರ್, ಇ ಬಿ ಟೇಲರ್, ಎಚ್ ಮಾರ್ಗನ್, ಹರ್ಬರ್ಟ ಸ್ಪೆನ್ಸರ್, ಅಗಸ್ಟ್ ಕೋಮ್ಟ್, ಇವರುಗಳ ವಿಕಾಸ ತತ್ವದ ಮೂಲ ಅಂಶಗಳ ಮೂಲಕ ಸಮಾಜವು ಸರಳತೆಯಿಂದ ಸಂಕೀರ್ಣತೆಯ ಕಡೆಗೆ. ಕಾಲಾನುಕ್ರಮದಲ್ಲಿ ಬದಲಾವಣೆಯೊಂದಿಗೆ ನಡೆದು ಬಂದಿದೆ ಎಂಬುದನ್ನು ಸಮಾಜಶಾಸ್ತ್ರಜ್ಞರ ಚಿಂತನೆಯಿಂದ ಅರಿಯಬಹುದಾಗಿದೆ. ಇದಕ್ಕೆ ಪೂರಕವಾಗಿ ಸ್ಪೆಂಗ್ಲರ್, ಸೊರೋಕಿನ್, ಆರ್ನಾಲ್ಡ್, ಟಾಯಂಬಿ, ಒಚರ್-ಡಿ-ಲಾಪೊ, ವಿಲ್ಪ್ರೆಡ್ ಪ್ಯಾರೆಟೋ ಮುಂತಾದ ಸಮಾಜಶಾಸ್ತ್ರಜ್ಞರು ಸಾಮಾಜಿಕ ಬದಲಾವಣೆಯು ಯಾವಾಗಲೂ ಚಲಿಸುತ್ತಿರುವ ಸ್ಥಿತಿಯಲ್ಲಿರುವುದರಿಂದ ಇದನ್ನು ಚಕ್ರಗತಿಗೆ ಹೋಲಿಸಿದ್ದಾರೆ. ಸಾಮಾಜಿಕ ಪರಿವರ್ತನೆಯು ಸಾಮೂಹಿಕವಾಗಿ ಬದಲಾಗುತ್ತಿರುತ್ತದೆ. ಈ ತತ್ವದ ಮೂಲ ನಂಬಿಕೆಯೆಂದರೆ ನಾಗರಿಕತೆಯ ಏಳುಬೀಳು ಅವುಗಳ ಬೆಳವಣಿಗೆ ಮತ್ತು ಅವನತಿಯ ವಿವಿಧ ಮಾದರಿಗಳನ್ನು ತಿಳಿಸುವುದಾಗಿದೆ. ಪ್ರತಿಯೊಂದು ಸಮುದಾಯವು ಆರಂಭಿಕ ಹಂತ, ಮಧ್ಯಮ ಹಂತ, ಸಂಪೂರ್ಣ ಬೆಳವಣಿಗೆಯ ಹಂತ, ಸಿಥಿಲತೆಯ ಹಂತ ಹಾಗೂ ಅವನತಿಯ ಹಂತಗಳ ಮೂಲಕ ಬದಲಾವಣೆ ಹೊಂದುತ್ತದೆ ಎಂದು ಸಮಾಜ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ಒಂದು ಸಮುದಾಯವು ಬೆಳೆಯಬೇಕಾದರೆ ಹಲವು ಸಮಾಜಶಾಸ್ತ್ರಜ್ಞರ ಪ್ರಕಾರ ಚಕ್ರಗತಿಯ ಬೆಳವಣಿಗೆ ಕಂಡುಕೊಳ್ಳಲೇಬೇಕು. ಆದ್ದರಿಂದ ಚಕ್ರಗತಿಯ ಸಿದ್ಧಾಂತದ ಮೂಲಕ ಈ ಅಧ್ಯಯನವನ್ನು ಕಟ್ಟಿಕೊಡುವಂತಹ ಪ್ರಯತ್ನ ಮಾಡಲಾಗಿದೆ. ಹೀಗೆ ರೂಪಿತವಾದ ಸಿದ್ಧಾಂತದ ಮೂಲಕ ಲಾಳಗೊಂಡ ಸಮುದಾಯವು ಮೂಲ ಬುಡಕಟ್ಟು ಸಮುದಾಯವಾಗಿದ್ದು, ಗೊಂಡ ಸಮುದಾಯದಿಂದ ಕವಲೊಡೆದು ನಂತರದ ದಿನಗಳಲ್ಲಿ ಇದು ಒಂದು ಸಮುದಾಯವಾಗಿ ಕಂಡುಬಂದಿದೆ. ಈ ಹಿನ್ನೆಲೆಯಲ್ಲಿ ಸಂಶೋಧನಾ ಅಧ್ಯಯನವನ್ನು ರೂಪಿಸಲಾಗಿದೆ.

### ೧.೭ ಅಧ್ಯಯನದ ಮಹತ್ವ

೧೧ ಮತ್ತು ೧೨ ನೇ ಶತಮಾನದ ಭಾರತೀಯ ಸಮಾಜದಲ್ಲಿ ಬಹಳ ಮಹತ್ವದ ಯುಗ. ಕಾರಣ ಅನೇಕ ಸಾಮಾಜಿಕ ಕ್ರಾಂತಿಗಳು ಈ ಯುಗದಲ್ಲಿ ಆರಂಭವಾಗಿದ್ದವು. ಈ ಕ್ರಾಂತಿಗಳಿಗೆ ೮ ಮತ್ತು ೯ ನೇ ಶತಮಾನದಲ್ಲಿನ ಹರಿದಾಸ ಸಾಹಿತ್ಯಗಳು, ಭಕ್ತಿಚಳುವಳಿಗಳು ಹಾಗೂ ೧೨ನೇ ಶತಮಾನದ ವಚನಕಾರರ ಚಳುವಳಿಗಳು ಪೂರಕವಾಗಿದ್ದವು. ಕಾರಣ ಅನೇಕ ಸಮಾಜ ಸುಧಾರಕರುಗಳು

ಹಲವು ಹಾದಿಯಲ್ಲಿ ತಮ್ಮದೇ ಆದ ತತ್ವ ಬೋಧನೆಗಳನ್ನು ಮತ್ತು ಧರ್ಮಗಳಲ್ಲಿನ ಮತಾವಲಂಬನೆಗೆ ಪರೋಕ್ಷವಾಗಿ ಪ್ರಚೋದನೆಯನ್ನು ನೀಡಿದರು. ಇದರ ಫಲವಾಗಿ ಅನೇಕ ಕೆಳವರ್ಗದ ಮತ್ತು ಮಧ್ಯಮ ವರ್ಗದ ಜನರು ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಳ್ಳಲು ಮತಾಂತರ ಪ್ರಕ್ರಿಯೆಗೆ ಒಳಪಟ್ಟರು ಇದೂವರೆಗೂ ಇಲ್ಲದ ಲಿಂಗಾಯತ ಎನ್ನುವ ಹೊಸದೊಂದು ಸಮುದಾಯ ಬಸವಣ್ಣನ ಲಿಂಗೈಕ್ಯರಾದ ನಂತರ ಚಿಗುರೊಡೆಯಿತು. ಲಿಂಗಾಯತ ಉಪಪಂಗಡಗಳಲ್ಲಿ ಒಟ್ಟು ೩೮ ಸಮುದಾಯಗಳು ಬೇರೆಬೇರೆ ಪೀಠಗಳಲ್ಲಿ ತಮ್ಮ ಸ್ಥಾನ ಪಡೆದು ಅದರ ಅನುಯಾಯಿಗಳಾದವು ಅಂತಹ ಪ್ರಕ್ರಿಯೆಗೆ ಒಳಗಾದ ಸಮುದಾಯದಲ್ಲಿ ಲಾಳಗೊಂಡ ಸಮುದಾಯವು ಒಂದಾಗಿದೆ. ಮಧ್ಯಭಾರತದಲ್ಲಿ ಅರಸೊತ್ತಿಗೆಯ ಅವನತಿಯ ನಂತರ ಆರ್ಯರ ಆಕ್ರಮಣಕ್ಕೆ ತುತ್ತಾಗಿ ತಮ್ಮನ್ನು ಕಾಪಾಡಿಕೊಳ್ಳಲು ದಕ್ಷಿಣಭಾರತಕ್ಕೆ ಬಂದು ನದಿಮುಖಜ ಭೂಮಿಗಳಲ್ಲಿ ನೆಲೆಯೂರಿ ಬದುಕುತ್ತಿದ್ದಾರೆ. ಕೃಷಿ ಮತ್ತು ಪಶುಪಾಲನೆಯನ್ನು ಇವರ ಮುಖ್ಯ ಕುಸುಬನ್ನಾಗಿಸಿಕೊಂಡು ಜೀವನ ನಡೆಸುತ್ತಿದ್ದಾರೆ. ಪ್ರಸ್ತುತ ಸಮುದಾಯವು ತಮ್ಮ ಚಾರಿತ್ರಿಕ ಹಿನ್ನೆಲೆಯನ್ನು ಅರಿಯದೇ ಇರುವುದು ವಿಪರ್ಯಾಸವಾಗಿದೆ. ಲಾಳಗೊಂಡ ಸಮುದಾಯದ ಕುರಿತಾಗಿ ಇಲ್ಲಿಯವರೆಗೆ ಕೇವಲ ಲೇಖನಾತ್ಮಕ ಅಧ್ಯಯನಗಳು ನಡೆದಿವೆ. ಆದ್ದರಿಂದ ಸಮುದಾಯದ ಸಮಗ್ರ ಅಧ್ಯಯನ ಮಾಡುವ ಅನಿವಾರ್ಯತೆಯನ್ನು ಹೋಗಲಾಡಿಸಲು ಅಧ್ಯಯನದ ಅಗತ್ಯವಿದೆ.

ಲಾಳಗೊಂಡ ಸಮುದಾಯದ ಕುರಿತು ಅತೀ ಕಡಿಮೆ ಅಧ್ಯಯನಗಳು ನಡೆದಿರುತ್ತವೆ, ಬಹುತೇಕ ಅಧ್ಯಯನಗಳು ಐತಿಹಾಸಿಕ ದೃಷ್ಟಿಕೋನದಲ್ಲಿ ನಡೆದಿರುವುದೇ ಆಗಿವೆ ಇದೂವರೆಗೂ ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ಅಧ್ಯಯನಗಳು ನಡೆದಿರುವುದು ತೀರ ವಿರಳ, ಲಾಳಗೊಂಡ ಸಮುದಾಯವು ಪ್ರಸ್ತುತ ದಿನಗಳಲ್ಲಿ ವೀರಶೈವ ಲಿಂಗಾಯತ ಸಮುದಾಯದಲ್ಲಿ ಗುರುತಿಸಿಕೊಳ್ಳುತ್ತಿದೆ. ಆದರೂ ಈ ಸಮುದಾಯವು ಇನ್ನೂ ಸಮಾಜದ ಉನ್ನತಸ್ಥಿತಿಗೆ ಬಾರದಿರುವುದರ ಕಾರಣಗಳು ಅಧ್ಯಯನಗಳಿಂದ ತಿಳಿದುಬರುತ್ತದೆ. ಈ ಸಮುದಾಯದ ಉನ್ನತಿಗಾಗಿ ಅಧ್ಯಯನಗಳು, ಸಾಮಾಜಿಕ ಅವಕಾಶಗಳು, ಅಭಿವೃದ್ಧಿ ಕಾರ್ಯಗಳ ಪ್ರಯತ್ನ ನಡೆಯಬೇಕಿದೆ. ಆದ್ದರಿಂದ ಲಾಳಗೊಂಡರ ಇತಿಹಾಸ, ಸಂಸ್ಕೃತಿ, ಸಾಮಾಜಿಕಚಲನೆ ಮತ್ತು ಅದರ ಸ್ಥಿತ್ಯಂತರದ ಕುರಿತು ಅಧ್ಯಯನ ದೃಷ್ಟಿಯಿಂದ ಗಮನಿಸಲಾಗಿದೆ.

ಬದಲಾವಣೆ ಎನ್ನುವುದು ಪ್ರಕೃತಿಯ ಸಹಜ ನಿಯಮವಾಗಿದೆ. ಸಮಾಜವು ನಿತ್ಯ ಪರಿವರ್ತನಾಶೀಲವಾದುದು ಇದಕ್ಕೆ ಮಾನವ ಸಮಾಜವು ಕೂಡ ಹೊರತಾಗಿಲ್ಲ ಇಲ್ಲಿ ಗುಣಾತ್ಮಕ ಬದಲಾವಣೆಯು ಸಮಾಜದ ಬೆಳವಣಿಗೆಯ, ಪ್ರಗತಿಯ ದ್ಯೂತಕವಾಗಿರುತ್ತದೆ. ಇದು ಆರೋಗ್ಯವಂತ ಸಮಾಜದ ಲಕ್ಷಣವು ಹೌದು ಅಗತ್ಯಕ್ಕೆ ಅನುಗುಣವಾಗಿ ಬದಲಾಗದ ಸಮಾಜ ಉತ್ತಮವಾದ ಸಮಾಜವಾಗಲಾರದು. ಈ ಹಿನ್ನೆಲೆಯಲ್ಲಿ ಲಾಳಗೊಂಡ ಸಮುದಾಯದ ಚಲನಶೀಲತೆಯನ್ನು ಗುರುತಿಸಲಾಗಿದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರವು ಅನೇಕ ಸಮುದಾಯಗಳು ಶೋಚನಿಯ ಬದುಕು ಸಾಗಿಸುತ್ತಿವೆ. ಇದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇಂತಹ ಸಮುದಾಯಗಳಲ್ಲಿ ಲಾಳಗೊಂಡ

ಸಮುದಾಯವು ಒಂದು. ಆದರೆ ಲಾಳಗೊಂಡ ಸಮುದಾಯವು ಸರ್ಕಾರದ ಜಾತಿವಾರು ಮೀಸಲಾತಿ ಪಟ್ಟಿಯಲ್ಲಿ ಕಾಣಸಿಗುವುದಿಲ್ಲ. ಈ ಸಮುದಾಯ ಹೇಗೆ ಬಂತು? ಅದರ ಮೂಲ ಏನು? ಅದರ ಸದ್ಯದ ಸ್ಥಿತ್ಯಂತರ ಯಾವ ರೀತಿ ಇದೆ? ಎನ್ನುವುದರ ಕುರಿತು ಅಧ್ಯಯನ ನಡೆಸುವುದು ಅವಶ್ಯಕವಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು, ಹಿಂದುಳಿದ ವರ್ಗಗಳ ಬಗ್ಗೆ ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿದ್ದರೂ ಬಹುತೇಕ ರಾಜಕೀಯ, ಸಾಹಿತ್ಯಿಕ ಮತ್ತು ಆರ್ಥಿಕ ದೃಷ್ಟಿಕೋನದಿಂದ ನಡೆದಿರುವವುಗಳೇ ಆಗಿವೆ. ಇದುವರೆಗೆ ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ನಡೆದಿಲ್ಲ. ಹಿಂದುಳಿದ ಸಮುದಾಯಗಳು ಭಾರತದ ಜಾತಿವ್ಯವಸ್ಥೆಯಲ್ಲಿ ಹಿಂದುಳಿದ ಜನ ವರ್ಗಗಳನ್ನು ಸೂಚಿಸಿದವು. ಈ ದೃಷ್ಟಿಯಿಂದ "ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ" ಈ ಕುರಿತು ವಿವರಣಾತ್ಮಕವಾದ ಅಧ್ಯಯನವು ಬಹಳ ಮಹತ್ವದ್ದಾಗಿದೆ. ಅಲ್ಲದೆ,

• ಲಾಳಗೊಂಡರು ತಮ್ಮದೇ ಆದ ಪ್ರತ್ಯೇಕ ಸಂವಿಧಾನ ಬದ್ಧವಾದ ಸ್ಥಾನಮಾನವನ್ನು ಹೊಂದುವಲ್ಲಿ ವಿಫಲರಾಗುತ್ತಿದ್ದಾರೆ, ಇವರು ಆದಿವಾಸಿಗಳಲ್ಲಿ ಮೊದಲಿಗರು, ಆದರೆ ರಾಜರ ಆಡಳಿತ ಮತ್ತು ಬ್ರಿಟಿಷರ ಆಡಳಿತದಿಂದಾಗಿ ಒಂದು ಕಡೆಯಿಂದ ಚದುರಿ ನೆಲೆನಿಂತ ಜೀವನವನ್ನು ನಡೆಸುತ್ತಿದ್ದಾರೆ. ಆದರೆ ಸರ್ಕಾರವು ಈ ಸಮುದಾಯದವರನ್ನು ನಿರ್ಧಿಷ್ಟವಾಗಿ ಗುರುತಿಸಿ ಸಂವಿಧಾನ ಬದ್ಧವಾದ ಜಾತಿವಾರು ಪಟ್ಟಿಯಲ್ಲಿ ಇಡುವುದು ಕಷ್ಟಸಾಧ್ಯವಾಗಿದೆ. ಆದ್ದರಿಂದ ಈ ಸಮುದಾಯದ ಅಧ್ಯಯನವು ಮುಖ್ಯವಾಗಿದೆ.

• ಈ ಸಮುದಾಯವು ಯಾವುದೇ ಒಂದು ಗುಂಪಿಗೆ ಸೇರದ ಅತ್ಯಂತ ಅತಂತ್ರ ಸ್ಥಿತಿಯಲ್ಲಿರುವ ಸಮುದಾಯವಾಗಿದೆ. ಲಾಳಗೊಂಡ ಸಮುದಾಯದ ಪರಂಪರೆ ಹೇಗಿತ್ತು? ಪ್ರಸ್ತುತ ಹೇಗಿದೆ? ಕರ್ನಾಟಕದಲ್ಲಿ ಹಿಂದುಳಿದವರ ಲಕ್ಷಣಗಳನ್ನು ಈ ಲಾಳಗೊಂಡರು ಹೊಂದಿರುವುದನ್ನು ಕುರಿತು ಅಧ್ಯಯನ ನಡೆಸುವುದು. ಇದರಿಂದ ಈ ಸಮುದಾಯದ ಅಭಿವೃದ್ಧಿಗೆ ಹಾಗು ಇವುಗಳ ಸ್ಥಿತಿಗಳ ಸುಧಾರಣೆಗೆ ಅಧ್ಯಯನವು ಮಹತ್ವದ್ದಾಗಿದೆ.

• ಲಾಳಗೊಂಡರು ಕಾಲಾಂತರದಲ್ಲಿ ಶೈವ, ವೈಷ್ಣವ ದೇವಗಳ ಪ್ರಭಾವಕ್ಕೊಳಗಾಗಿ ಹಲವರು ಶೈವರಾದರೆ ಹಲವರು ವೈಷ್ಣವರಾದರು. ಕೃಷ್ಣಾ, ತುಂಗಭದ್ರಾ ಜಲಾಶಯದ ಮಧ್ಯ ಕರ್ನಾಟಕದ ಲಾಳಗೊಂಡರು ಲಿಂಗಧಾರಿ ಶೈವರು ಹಾಗೂ ವೈಷ್ಣವ ಮತಾವಲಂಬಿಗಳಾದರು. ಕೃಷಿಕ ಮತ್ತು ಎತ್ತು ಬಾಡಿಗೆಯವರು ಲಿಂಗಧಾರಿ ಲಾಳಗೊಂಡರಾದರೆ ತೋಟಗಾರಿಕೆ ಮಣ್ಣಿನ ಕೆಲಸ ಮತ್ತು ವ್ಯಾಪಾರವನ್ನು ಸಾಂಪ್ರದಾಯಿಕ ವೃತ್ತಿಯನ್ನಾಗಿಸಿಕೊಂಡವರು ವೈಷ್ಣವ ಲಾಳಗೊಂಡರಾದರು ಎಂದು ಒಂದು ಅಧ್ಯಯನದ ಹೇಳಿಕೆ. ಆದ್ದರಿಂದ ಈ ಅಧ್ಯಯನವು ಮಹತ್ವದ್ದಾಗಿದೆ.

• ಈವರೆಗೂ ಲಾಳಗೊಂಡ ಸಮುದಾಯದ ಕುರಿತು ಒಂದೂ ಅಧ್ಯಯನಗಳು ಹೊರಬಂದಿಲ್ಲ. ಪ್ರಸ್ತುತ ಅಧ್ಯಯನದಿಂದ ಲಾಳಗೊಂಡ ಸಮುದಾಯವನ್ನು ಅಧ್ಯಯನಿಸಿ ಆ ಸಮುದಾಯದ ಸಾಂಸ್ಕೃತಿಕ, ಸಾಮಾಜಿಕ ಜೀವನ ಬಹು ಪುರಾತನವಾದದು ಎಂದು ತೋರಿಸುವ ಅಗತ್ಯವಿದೆ. ಈ

ಅಧ್ಯಯನದಿಂದ ಸಮಾಜಕ್ಕೆ ಒಂದು ನಿದರ್ಶನವಾಗುವುದೆಂದು ಭಾವಿಸಿದ್ದೇನೆ. ಅಲ್ಲದೆ ಲಾಳಗೊಂಡರು ಸಂವಿಧಾನದ ಯಾವುದೇ ಪಟ್ಟಿಯಲ್ಲಿ ಸೂಕ್ತ ಸ್ಥಾನ ಇರಲಿ? ಸ್ಥಾನವೇ ಇಲ್ಲವಾಗಿದೆ. ಆದ್ದರಿಂದ ಜ್ಞಾನಶಾಖೆಗೆ ಲಾಳಗೊಂಡರ ಅಧ್ಯಯನ ಮಹತ್ವದ್ದಾಗಿದೆ.

**೧.೮ ಅಧ್ಯಯನದ ವಿನ್ಯಾಸ ಅಥವಾ ಸ್ವರೂಪ**

ಲಾಳಗೊಂಡರ ಸಾಮಾಜಿಕ ಚಲನೆ ಮತ್ತು ಸ್ಥಿತ್ಯಂತರ ಎಂಬ ಶೀರ್ಷಿಕೆ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಂಡಿದ್ದು ಪ್ರಶ್ನಾವಳಿ, ಸಂದರ್ಶನ, ವ್ಯಕ್ತಿ ಅಧ್ಯಯನ, ಅವಲೋಕನದ ಮೂಲಕ ಮಾಹಿತಿ ಸಂಗ್ರಹಿಸಿ ಸಂಶೋಧನಾ ವಿನ್ಯಾಸವನ್ನು ರೂಪಿಸಿಕೊಳ್ಳಲಾಗಿದೆ. ಇವುಗಳನ್ನು ಬಳಸಿಕೊಂಡು ಸಂಶೋಧನಾ ಸ್ವರೂಪವನ್ನು ರಚಿಸಿಕೊಂಡು ಒಟ್ಟು ೫ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

ಈ ಸಂಶೋಧನಾ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನೊಳಗೊಂಡಿದೆ. ಮೊದಲನೇ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ಅಧ್ಯಯನದ ವಿನ್ಯಾಸ ಮತ್ತು ವಿಧಾನ, ಪ್ರಾಕ್‌ಕಲ್ಪನೆಗಳು ಹಾಗೂ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

ಎರಡನೇ ಪ್ರಮುಖ ಅಧ್ಯಾಯವೆಂದರೆ ಲಾಳಗೊಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆ, ಲಾಳಗೊಂಡರ ಜೀವನವನ್ನು ಪ್ರಮುಖವಾಗಿ ಲಾಳಗೊಂಡರ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ. ಪ್ರಧಾನವಾಗಿ ಈ ಅಧ್ಯಾಯದಲ್ಲಿ ಲಾಳಗೊಂಡ ಪದದ ನಿಷ್ಪತ್ತಿ ಮತ್ತು ಅರ್ಥದ ಕುರಿತು ವಿವರಿಸಲಾಗಿದೆ. ನಂತರ ಲಾಳಗೊಂಡರು ಮತ್ತು ಗೊಂಡ ಶಬ್ದಗಳು ಹೇಗೆ ಪರಸ್ಪರ ಭಿನ್ನವಾಗಿಲ್ಲ ಎಂಬುವುದನ್ನು ಗೊಂಡಶಬ್ದದ ಉತ್ಪತ್ತಿಯಲ್ಲಿ ತಿಳಿದುಕೊಳ್ಳಲಾಗಿದೆ. ನಂತರದ ಉಪಅಧ್ಯಾಯದಲ್ಲಿ ಲಾಳಗೊಂಡರ ಹುಟ್ಟಿನ ಕುರಿತು ಇರುವ ಐತಿಹ್ಯಗಳು, ಪೌರಾಣಿಕ ಮತ್ತು ದಂತಕತೆಗಳನ್ನು ಚರ್ಚಿಸಲಾಗಿದೆ. ನಂತರದ ನಾಲ್ಕನೇ ಉಪಅಧ್ಯಾಯದಲ್ಲಿ ಲಾಳಗೊಂಡರ ನೆಲೆ, ಹಿನ್ನೆಲೆ, ಲಾಂಜಿಘಡದ ಕುರಿತು ವಿವರಿಸಲಾಗಿದೆ. ನಂತರ ಲಾಳಗೊಂಡರ ಪ್ರಭೇಧಗಳು ಹಾಗೂ ಭಾರತದ ಇತರೆ ರಾಜ್ಯಗಳಲ್ಲಿ ಲಾಳಗೊಂಡರನ್ನು ಭಿನ್ನ ಹೆಸರುಗಳಿಂದ ಕರೆಯುವರು ಎನ್ನುವುದನ್ನು ತಿಳಿಸಲಾಗಿದೆ. ಲಾಳಗೊಂಡರ ಜನಸಂಖ್ಯೆಯ ಕುರಿತು ವಿವರಿಸಲಾಗಿದ್ದು ಈ ಎಲ್ಲಾ ವಿವರಣೆಗಳು ಈ ಅಧ್ಯಾಯದಲ್ಲಿ ಓಳಪಟ್ಟಿವೆ.

ಮೂರನೇ ಅಧ್ಯಾಯವು ಲಾಳಗೊಂಡರ ಸಾಮಾಜಿಕ ಚಲನೆಯ ಕುರಿತು ಹೇಳುತ್ತದೆ. ಇದರಲ್ಲಿ ಮತ್ತೆ ಉಪಅಧ್ಯಾಯಗಳನ್ನು ಮಾಡಲಾಗಿದ್ದು, ಮೊದಲು ಲೇಖಕರ ಪರಾಮರ್ಶನದ ಕುರಿತು ಮಾಹಿತಿಯನ್ನು ಕ್ರೂಡಿಕರಿಸುವ ಮುಖಾಂತರ ಲಾಳಗೊಂಡರು ಮತ್ತು ಇತರೆ ಗೊಂಡರ ಸಂಬಂಧವನ್ನು ವಿವರಿಸಲಾಗಿದೆ. ಎರಡನೇ ಉಪಅಧ್ಯಾಯದಲ್ಲಿ ಗೊಂಡರು ಮತ್ತು ರಾಜಗೊಂಡರ ಕುರಿತು ವಿವರಿಸಲಾಗಿದೆ. ಅದರಲ್ಲಿ ಗೊಂಡರಿಂದ ಬಂದಿರುವ ಇತರೆ ಸಮುದಾಯಗಳನ್ನು ತಿಳಿಸಲಾಗಿದೆ. ಮೂರನೇ ಉಪ ಅಧ್ಯಾಯದಲ್ಲಿ ಧಾರ್ಮಿಕ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಆಧಾರಗಳನ್ನು ಗುರುತಿಸಲಾಗಿದೆ. ನಂತರ ಹಾಲುಮತ ಪುರಾಣದಲ್ಲಿ ಲಾಳಗೊಂಡರ ಕುರಿತು ವ್ಯಕ್ತವಾಗಿರುವ

ಹಿನ್ನಲೆಯನ್ನು ತಿಳಿಸಲಾಗಿದೆ. ನಂತರದಲ್ಲಿ ಕುರುಬರ ಹಳ್ಳಿ, ಲಾಲಗೊಂಡನಹಳ್ಳಿಯ ಕುರಿತು ವಿವರಿಸಲಾಗಿದ್ದು ಅವುಗಳ ಹಿನ್ನಲೆಯನ್ನು ಈ ಉಪಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಲಾಳಗೊಂಡರ ಸಾಂಪ್ರದಾಯಿಕ ಆಚರಣೆಗಳ ಕುರಿತು ವಿವರಿಸಲಾಗಿದೆ. ಲಾಳಗೊಂಡರ ಸಾಂಪ್ರದಾಯಿಕ ನಂಬಿಕೆಗಳು, ಆಚರಣೆಗಳು ಸಮಾಜ ಮತ್ತು ಕುಟುಂಬದ ನೆಲೆಯಲ್ಲಿ ವಿವರಿಸಲಾಗಿದೆ. ಲಾಳಗೊಂಡರು ಅನೇಕ ಆಚರಣೆಗಳನ್ನು ನಿತ್ಯ ನಿರ್ವಹಿಸುತ್ತಾರೆ. ಇವರು ತಮ್ಮ ದೈನಂದಿನ ದಿನದಲ್ಲಿ ಇಷ್ಟಲಿಂಗ ಪೂಜಿಸುತ್ತಾರೆ. ಲಾಳಗೊಂಡರ ದೇವರುಗಳು, ಹಬ್ಬಗಳು, ದೈವಗಳ ಕುರಿತು ಪರಂಪರಾಗತವಾಗಿ ಬಂದಿರುವ ರೂಢಿಗಳು ಆಚರಣೆಯಲ್ಲಿರುವುದು ಕಂಡುಬರುತ್ತದೆ. ಇವರು ಸೋಮವಾರವನ್ನು ಪವಿತ್ರ ದಿನವಾಗಿ ಪೂಜಿಸುವರು ಮತ್ತು ನಂದಿ ಪೂಜೆಯನ್ನು ಕಡ್ಡಾಯವಾಗಿ ಮಾಡುವರು ಹಾಗೆ ಲಾಳಗೊಂಡರ ಪ್ರಭೇಧಗಳನ್ನು ಮತ್ತು ಗೊಂಡರ ನೆಲೆಗಳ ಕುರಿತು ವಿವರಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಲಾಳಗೊಂಡರ ಪ್ರಸ್ತುತ ಸ್ಥಿತಿಗತಿ ಕುರಿತು ವಿವರಿಸಲಾಗಿದೆ. ಲಾಳಗೊಂಡ ಸಮುದಾಯದ ಜಿಲ್ಲಾವಾರು ಲಿಂಗಾನುಪಾತದ ಕುರಿತು ಚರ್ಚಿಸಲಾಗಿದೆ. ಲಾಳಗೊಂಡ ಸಮುದಾಯದ ಶೈಕ್ಷಣಿಕ, ಕೃಷಿ, ಉದ್ಯೋಗ, ವೈವಾಹಿಕ ಸ್ಥಿತಿಗತಿ ಮುಂತಾದವುಗಳ ಕುರಿತು ಕೋಷ್ಟಕದೊಂದಿಗೆ ವಿವರಿಸಲಾಗಿದೆ ಹಾಗೂ ಲಾಳಗೊಂಡರ ಜಿಲ್ಲಾವಾರು ಜನಸಂಖ್ಯೆ ಕುರಿತು ಮಾಹಿತಿ ನೀಡಲಾಗಿದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಅಧ್ಯಾಯ ಐದನ್ನು ವಿವರಿಸಲಾಗಿದೆ.

ಅಧ್ಯಾಯ ಆರು ಸಮಾರೋಪವಾಗಿದೆ. ಇದರಲ್ಲಿ ಅಧ್ಯಯನದ ತುಲನೆಯನ್ನು ಮಾಡಲಾಗಿದೆ ಮತ್ತು ಫಲಿತತೆಗಳನ್ನು ವಿವರಣಾತ್ಮಕವಾಗಿ ವಿವರಿಸಲಾಗಿದೆ. ಅನುಬಂಧಗಳನ್ನು ನೀಡಲಾಗಿದ್ದು, ನಂತರ ವಕ್ತೃಗಳ ವಿವರ, ಲಾಳಗೊಂಡರ ವಂಶವೃಕ್ಷ, ಕುರುಗೋಡು ನೀಲಮ್ಮನ ವಂಶವೃಕ್ಷ ಅದೇ ರೀತಿ ಗೊಂಡವ್ವಾನ್ ಖಂಡದ ನಕಾಶೆಯನ್ನು ಜೋಡಿಸಲಾಗಿದೆ. ಜೊತೆಗೆ ಲಾಳಗೊಂಡ ಸಮುದಾಯದ ಛಾಯಾ ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಅದರೊಂದಿಗೆ ಇಡೀ ಅಧ್ಯಯನಕ್ಕೆ ಪೂರಕವಾದ ಅಭ್ಯಾಸ ಸೂಚಿಯನ್ನು ನೀಡಲಾಗಿದೆ.

**ಆಧಾರ ಗ್ರಂಥಗಳು**

ಕಲಬುರ್ಗಿ ಎಂ ಎಂ, *ಸಿದ್ಧಮಂಕ ಚರಿತೆ* (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ:೨೦೦೪).

ಕೆಳದಿ ವೆಂಕಟೇಶ ಜೋಯಿಸ, *ಕೆಳದಿ ಅರಸರ ಶಾಸನ ಸಂಪುಟ* (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ:೧೯೯೧).

ಪಂಪನ ಗೌಡ ಎಂ ಆರ್, *ಗೊಂಡ್ವಾನ ಸಂಸ್ಕೃತಿ* (ಲಾಳಗೊಂಡೇಶ್ವರ ಎಜುಕೇಶನ್ ಟ್ರಸ್ಟ್ (ರಿ), ಶಾನವಾಸಪುರ:೨೦೧೩).

ಪ್ರಶಾಂತ್ ಹೆಚ್ ಡಿ, *ಕರ್ನಾಟಕ ರಾಜ್ಯ ಕೋಶ-೦೪, ಜನ ಸಮುದಾಯ ಸಂಪುಟ*, (ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ವಿದ್ಯಾರಣ್ಯ, ಹಂಪಿ:೨೦೦೦).

ಬೋನಾ ಬಸವರಾಜ್, *ಕುರುಬರ ಗೋತ್ರಗಳು ಹಾಗೂ ಬೆಡಗುಗಳು*, ಲೇಖನ: ಡಾ ಶ್ರೀ ರಾಮ್ ಇಟ್ಟಣ್ಣನ್ನವರ್(ಪ್ರ:ಸಂ), ಹಾಲಕೆನೆ (ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ಬಿಜಾಪುರ:೨೦೦೨).

ಮೇತ್ರಿ ಕೆ ಎಂ ಮತ್ತು ಮೃತ್ಯುಂಜಯ ರುಮಾಲೆ, *ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ* (ಕನ್ನಡ ಸಾಹಿತ್ಯ ಪರಿಷತ್ತು, ಬಳ್ಳಾರಿ ಜಿಲ್ಲಾ ಘಟಕ:೨೦೦೮).

ವೀರಭದ್ರಗೌಡ ಜಿ(ಲೇ), *ಲಾಳಗೊಂಡ ಲಿಂಗಾಯತರು*, ಕಲಬುರ್ಗಿ ಎಂ ಎಂ(ಸಂ), *ಲಿಂಗಾಯತ, ಉಪಪಂಗಡಗಳ ದಾಖಲೀಕರಣ*, (ಎಂ ಎಸ್ ವಿ. ಎಜ್ಯುಕೇಶನ್ ಸೊಸೈಟಿ, ಎಂ ಎಸ್ ವಾಲಿ, ಇಳಕಲ್:೨೦೦೯).

ಹನುಮಂತಯ್ಯ ವಿ ಆರ್, *ಭಾರತ ದೇಶದ ಕುರುಬರ ಚರಿತ್ರೆ* (ಪ್ರತಿಭೆ ಪ್ರಕಾಶನ, ಮೈಸೂರು: ೧೯೯೬).

www.gondwana. dictionary.com (Lexico Publishing Group. Retrieved: 2010).

www.gondwanaland, merriam-webster online dictionary (Retrieved: 2010).

Herdekar Manjappa, *Basava-The Dimension of Universal Man* (H M S Granthamala:1966)

Houseman Greg, *Dispersal of Gondwanaland* (University of Leeds, Retrieved:2008).

Srinivas M N, Religion and Socity Among the Coorgs of South India(Clarendon press, Oxford:1952)

The New Encyclopedia Britannica (The University of Chicogo: 1992), Vol. 7

Thurston Edger and Rangachari K, *Castes and Tribes of Southren India* (Govt. Press, Madras:1909), Vol. 7

Tylore E B, *Primitive Culture* (Harper and Row, New York:1874)

# ಅಧ್ಯಾಯ: ಎರಡು

## ಲಾಳಗೊಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆ

೨.೧. ಗೊಂಡ ಶಬ್ದದ ಉತ್ಪತ್ತಿ

೨.೨. ಲಾಳಗೊಂಡ ಪದದ ನಿಷ್ಪತ್ತಿ ಮತ್ತು ಅರ್ಥ

೨.೩. ಲಾಳಗೊಂಡರ ಹುಟ್ಟಿನ ಐತಿಹ್ಯಗಳು, ಪೌರಾಣಿಕ ಮತ್ತು ದಂತ ಕತೆಗಳು

೨.೪. ಲಾಳಗೊಂಡರ ನೆಲೆಯ ಹಿನ್ನೆಲೆ

೨.೫. ಲಾಳಗೊಂಡರ ಹಿನ್ನೆಲೆ

೨.೬. ಲಾಂಜಿಫಥ

೨.೭. ಲಾಳಗೊಂಡರ ಪ್ರಬೇಧಗಳು

೨.೮. ಭಾರತದಲ್ಲಿ ಲಾಳಗೊಂಡರು

೨.೯. ಗೊಂಡರ ನೆಲೆಗಳು

೨.೧೦. ಲಾಳಗೊಂಡರ ಭೌಗೋಳಿಕತೆ

## ಅಧ್ಯಾಯ: ಎರಡು

# ಲಾಳಗೊಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆ

ಮಾನವನ ಕಾಲ್ಪನಿಕ ಹಂತದಲ್ಲಿ ಪ್ರಕೃತಿಯ ಜೊತೆ ಹೊಂದಾಣಿಕೆ ಮಾಡಿಕೊಳ್ಳಲು ಪ್ರಕೃತಿಯನ್ನು ಆರಾಧಿಸತೊಡಗಿದನು. ಇದಕ್ಕೆ ದೇವರು ಎಂಬ ಪರಿಕಲ್ಪನೆ ನೀಡಿ ಅದೊಂದು ಅದ್ಭುತ ಶಕ್ತಿಯೆಂದು ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದನು. ಮಾನವನು ವಲಸೆ ಜೀವನ ನಿಲ್ಲಿಸಿ ಒಂದೆಡೆ ನೆಲೆಸಿ ನಿಂತನು ಇದರಿಂದ ಹಳ್ಳಿಗಳು ಬೆಳವಣಿಗೆ ಹೊಂದಿದವು. ಮಾನವನ ವಿಚಾರವು ಹಂತಹಂತವಾಗಿ ವಿಕಾಸ ಹೊಂದುತ್ತಾ ಹೋಯಿತು. ಮಾನವನ ದಿನನಿತ್ಯ ಜೀವನ ಪ್ರಕೃತಿಯ ನಿಯಂತ್ರಣದಲ್ಲಿ ಸಾಗಿತು. ಈ ಸಮಯದಲ್ಲಿ ಸಾಮಾಜಿಕ ಸಂಸ್ಥೆಗಳು ಹುಟ್ಟಿಕೊಂಡವು ಅವುಗಳೇ ಕುಟುಂಬ, ಕುಲಗಳು. ಈ ಹಂತದಲ್ಲಿ ವಸ್ತು ಆರಾಧನೆ ಅಧಿಕವಾಗಿತ್ತು ಮಾನವನ ಬೌದ್ಧಿಕ ಬೆಳವಣಿಗೆ ಹೆಚ್ಚಾದಂತೆ ಬಹು ದೇವತಾರಾಧನೆ ಮಾಡಲು ಪ್ರಾರಂಭಿಸಿದನು, ದೇವರು ಸ್ವರ್ಗದಲ್ಲಿದ್ದಾನೆಂದು ದೇವರಿಗೆ ಹಲವು ತರಹದ ರೂಪ ಕೊಟ್ಟು ಪೂಜಿಸಲು ಪ್ರಾರಂಭಿಸಿದನು. ಪ್ರಕೃತಿ ಮತ್ತು ದೇವರ ನಡುವೆ ಸಂಬಂಧ ಕಲ್ಪಿಸಿ ಸಂಸ್ಕೃತಿ, ಸಂಪ್ರದಾಯಗಳನ್ನು ಹುಟ್ಟು ಹಾಕಿದನು. ಇಲ್ಲಿ ಅನೇಕ ಹಳ್ಳಿಗಳು ಬೆಳವಣಿಗೆ ಹೊಂದಿ ಸಣ್ಣಸಣ್ಣ ಸಾಮ್ರಾಜ್ಯಗಳು ಉದಯ ಹೊಂದಿದವು. ಗುಂಪಿಗೆ ಒಬ್ಬ ನಾಯಕನಂತೆ ರಾಜರ ಆಡಳಿತ ನಡೆಸಲು ಪ್ರಾರಂಭಿಸಿದರು. ಆಗ ಸಮಾಜದಲ್ಲಿ ಕಟ್ಟುನಿಟ್ಟಿನ ನಿಯಮಗಳನ್ನು ಪಾಲಿಸಲು ಬಲವಂತವಾಗಿ ಜನರ ಮೇಲೆ ಹೇರಲು ಪ್ರಾರಂಭಿಸಿದರು ಹೀಗೆಯೇ ದೇವರ ಪೂಜೆ ಮಾಡಬೇಕು ಎಂಬುದನ್ನು ಹೇಳಿದರು. ಅವರ ವರ್ತನೆಗಳನ್ನು ದೇವರ ಗುಡಿಗಳು ನಿಯಂತ್ರಿಸಿದವು, ಉದಾಹರಣೆಗೆ ಈಜಿಪ್ಟ್‌ನ ಫೇರೋ ಧರ್ಮವನ್ನು ಪಾಲಿಸಿಯೇ ಜನರು ಜೀವನ ನಡೆಸಿದರು. ನಂತರ ಯುರೋಪ್ ಸಾಮ್ರಾಜ್ಯಗಳಲ್ಲಿ ನಗರ ಜೀವನ ಪ್ರಾರಂಭವಾದವು ಕೋಮ್ಟ್ ಇದನ್ನು ಗ್ರೀಕರ ಅವದಿಯೆಂದು ಕರೆದನು. ಕಾರಣ ಇಲ್ಲಿ ಪ್ರಜಾಪ್ರಭುತ್ವದ ಆಳ್ವಿಕೆ ಬಂದಿತು ಜನರ ಶಕ್ತಿಯೇ ಇಲ್ಲಿ ಪ್ರಬಲವಾಯಿತು. ಕೆಲವು ಜನರು ಮುಖಂಡನನ್ನು ಆರಿಸಿ ಆಳ್ವಿಕೆ ಮಾಡಲು ಅನುಮತಿ ನೀಡಿದರು. ಈ ವಿಚಾರಧಾರೆಯಿಂದ ತತ್ವಜ್ಞಾನದ ಉದಯವಾಯಿತು ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್, ಹಿಪೋಕ್ರಟೀಸ್ ಮುಂತಾದ ಗ್ರೀಕ್ ತತ್ವಜ್ಞಾನಿಗಳು ತಮ್ಮ ತತ್ವವನ್ನು ಹೊರಚೆಲ್ಲಿದರು. ಹೀಗೆ ಮಾನವನ ಬೌದ್ಧಿಕ ಮಟ್ಟ ಹೆಚ್ಚಾದಂತೆ ಸೈಂಟ್‌ರ ಆಡಳಿತ ಆರಂಭವಾದವು. ಸಮಾಜದಲ್ಲಿ ಯಾರು ಶ್ರೀಮಂತ ವ್ಯಕ್ತಿಗಳಾಗಿರುತ್ತಾರೋ ಅವರು ಆಡಳಿತ ನಡೆಸಬೇಕಿತ್ತು. ಕುಟುಂಬದ ಕರ್ತನು ತನ್ನ ಕುಟುಂಬವನ್ನು

ಮಾತ್ರ ನೋಡಿಕೊಳ್ಳಲು ಪ್ರಾರಂಭಿಸಿದನು ಇದರಿಂದ ಸಮಾಜದಲ್ಲಿ ವರ್ಗಗಳು ನಿರ್ಮಾಣವಾದವು. ಸಮೂಹ ಜೀವನ ಜಟಿಲವಾದಂತೆ ಕಾನೂನುಗಳು ಬೆಳವಣಿಗೆ ಹೊಂದಿದವು ಇದನ್ನೇ ರೋಮ್ ಯುಗವೆಂದು ಕರೆಯಲಾಗುತ್ತದೆ. ಏಕ ದೇವತಾರಾಧನೆ ಬಲವಾದಂತೆ ದೇವರನ್ನು ತಂದೆ ಎಂದು ಪೂಜಿಸಲಾಯಿತು, ಮಾನವರನ್ನು ಅಣ್ಣ ತಮ್ಮಂದಿರೆಂದು ತಿಳಿದರು. ಚರ್ಚುಗಳು ರಾಜ್ಯದ ಮೂಲ ಸ್ಥಳಗಳಾದವು ಕ್ರೈಸ್ಥರು ಮತ್ತು ಆಟೋಮನ್ ಟರ್ಕರ ನಡುವೆ ಯುದ್ಧಗಳು ಆರಂಭವಾದವು ಇಲ್ಲಿಂದ ಯುದ್ಧಗಳು ಉಗಮವಾದವು. ನಿಯಮಗಳು ಮತ್ತು ಕಾನೂನುಗಳು ಮರುಬರೆಯಲ್ಪಟ್ಟವು ಮಾನವನ ಹಕ್ಕುಗಳು ನಿರ್ಮಾಣವಾದವು ಅಂತೆಯೇ ರೂಸೂ ಸಾಮಾಜಿಕ ಒಪ್ಪಂದದಲ್ಲಿ ಜನರ ಹಕ್ಕುಗಳ ಬಗ್ಗೆ ಬರೆದಿದ್ದಾನೆ. ನಂತರ ಮಾನವನು ಜ್ಞಾನಯುಕ್ತ ನಡತೆಯನ್ನು ಹೊಂದಿ ವಾಣಿಜ್ಯ ಮತ್ತು ವ್ಯಾಪಾರ ಮಾಡಲು ಜನರು ಬೇರೆಬೇರೆ ದೇಶಗಳಿಗೆ ವಲಸೆ ಹೋದರು ಅದರಲ್ಲೂ ಯುರೋಪಿಯನ್ನರು ಬೇರೆಬೇರೆ ದೇಶಗಳಿಗೆ ಹೆಚ್ಚು ವಲಸೆ ಹೋದರು. ಈ ಸಮಯದಲ್ಲಿ ವಿಶಾಲ ಭಾರತದಲ್ಲಿ ಅನೇಕ ಸಣ್ಣಪುಟ್ಟ ರಾಜ್ಯಗಳು ಮತ್ತು ಸಾಮ್ರಾಜ್ಯಗಳು ಆಳ್ವಿಕೆ ನಡೆಸುತ್ತಿದ್ದ ಕಾಲಾವಧಿಯಲ್ಲಿ ಭಾರತೀಯ ಉತ್ಪನ್ನಗಳಾದ ಸಂಬಾರಪದಾರ್ಥಗಳು, ಸೌಂದರ್ಯವರ್ಧಕ ವಸ್ತುಗಳಿಗಾಗಿ ಯುರೋಪಿಯನ್ನರು ಭಾರತೀಯರೊಂದಿಗೆ ವ್ಯವಹಾರ ಸಂಬಂಧ ಬೆಳೆಸಿದರು ಪರಿಣಾಮವಾಗಿ ಭಾರತದ ವಾಯುವ್ಯ ಭಾಗದ ಖೈಬರ್ ಮತ್ತು ಬೋಲನ್ ಕಣಿವೆಯ ಭೂಮಾರ್ಗದ ಮೂಲಕ ಯುರೋಪಿಯನ್ನರಿಗೆ ಸರಬರಾಜು ಆಗುತ್ತಿದ್ದವು. ಈ ವಸ್ತುಗಳು ಯುರೋಪಿನ ಜನತೆಗೆ ಅನಿವಾರ್ಯವು ಆದಾಗ ಅವುಗಳ ಬೇಡಿಕೆ ದಿನೆ ದಿನೇ ಹೆಚ್ಚಾಗತೊಡಗಿತು. ಇದಕ್ಕೆ ತಡೆಯೊಡ್ಡಿದ ಪ್ರಮುಖ ಘಟನೆ ೧೪೫೩ರಲ್ಲಿ ಟರ್ಕರು ಕಾನ್‌ಸ್ಟಂಟ್‌ನೋಪಲ್ ನಗರವನ್ನು ವಶಪಡಿಸಿಕೊಂಡು ಭಾರತ ಮತ್ತು ಯುರೋಪಿನ ಏಕೈಕ ಭೂಮಾರ್ಗವನ್ನೇ ಕಡಿತಗೊಳಿಸಿದರು. ಪರಿಣಾಮವಾಗಿ ಯುರೋಪಿನಲ್ಲಿ ಹುಟ್ಟಿಕೊಂಡ ಭೂಅನ್ವೇಷಣೆಗಳು ವಿಶ್ವದ ಹಲವು ದೇಶಗಳ ಸಾಂಸ್ಕೃತಿಕ ಪಲ್ಲಟಗಳಿಗೆ ಪ್ರಮುಖ ಕಾರಣವಾದವು. ೧೪೯೮ರಲ್ಲಿ ಪೋರ್ಚ್‌ಗೀಸ್‌ನ ನಾವಿಕನಾದ ವಾಸ್ಕೋಡಿಗಾಮನು ಜಲಮಾರ್ಗದ ಮೂಲಕ ಭಾರತಕ್ಕೆ ಬಂದಿಳಿದು ಕಡಿತಗೊಂಡಿದ್ದ ಭೂಮಾರ್ಗಕ್ಕೆ ಬದಲಿ ವ್ಯವಸ್ಥೆಯಾಗಿ ಜಲಮಾರ್ಗವನ್ನು ಕಂಡುಹಿಡಿದನು. ಇದರಿಂದ ಕ್ರಮವಾಗಿ ಪೋರ್ಚ್‌ಗೀಸರು, ಡಚ್ಚರು, ಫ್ರೆಂಚರು, ಇಂಗ್ಲಿಷರು ಭಾರತಕ್ಕೆ ಬಂದರು. ವ್ಯಾಪಾರಕ್ಕಾಗಿ ಮತ್ತು ತಮ್ಮ ದೇಶದ ಐಶರಾಮಿ ಬದುಕಿನ ಜನತೆಯ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಬಂದ ಯುರೋಪಿಯನ್ನರು, ಭಾರತದಲ್ಲಿನ ಅರಾಜಕತೆ, ಆಂತರಿಕ ಮತ್ಸರ, ಅಸಂಘಟಿತತೆಯನ್ನು ಮನಗಂಡು ಭಾರತೀಯ ರಾಜಕೀಯವಲಯದಲ್ಲಿ ಹಸ್ತಕ್ಷೇಪಮಾಡತೊಡಗಿದರು. ಇದರಿಂದ ಭಾರತದಲ್ಲಿ ರಾಜಪ್ರಭುತ್ವದ ಅವನತಿ ಮತ್ತು ಅಧೀನತೆಯ ಲಕ್ಷಣಗಳು ಕಂಡುಬಂದವು. ಸ್ವತಂತ್ರ ರಾಜ್ಯಗಳ ಆಡಳಿತದ ಅವಧಿಯಲ್ಲಿ ರಾಜನ ಆಡಳಿತ ಮತ್ತು ರಾಜ್ಯದ ಉಳುವಿಗಾಗಿ ಯುರೋಪಿಯನ್ನರಿಗೆ ವಿರುದ್ಧವಾಗಿ ಕಾರ್ಯನಿರ್ವಹಿಸಿದ್ದವು. ಈ ಸಂದರ್ಭದಲ್ಲಿ ಜಮೀನ್ದಾರರು ಮತ್ತು ಭೂ ಹಿಡುವಳಿದಾರರಿಂದ ಒಡಗೂಡಿದ ಉಳಿಗಮಾನ್ಯ

ಪದ್ಧತಿ ಜಾರಿಯಲ್ಲಿತ್ತು. ಮಧ್ಯಕಾಲೀನ ಮೊಘಲ್ ಆಳ್ವಿಕೆಯ ಸಂದರ್ಭದಲ್ಲಿ ವಿಶೇಷವಾಗಿ ಉತ್ತರಭಾರತದಲ್ಲಿ ಕೃಷಿ. ಒಟ್ಟು ರಾಜ್ಯದ ರಾಜ್ಯಾದಾಯವನ್ನು ನಿರ್ಣಯಿಸುವ ಉದ್ಯಮವಾಗ ತೊಡಗಿದ ಮೇಲೆ ಕೃಷಿಗೆ ವಿಶೇಷ ಮಹತ್ವ ಒದಗತೊಡಗಿತು. ಅಲ್ಲದೆ ಹೆಚ್ಚಿನ ಭೂಮಿ ಕೃಷಿಗೆ ಒಳಪಟ್ಟ ನಂತರದಲ್ಲಿ ಕೃಷಿ ಭೂಮಿಗೆ ಸಂಬಂಧಿಸಿದ ಮತ್ತು ಭೂಕಂದಾಯಕ್ಕೆ ಸಂಬಂಧಿಸಿದ ಕಾನೂನುಗಳು ರೂಪಗೊಂಡವು. ಮೊಘಲರ ಜಮೀನ್ದಾರಿ ಪದ್ಧತಿ ಮೊದಲ ಬಾರಿಗೆ ಭೂಮಿಯನ್ನು ಖಾಸಗಿ ಆಸ್ತಿಯನ್ನಾಗಿ ಪರಿಗಣಿಸಿತು. ರೈತರು ಕೇವಲ ಗೇಣಿದಾರರಾಗಿ ಇನಾಮು ಭೂಮಿಗಳು ಜಮೀನ್ದಾರರ ವಶವಾದವು. ಏಕೆಂದರೆ ಯಾವ ಸಮುದಾಯಗಳು ಕಂದಾಯ ಪಾವತಿಸಲು ವಿಫಲವಾಗುತ್ತಿದ್ದವೋ ಆ ಸಮುದಾಯಗಳ ಜಮೀನುಗಳನ್ನು ಜಮೀನ್ದಾರರು ವಶಪಡಿಸಿಕೊಳ್ಳುತ್ತಿದ್ದರು. ಹೀಗೆ ವಶಪಡಿಸಿಕೊಂಡು ಬಂದಿದ್ದ ಸಮುದಾಯಗಳು ವಂಶಪಾರಂಪರ್ಯವಾಗಿ ರಾಜರುಗಳಿಂದ ಪಡೆದ ಇನಾಮು ಭೂಮಿಗಳೇ ಆಗಿದ್ದವು. ಹೀಗೆ ವಂಶಪಾರಂಪರ್ಯ ಒಡೆತನವಿರುವ ಭೂಮಿಯನ್ನು ಅನುಭವಿಸುವ ಕುಟುಂಬ ಕಣ್ಮರೆಯಾದರೆ ದೀರ್ಘಕಾಲದವರೆಗೆ ಕಾಣೆಯಾದರೆ ಆ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳುವ ಮತ್ತು ಅದನ್ನು ತನ್ನ ಖಾಸಗಿ ಆಸ್ತಿಯನ್ನಾಗಿಸಿಕೊಳ್ಳುವ ಅಧಿಕಾರವನ್ನು ಊರ ಪಟೇಲನಿಗೆ ಅಥವಾ ಗ್ರಾಮದ ಮುಖ್ಯಸ್ಥನಿಗೆ ಕೊಡಮಾಡಲ್ಪಟ್ಟಿರುತ್ತದೆ. ಅಲ್ಲದೆ ಗ್ರಾಮದ ಬಂಜರು ಇಲ್ಲವೇ ಕೃಷಿಯೇತರ ಭೂಮಿಯನ್ನು ಸಹ ಪಟೇಲನ ಗ್ರಾಮಾಧಿಕಾರದ ವ್ಯಾಪ್ತಿಗೆ ಅಂದಿನ ಸರಕಾರ ಒಳಪಡಿಸಿತ್ತು. ಈ ಪ್ರಕ್ರಿಯೆ ಜಮೀನ್ದಾರಿ ವರ್ಗದ ಬಲಿಷ್ಟತೆ, ಭೂಮಿ ನಂಬಿಕೊಂಡ ವರ್ಗಗಳ ಶೋಷಣೆಗೆ ಕಾರಣವಾಯಿತು. "೧೭೯೩"ರಲ್ಲಿ ಜಾರಿಯಾದ ಶಾಶ್ವತ ಜಮೀನ್ದಾರಿ"(ಪ್ರಭಾಕರ್ ಎ ಎಸ್ ೨೦೦೮:೪೨೪) ರಾಜರಿಂದ ನಿಷ್ಠೆ ಮತ್ತು ಸೇವೆಯ ಪರಿಣಾಮವಾಗಿ ಇನಾಮು ಭೂಮಿಗಳನ್ನು ಪಡೆದುಕೊಳ್ಳುತ್ತಿದ್ದರು. ಆ ಸಮುದಾಯಗಳ ಭೂಮಿಗಳು ಶಾಶ್ವತವಾಗಿ ಜಮೀನ್ದಾರರ ಮತ್ತು ಕಂದಾಯ ವಸೂಲಿ ಮಾಡುವ ವರ್ಗಗಳ ಅಧೀನಕ್ಕೆ ಒಳಪಟ್ಟವು. ಇದರ ಪರಿಣಾಮವಾಗಿ ಗುಜರಾತ್, ರಾಜಸ್ಥಾನ, ಮಹಾರಾಷ್ಟ್ರ, ಓರಿಸ್ಸಾ ಮತ್ತು ಆಂಧ್ರಪ್ರದೇಶದಿಂದ ಅನೇಕ ಸಮುದಾಯಗಳು ದಕ್ಷಿಣದತ್ತ ವಲಸೆ ಪ್ರಕ್ರಿಯೆಯನ್ನು ಆರಂಭಿಸಬೇಕಾಯಿತು. ಈ ಕಾಲಘಟ್ಟದಲ್ಲಿ ಉತ್ತರ ಭಾರತದ ಫಲವತ್ತಾದ ಭೂಮಿ ಬ್ರಿಟೀಷರ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಕೇಂದ್ರವಾಗಿದ್ದು ಮತ್ತೊಂದು ಪ್ರಮುಖಕಾರಣ. ಆ ವೇಳೆಗಾಗಲೇ ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿ ಆರಂಭವಾಯಿತು ಇಲ್ಲಿ ಬಂಡವಾಳಗಾರರು ಕಾರ್ಖಾನೆಯ ಪದ್ಧತಿಯನ್ನು ಜಾರಿಗೆ ತಂದರು. ಈ ಸಮಯದಲ್ಲಿ ಕಾರ್ಮಿಕ ವರ್ಗವು ಉದಯವಾಯಿತು ಮತ್ತು ಕಾರ್ಮಿಕ ಸಂಘಟನೆಗಳು ಬೆಳವಣಿಗೆಯಾದವು. ನಂತರ ಅನೇಕ ಸಮಾಜಶಾಸ್ತ್ರಜ್ಞರು ಮಾನವ ಹಕ್ಕುಗಳ ಬಗ್ಗೆ ಚರ್ಚೆ ಮಾಡಲು ಪ್ರಾರಂಭಿಸಿದರು ಮಾರ್ಕ್ಸನು ವರ್ಗ ಸಂಘರ್ಷವನ್ನು ಅಧ್ಯಯನ ಮಾಡಿದರೆ, ಕೋಮ್ಟನು ಮಾನವತವಾದದ ಕುರಿತು ಅಧ್ಯಯನ ಮಾಡಿದರು. ಕೇವಲ ಈ ಎಲ್ಲಾ ಅಧ್ಯಯನಗಳು ಅಧ್ಯಯನಕ್ಕೆ ಮಾತ್ರ ಸೀಮಿತವಾದವು. ಕರ್ನಾಟಕದಲ್ಲಿನ ಬಹುಸಂಖ್ಯಾತ ಸಮುದಾಯಗಳು ಮಹಾರಾಷ್ಟ್ರ, ಓರಿಸ್ಸಾ, ಅಸ್ಸಾಂ, ಬಂಗಾಳ, ಗುಜರಾತ್, ರಾಜಸ್ಥಾನ ಮತ್ತು ಆಂಧ್ರಪ್ರದೇಶದಿಂದ ವಲಸೆ ಬಂದಿರುವುದಾಗಿ ಅಧ್ಯಯನಗಳಿಂದ ತಿಳಿದುಬರುತ್ತದೆ.

ಕರ್ನಾಟಕದ ಒಟ್ಟು ೫೦ ಬುಡಕಟ್ಟು ಸಮುದಾಯಗಳಿದ್ದು, ಇನ್ನೂ ಈ ಪಟ್ಟಿಗೆ ಸೇರಬಹುದಾದ ಬುಡಕಟ್ಟು ಸಮುದಾಯಗಳು ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಲ್ಪಟ್ಟಿವೆ. ಇದಕ್ಕೆ ಜನಸಂಖ್ಯೆ, ಆರ್ಥಿಕತೆ, ಶಿಕ್ಷಣ, ರಾಜಕೀಯ ಅಂಶಗಳು ಕಾರಣವಾಗಿವೆ. ಆದರೆ ಇವರ ಸಂಸ್ಕೃತಿ ಶ್ರೀಮಂತವಾಗಿದೆ. ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಲಾಳಗೊಂಡ ಲಿಂಗಾಯತ ಸಮುದಾಯದ ಚಲನೆಯ ಬಗ್ಗೆ ಸಮೀಕ್ಷೆ ನಡೆಸಿದಾಗ ಈ ಸಮುದಾಯದ ಮೂಲದವರು ಹೆಚ್ಚಾಗಿ ಮಧ್ಯಪ್ರದೇಶ ಹಾಗೂ ಆಂಧ್ರಪ್ರದೇಶಗಳ ವಿವಿಧ ಸ್ಥಳಗಳಿಂದ ಕರ್ನಾಟಕದ ಒಳಹೊಕ್ಕು ಮೊದಲು ಉತ್ತರಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ನೆಲೆಸಿ ನಂತರ ಕಾಲಕ್ರಮೇಣ ಕೃಷಿ ಭೂಮಿಯನ್ನು ಅರಸಿ ಕರ್ನಾಟಕದ ಇತರೆ ಜಿಲ್ಲೆಗಳಲ್ಲಿ ಚದುರಿ ಹೋಗಿರುವುದು ತಿಳಿದುಬರುತ್ತದೆ.

ಲಾಳಗೊಂಡ ಸಮುದಾಯದ ಕುರಿತು ಅಧ್ಯಯನ ಮಾಡಬೇಕಾದರೆ, ಮೂಲತಃ ಲಾಳಗೊಂಡ ಪದದ ಅರ್ಥ ತಿಳಿಯುವುದು ಅತ್ಯಾವಶ್ಯಕ. ಲಾಳಗೊಂಡ ಪದದ ಒಳಾರ್ಥವನ್ನು ಬಿಡಿಸಿದಾಗ ಎರಡು ಪದಗಳು ಸೇರಿ ಲಾಳಗೊಂಡ ಪದವಾಗಿರುವುದು ತಿಳಿದುಬರುತ್ತದೆ. ಲಾಳ ಮತ್ತು ಗೊಂಡ ಎಂಬ ಎರಡು ಪದಗಳು ಇದ್ದು, ಲಾಳ ಮತ್ತು ಗೊಂಡ ಪದದ ಅರ್ಥವನ್ನು ತಿಳಿಯುವುದು ಅವಶ್ಯಕ. ಲಾಳಗೊಂಡ ಸಮುದಾಯಕ್ಕೂ ಇತರ ಗೊಂಡ ಮೂಲ ಸಮುದಾಯದವರಿಗೂ ಇರುವ ಐತಿಹಾಸಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಿನ್ನೆಲೆ ಮತ್ತು ಸಾಮ್ಯತೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ.

### ೨.೧ ಗೊಂಡ ಶಬ್ದದ ಉತ್ಪತ್ತಿ

ಗೊಂಡ ಎಂಬ ಪದವು 'ಗೋ' ಮತ್ತು 'ಅಂಡ' ಎರಡು ಶಬ್ದಗಳಿಂದ ಕೂಡಿದೆ.' ಗೋ' ಎಂದರೆ 'ಭೂಮಿ' ಮತ್ತು 'ಅಂಡ' ಎಂದರೆ 'ಪುತ್ರ' ಎಂದರ್ಥ. ಗೊಂಡ ಪದದ ಅರ್ಥ ಭೂಮಿಯ ಪುತ್ರ ಎಂದಾಗುತ್ತದೆ(ವಿಠಲ ಸಿಂಹ ಧೂರ್ವೆ: ೧೯೯೦:೭). ಈ ಅಂಶವನ್ನು ಮೇತ್ರಿ ಇವರು ಧೂರ್ವೆ ಇವರ ಹಿಂದಿ ಪದಭಾಷೆಯನ್ನು ಬಿಡಿಸಿದ್ದಾರೆ.

ಗೊಂಡ ಶಬ್ದದ ಉತ್ಪತ್ತಿ ಕುರಿತು ಆರ್ ವಿ ರಸೇಲ್ ರವರು ತಮ್ಮ The Tribes and castes of the central provinces of India ಎಂಬ ಗ್ರಂಥದಲ್ಲಿ ಹಲವಾರು ಅಭಿಪ್ರಾಯಗಳನ್ನು ವ್ಯಕ್ತ ಪಡಿಸುತ್ತ ಇನ್ನೂ ಖಚಿತವಾಗಿ ಗೊತ್ತಾಗುತ್ತಿಲ್ಲ ಎಂದು ಹೇಳಿದ್ದಾರೆ. ರಾಬರ್ಟ ಬ್ರೌನ್‌ರವರು ತಮ್ಮ ಪಿಪಲ್ ಆಫ್ ದಿ ವರ್ಲ್ಡ ಎಂಬ ಗ್ರಂಥದಲ್ಲಿ 'ಗೊಂಡ ಪದದ ಉತ್ಪತ್ತಿ ಬಗ್ಗೆ ಬರೆಯುವುದು ಅಥವಾ ಹೇಳುವುದು ಅಷ್ಟೊಂದು ಸುಲಬವಲ್ಲ' ಎಂದು ಉಲ್ಲೇಖಿಸಿದ್ದಾರೆ. ಒಪರ್ಟರವರು(ಒರಿಜಿನಲ್ ಇನ್‌ಹ್ಯಾಬಿಟೆಂಟ್ಸ್:೧೯೯-೧೪೫) ಕೂಡ 'ಗೊಂಡ' ಪದದ ಮೂಲ ಉತ್ಪತ್ತಿ ಬಗೆಹರಿಯದೆ ನೆನೆಗುದಿಯಲ್ಲಿರುವುದೆಂದು ಹೇಳುವರು.

'ಗೊಂಡ' ಎಂಬ ಶಬ್ದವು ತೆಲುಗು ಭಾಷೆಯ 'ಕೊಂಡ' ಎಂಬ ಪದದಿಂದ ಬಂದಿದೆ ಎಂದು ಭಾಷಾ ವಿಜ್ಞಾನಿಗಳ ಅಭಿಪ್ರಾಯ. 'ಕೊಂಡ ಎಂದರೆ ತೆಲುಗು ಭಾಷೆಯಲ್ಲಿ ಗುಡ್ಡ ಅಥವಾ ಬೆಟ್ಟ(ಪರ್ವತ)

ಎಂದು ಅರ್ಥ. ಕಾಲಕ್ರಮೇಣ 'ಕ' ಕಾರ ಘೋಷ ಧ್ವನಿಯಾಗಿ 'ಗ' ಕಾರವಾಗಿ 'ಗೊಂಡ' ಎಂದು ರೂಪಾಂತರ ಹೊಂದಿರ ಬೇಕೆಂದು ಹಿಸ್ಲೋಪರ್ ವಾದವಾಗಿದೆ (ರಸೇಲ್ ಆರ್ ವಿ, ೧೯೭೫,೪೨-೪೩).

ಜನರಲ್ ಕನ್ನಿಂಗ್‌ಹ್ಯಾಮ್‌ರು 'ಗೊಂಡ' ಪದವು 'ಗೌಡ' ಎಂಬ ಶಬ್ದದಿಂದ ಉತ್ಪನ್ನವಾದದ್ದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕ್ರಿ ಶ ೬೦೫ ರಲ್ಲಿ ಹರ್ಷವರ್ದನನ ಅಣ್ಣನಾದ ಕನೌಜದಾ ದೊರೆ ಮಾಳವ ದೇಶದ ಮೇಲೆ ದಾಳಿ ಮಾದಿದಾಗ ಅವನಿಗೆ ಸಹಾಯ ಮಾಡಿದ ಗೌಡ ದೇಶದ ರಾಜರೇ ಗೊಂಡ ರಾಜರೆಂದು ಆತನ ಅಭಿಪ್ರಾಯ. ಆತ ಗೊಂಡ ಪದದ ಉತ್ಪತ್ತಿಯನ್ನು ವಿವರಿಸುತ್ತಾ ಅದು 'ಗೌರ' ಎಂಬ ಶಬ್ದದಿಂದ ಹುಟ್ಟಿ ಗೋದ ಹಾಗೂ ಕೋದಗಳಾಗಿ ಪರಿವರ್ತನೆ ಹೊಂದಿ ಆ ನಂತರ 'ಗೊಂಡ' ಆಯಿತೆಂದು ಹೇಳುತ್ತಾರೆ [ನಾಯಕ್ ಹಾ ಮಾ (ಸಂ), ೧೯೭೩, ೫೨೮-೯].

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಗೊಂಡ ಪದದ ಹಲವಾರು ರೂಪಗಳನ್ನು ಹೀಗೆ ಕೊಟ್ಟಿರುವರು. ಗಾಮುಂಡ, ಗಾವುಂಡ, ಗೌಂಡ, ಗೌಡ, ಪಟೇಲ, ಹೆಗ್ಗಡೆಗೊಂಡ, ದೆಡ್ಡಿಗೊಂಡ, ಕಲ್ಲಗೊಂಡ, ಮಲ್ಲಗೊಂಡ, ಬರಮಗೊಂಡ (ವೆಂಕಟಸುಬ್ಬಯ್ಯ ಜಿ: ೧೯೭೭, ೨೪೭೯).

ಹನುಮಂತಯ್ಯ ವಿ ಆರ್ ಇವರು ಸಹ ಗೌಡ ಎಂಬ ಹೆಸರು 'ಗೋ-ಗೌ' ಎಂಬ ಶಬ್ದದಿಂದ ಉಂಟಾಗಿದೆ 'ಗೋ' ಎಂದರೆ ಭೂಮಿ. ಗೋಪಾಲಕನೆ ಭೂಪಾಲಕ, ಭೂಪಾಲಕ ಎಂದರೆ ರಾಜ-ಮಹಾರಾಜನೆಂದರ್ಥ ಪಶುಪಾಲಕನೇ ಪ್ರಜಾಪಾಲಕ ಇದು ಗೋವುಗಳ ಶಬ್ದದಿಂದಲೇ ಉಂಟಾಗಿದೆ (ಹನುಮಂತಯ್ಯ ವಿ ಆರ್: ೧೯೨೬:೨೩). ಭೋಜರ ವಿಧರ್ಭ ದೇಶದ ಕುಂತಲ, ದಕ್ಷಿಣ ಭಾರತದ ಬಳ್ಳಾರಿ ಜಿಲ್ಲೆಯವರೆಗೂ ಮತ್ತು ಉತ್ತರ ಭಾರತದ ಗೌಡ ದೇಶದವರೆಗೆ ಹಬ್ಬಿತ್ತು. ಅದರ ಕೆಲವೂಂದು ಭಾಗಕ್ಕೆ ಗೌಳ(ಗೌಡ) ದೇಶವೆಂಬ ಹೆಸರಾಯಿತು (ಅದೇ:೧೯೨೬:೨೬).

ಹನುಮಂತಯ್ಯ ಅವರ ಹೇಳಿಕೆ ಹಾಗೂ ಕನ್ನಿಂಗ್‌ಹ್ಯಾಮರ ಪ್ರಕಾರ ಲಾಳಗೊಂಡರಿಗೆ ಇರುವ ಗೌಡ, ಸರನಾಡಗೌಡ, ನಾಡಗೌಡ ಹೆಸರುಗಳು ಆಡಳಿತರೂಡವಾದದ್ದು' ಅಲ್ಲದೆ ಬಳ್ಳಾರಿವರೆಗೆ ಇವರ ಆಡಳಿತವಿತ್ತು. ಅಂದ ಹಾಗೆ ಲಾಳಗೊಂಡರು(ಗೌಡ) ಅತಿ ಹೆಚ್ಚು ಬಳ್ಳಾರಿ ಜಿಲ್ಲೆಯಲ್ಲಿರುವುದು ಕಂಡುಬರುತ್ತದೆ, ಇಲ್ಲಿ ಗೌಡ ಎಂಬ ಪದ ಪ್ರತಿ ಹೆಸರಿನ ಅಂತ್ಯದಲ್ಲಿ ಕಡ್ಡಾಯವಾಗಿ ಕಂಡು ಬರುವುದು ಇವರ ವಾದಕ್ಕೆ ಸಮರ್ಥವಾಗಿದೆ. After the defeat of the Gond Queen of Rajput birth, Rani Durgavathi, her sun left his Satpura kingdom and retreated to Golkonda (Mehta B H,1984, 13).

ದುರ್ಗಾವತಿಯು ಗಢಾಮಂಡಲದ ಗೌಡ ರಾಜನಾದ ದಳಾಪತ್‌ಶಾಹನನ್ನು ವರಿಸಿದಳು. (ಹನುಮಂತಯ್ಯ ವಿ ಆರ್:೧೯೨೬:೩೧೩). ಗೊಂಡ ರಾಣಿ ದುರ್ಗಾವತಿ ಪರಾಭವಗೊಂಡ ನಂತರ ಅವಳ ಮಗನು ರಾಜಧಾನಿ ಸಾತ್ಪುರದಿಂದ ಗೊಲ್ಕೊಂಡಕ್ಕೆ ಮರಳಿದನು ಇದರಲ್ಲಿ ಗೌಡ ಮತ್ತು ಗೊಂಡ ಪದಗಳ ಅರ್ಥದಲ್ಲಿ ಯಾವುದೇ ವ್ಯತ್ಯಾಸ ಕಾಣುವುದಿಲ್ಲ (ಮೇತ್ರಿ ಕೆ ಎಂ, ೧೯೯೪, ೧೨೪).

ಮೇತ್ರಿ ಕೆ ಎಂ ರವರ ಹೇಳಿಕೆಯ ಆಧಾರದಂತೆ ಗೌಡ, ಗೌಂಡ, ಗಾವುಂಡ, ಗೌಳ, ಕುರುಂಬ, ಗೌಂಡರ್, ಕುರುಬಗೊಂಡ, ಕುಡುಒಕ್ಕಲಿಗ, ಕುರುಬ, ಗೌಡಿಯನ್, ಅಂಧ, ಅಂಧಕರು, ಆಂಧ್ರರು, ಇಡೈಯರ್, ಅಂಡರ್, ಹಂಡೆ, ಹೆಗ್ಗಡೆ, ಯಾದವರು, ನೊಣಬರು, ಪಲ್ಲವರು, ಕದಂಬರು, ಕುರುಪು, ನಾಯಿಡು, ನಾಯಕ, ಇತ್ಯಾದಿ ಜನಾಂಗಗಳು ಗೊಂಡ ಜನಾಂಗದ ಎಳೆಗಳೆಂದು ಸ್ಪಷ್ಟಪಡಿಸುತ್ತಾರೆ (ಮೇತ್ರಿ ಕೆ ಎಂ, ೧೯೯೪, ೧೨೮).

ಮೇಲಿನ ತಜ್ಞರ ವಾದದಂತೆ ಗೌಡ, ನೊಣಬ, ಕುಡು ಒಕ್ಕಲಿಗರು ಸಹ ಲಿಂಗಾಯತ ಗುಂಪಿನ, ಹೊರ ಸುತ್ತಿನ ಗುಂಪುಗಳಾಗಿದ್ದಾರೆ. ಈ ಪ್ರಕಾರ ಲಾಳಗೊಂಡರೂ ಸಹ ಗೊಂಡರಿಂದ ಕವಲು ಒಡೆದ ಒಂದು ಜನಾಂಗವೆಂದು ಊಹಿಸಬಹುದು.

ಗೌಡ>ಗೊಂಡವಾಗಿರುವುದಾಗಿ ಜನರಲ್ ಕನ್ನಿಂಗ್‌ಹ್ಯಾಮ್‌ರವರು ಹಲವಾರು ಸಾಕ್ಷಿಗಳೊಂದಿಗೆ ಈ ಮೇಲಿನಂತೆ ಹೇಳಿರುವರು.

ಮೇಲೆ ವಿವರಿಸಿದ ಗೊಂಡ ಮತ್ತು ಲಾಳ್ (ಲಾಲ) ಪದದ ನಿಷ್ಪತ್ತಿಯು ಅವೆರಡು ಪ್ರದೇಶ ಸೂಚಕವಾಗಿ, ಜನಾಂಗೀಯ ಸೂಚಕವಾಗಿ, ನಂತರ ಆಡಳಿತ ರೂಢವಾಗಿ, ಭಾಷಾ ವಾಚಕವಾಗಿ ಬಂದಿರುವುದು ಕಂಡು ಬರುತ್ತದೆ ಎಂದು ಗೊತ್ತಾಗುವುದು.

**೨.೨ ಲಾಳಗೊಂಡ ಪದದ ನಿಷ್ಪತ್ತಿ ಮತ್ತು ಅರ್ಥ**

ಭಾರತದ ಪ್ರತಿಯೊಂದು ಸಮುದಾಯಗಳ ಹುಟ್ಟಿನ ಹಿಂದೆ ಅವರದೇ ಆದ ಹಿನ್ನೆಲೆಯನ್ನು ಹೊಂದಿವೆ. ಅವರು ಮಾಡುವ ವೃತ್ತಿಯಿಂದ ಬಂದಿರುವ ಹಿನ್ನೆಲೆ ಹಾಗೂ ಅವರ ಕುಲ, ಬಂಧುತ್ವ ಆಧಾರವಾಗಿಟ್ಟುಕೊಂಡು ಅವುಗಳ ಅಧ್ಯಯನ ಅಥವಾ ಸಂಶೋಧನೆ ಇಂದಿಗೂ ನಡೆಯುತ್ತಲಿವೆ. ಇದರಿಂದ ಸಮುದಾಯಗಳ ಚರಿತ್ರೆಯನ್ನು ತಿಳಿಯುವಲ್ಲಿ ಈ ಸಂಶೋಧನೆಗಳು ಪ್ರಮುಖ ಪಾತ್ರ ವಹಿಸುತ್ತವೆ. ವೃತ್ತಿ, ಪ್ರದೇಶ(ಸ್ಥಳ) ಪುರಾಣಗಳಿಂದ ಸಮುದಾಯಕ್ಕೆ ಹೆಸರು ಬಂದಿವೆಯೇ ಎಂಬ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಭಾಷಾಶಾಸ್ತ್ರಜ್ಞರು ಪದನಿಷ್ಪತ್ತಿಯನ್ನು ಚರ್ಚಿಸಿ ಅವುಗಳ ಹಿನ್ನೆಲೆಯನ್ನು ಕಟ್ಟಿಕೊಡುವಲ್ಲಿ ನಿರಂತರ ಅಧ್ಯಯನ ಸಾಮಾನ್ಯವಾಗಿದೆ. ಇವುಗಳಲ್ಲಿ ವಂಶಶಾಸ್ತ್ರ ಅಧ್ಯಯನದ ಪರಿಕಲ್ಪನೆಯು ಸಹ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಸಮುದಾಯಗಳ ವೃತ್ತಿ, ಪುರಾಣ ಜನಪರಕತೆ ಇತ್ಯಾದಿಗಳನ್ನು ಆದರಿಸಿದಂತೆ ಬಹುತೇಕ ಸಮುದಾಯಗಳ ಚರಿತ್ರೆಯನ್ನು ತಿಳಿಯುವಲ್ಲಿ ಸಫಲವಾಗಿದೆ. ಅದೇ ರೀತಿ ಲಾಳಗೊಂಡ ಸಮುದಾಯದ ಪದ ನಿಷ್ಪತ್ತಿಯನ್ನು ಗುರುತಿಸಲಾಗಿದೆ.

ಲಾಳಗೊಂಡ ಸಮುದಾಯವು ಮಧ್ಯಪ್ರದೇಶ ಮತ್ತು ಆಂಧ್ರಪ್ರದೇಶದ ಗಡಿಭಾಗವಾದ ಲಾಣ ಎಂಬ ಪ್ರದೇಶದಿಂದ ಆರ್ಯರ ಆಕ್ರಮಣದಲ್ಲಿ ವಲಸೆಬಂದು ಆಂಧ್ರಪ್ರದೇಶ ಹಾಗೂ ಸುತ್ತಲಿನ ನದಿಮುಖಜ ಭೂಮಿಗಳಲ್ಲಿ ನೆಲೆಸಿದರು. ಹೀಗೆ ಬಂದ ಲಾಳಗೊಂಡರು ಶ್ರೀಶೈಲಪರ್ವತ ಶ್ರೇಣಿಯಿಂದ

ವಲಸೆ ಪ್ರಕ್ರಿಯೆ ಆರಂಭಿಸಿ ಬಹುತೇಕ ಸಮುದಾಯಗಳು ತುಂಗಭದ್ರಾ, ಕೃಷ್ಣಾ ನದಿಯನ್ನು ಬಳಸಿಕೊಂಡು ರಾಯಚೂರು, ಬಳ್ಳಾರಿ, ಕೊಪ್ಪಳ ಇತ್ಯಾದಿ ಪ್ರದೇಶಗಳಲ್ಲಿ ನೆಲೆನಿಂತವು. ಕಾಲಾಂತರದಲ್ಲಿ ಬಸವಣ್ಣನ ಅನುಯಾಯಿಗಳಾದರು. ಈ ರೀತಿ ಬಂದ ಸಮುದಾಯಗಳು ರಾಜಾಶ್ರಯದಲ್ಲಿ ತಮ್ಮ ಯಜಮಾನಿಕೆಯನ್ನು ಗುರುತಿಸಿಕೊಂಡು ರಾಜ ವೈಭವದಲ್ಲಿ ಊರಗೌಡ್ಕಿಯನ್ನು ಪಡೆದುಕೊಂಡು ನಾಡಗೌಡ, ಗೌಡ, ಸರನಾಡಗೌಡರಾಗಿ, ರಾಜರಆಶ್ರಯ ಪಡೆದವು.

ಲಾಳಗೊಂಡರಿಗೆ ಲಾಲಗೊಂಡ, ಲಾಳ್‌ಗೊಂಡ, ಲಾಲಿಗೊಂಡ, ಲೋಳಗೊಂಡ ಲ್ವಾಳಗೊಂಡ, ಲಾಳಿಗೊಂಡ ಲಾಲ್‌ಗೊಂಡ, ನಾಳಿಗೊಂಡ, ನಾಳಗೊಂಡ, ಕಾಪು ಮತ್ತು ದಾವಣಿಗರೆಂತಲೂ ಹಾಗೂ ಲಿಂಗಾಯುತರು, ವೀರಶೈವರು ಎಂತಲು ಕರೆಯುವುದುಂಟು ಆದರೂ ಸಹ ಲಾಳಗೊಂಡ ಎಂಬ ಪದಕ್ಕೆ ಈವರೆಗೂ ಸರಿಯಾದ ಅರ್ಥವನ್ನು ಕಲ್ಪಿಸಲಾಗಿಲ್ಲ ಎನ್ನಬಹುದು.

ಮೊದಲಿನ ಲಾಳಗೊಂಡ ಪದಗಳು ಭಾಷಿಕವಾಗಿ ಜನರ ವಾಚಕಗಳಲ್ಲಿ ಬೇರೆಬೇರೆ ಉಚ್ಚಾರವನ್ನು ಕಾಣಬಹುದು ಅಂದರೆ 'ಲಾ' ಕಾರಕ್ಕೆ 'ಳಾ' ಕಾರ ಬಂದಿರಬಹುದು. ಆದರೆ ನಾಳಗೊಂಡ ಪದವು ನಾಳಗೊಂಡೇಶ್ವರ ಪುರಾಣದಲ್ಲಿ ತಿಳಿಸಿರುವಂತೆ ನಾಳಗೊಂಡ ಎಂಬ ಪುರುಷನು ಈಗಿನ ಪಂಚಪೀಠಗಳಲ್ಲಿ ಒಂದಾದ ಕೇದಾರದ ಏಕೋರಾಮಾರಾಧ್ಯರ ಶಿಷ್ಯನಾಗಿದ್ದನು. ಇವರ ಆದೇಶದಂತೆ ನಾಳಗೊಂಡೇಶ್ವರನು ಜನರ ರಕ್ಷಣೆ ಮಾಡುತ್ತಿದ್ದನು. ನಾಳಗೊಂಡೇಶ್ವರನ ಆದೇಶದಂತೆ ಉತ್ತರಭಾರತದ ಜನರು ತಮ್ಮನ್ನು ಆರ್ಯರಿಂದ ರಕ್ಷಿಸಿಕೊಳ್ಳಲು ದಕ್ಷಿಣದೆಡೆಗೆ ಬಂದು ನೆಲೆನಿಂತರು ಹೀಗೆ ಬಂದ ಜನರೇ ನಾಳಗೊಂಡರು ಎನ್ನಬಹುದು. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ನಾಳಗೊಂಡೇಶ್ವರ ಪುರಾಣದಲ್ಲಿ ಪಶುಪಾಲಕ ಮತ್ತು ಕೃಷಿ ಚಟುವಟಿಕೆಯವರಾದ ಇವರು ಎತ್ತುಗಳ ಮೇಲೆ ಲಗಳೆ ಹಾಕಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರಿಂದ ಇವರಿಗೆ ಲಾಳಗೊಂಡ ಎಂಬ ಹೆಸರು ಬಂದಿದೆ. ಇಂದಿಗೂ ವಿಜಾಪುರ ಜಿಲ್ಲೆಯ ಬಸವನಬಾಗೇವಾಡಿ ತಾಲ್ಲೂಕಿನಲ್ಲಿ 'ಲಗಳಿ' ಎಂಬ ಹೆಸರಿನ ಮನೆತನಗಳಿವೆ.

ದಾವಣಿಗರು ಎಂದು ಹೆಸರು ಬರಲು ಕಾರಣ ಕುರುಗೋಡು ನೀಲಮ್ಮ. ಇವಳು ತನ್ನ ಪವಾಡದಿಂದ ಹಸುಗಳನ್ನು ಕಟ್ಟಲು ತನ್ನ ಸೀರೆಯ ಸೆರಗನ್ನು ಉಪಯೋಗಿಸಿದ್ದರಿಂದ ದಾವಣಿಗರೆಂದು ಹೆಸರು ಬಂದಿದೆ. ಈಗಲೂ ಶಿವಮೊಗ್ಗದ ಸುಮನ ಹಳ್ಳಿಯಲ್ಲಿ ದಾವಣಿಗರು ನೆಲೆಸಿದ್ದಾರೆ. ಅಲ್ಲಿ ದೊಡ್ಡ ಬಸವೇಶ್ವರ ದೇವಸ್ಥಾನವಿದೆ. ಇವರ ಪ್ರಮುಖ ವೃತ್ತಿ ಕೃಷಿ ಆದ್ದರಿಂದ ಇವರಿಗೆ ಈ ಹೆಸರು ಬಂದಿರಬಹುದು. ವೀರಶೈವ ಹಾಗೂ ಲಿಂಗಾಯತ ಈ ಎರಡೂ ಪದದಲ್ಲಿ ವೀರಶೈವದ ಹುಟ್ಟಿನ ಬಗೆಗೆ ಹಲವು ಚಿಂತಕರು ತಮ್ಮದೇ ಆದ ಅಭಿಪ್ರಾಯಗಳನ್ನು ತಿಳಿಸುತ್ತಾರೆ. ಇದರ ಹುಟ್ಟಿನ ಬಗ್ಗೆ

ಈಗಲೂ ಗೊಂದಲಗಳಿವೆ. ಶೈವಪಂತ ಎನ್ನುವುದು ಪುರಾತನ ಕಾಲದಿಂದಲೂ ಬಂದಿದ್ದು, ೧೨ ನೇ ಶತಮಾನದಲ್ಲಿ ವರ್ಣ ವ್ಯವಸ್ಥೆಯಲ್ಲಿ ವೈಧಿಕ ಪಂತದಲ್ಲಿ ಮೇಲುಸ್ತರದಲ್ಲಿದ್ದ ವರ್ಗಗಳು ಕೆಳಸ್ತರದ ಬಹು ಜನರನ್ನು ತಾವು ಹುಟ್ಟುಹಾಕಿದ ಕಂದಾಚಾರ, ಮೂಢನಂಬಿಕೆಗಳ ಮೂಲಕ ರಾಜರ ಬೆಂಬಲದಿಂದ ಸಿರಂತರವಾಗಿ ರಾಜಕೀಯವಾಗಿ, ಆರ್ಥಿಕ, ಧಾರ್ಮಿಕ, ಸಾಮಾಜಿಕವಾಗಿ ಶೋಷಣೆ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಅಲ್ಲಮಪ್ರಭು, ಬಸವಣ್ಣನವರ ಕ್ರಾಂತಿಯ ಫಲವಾಗಿ ಪೀರಶೈವ ತತ್ವಗಳನ್ನು ಭೋಧಿಸಿದರು ಇದರಿಂದ ಹಲವರು ವೀರಶೈವ ತತ್ವದ ಪ್ರಭಾವಕ್ಕೊಳಗಾದರು ಇದರಿಂದ ಪೀರಶೈವ ಬಂದಿರಬಹುದು ಹಾಗೂ ವೀರಶೈವ ಎಂಬ ಸಮುದಾಯ ಅಥವಾ ಪದ ಕರ್ನಾಟಕ ರಾಜ್ಯವನ್ನು ಬಿಟ್ಟು ಬೇರೆಲ್ಲೂ ಇದರ ಪದ ಬಳಕೆಯಾಗಲಿ ಅಥವಾ ಸಮುದಾಯವಾಗಲಿ ಇಲ್ಲ. ಇದೇ ಬಸವಣ್ಣನವರು ತಾವು ಪೂಜಿಸುತ್ತಿದ್ದ ಲಿಂಗವನ್ನು ಎಲ್ಲರಿಗೂ ಪೂಜಿಸುವಂತೆ ತಿಳಿಸಿದರು. ಲಿಂಗಪೂಜಿಸಿದವರೆಲ್ಲರೂ ಲಿಂಗವಂತರೆಂದರು ಮುಂದೆ ಬಸವಣ್ಣನ ಲಿಂಗೈಕ್ಯದ ನಂತರ ಲಿಂಗವಂತರು ಲಿಂಗಾಯತರಾದರು ಹೀಗೆ ವೀರಶೈವ ಹಾಗೂ ಲಿಂಗಾಯುತ ಪದಗಳು ಉದ್ಭವಿಸಿದವು ಈ ಎರಡು ಪದಗಳು ಸೇರಿ ವೀರಶೈವ ಲಿಂಗಾಯತರಾದರು. ವೀರಶೈವ ತತ್ವಗಳನ್ನು ಕಲಿತು ಲಿಂಗಪೂಜಿಸುವವರೆಲ್ಲಾ ವೀರಶೈವ ಲಿಂಗಾಯತರಾದರು. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ ಸಮಾಜದಲ್ಲಿ ಶೋಷಣೆಗೆ ಒಳಗಾದ ಸಮುದಾಯಗಳು ಈ ಮತವನ್ನು ಅನುಸರಿಸಿದರು ಹಾಗೂ ತಮಗೂ ಸಮಾಜದಲ್ಲಿ ಉನ್ನತಸ್ಥಾನ ಸಿಗಬಹುದೆಂದು ವೀರಶೈವ ಲಿಂಗಾಯತ ತತ್ವಗಳನ್ನು ಪಾಲಿಸಿದರು. ಹೀಗೆ ಬಂದವರಲ್ಲಿ ಲಾಳಗೊಂಡ ಸಮುದಾಯವು ಒಂದು ಶೋಷಣೆಗೆ ಒಳಗಾದ ಸಮುದಾಯವಾದ ಇದು ಇಂದು ಕರ್ನಾಟಕದ ೩ ಬಿ ಮೀಸಲಾತಿ ಪಟ್ಟಿಯಲ್ಲಿ ಪೀರಶೈವಲಿಂಗಾಯತ ಎಂದು ಗುರುತಿಸಿಕೊಂಡು ತನ್ನ ಅಸ್ಥಿತ್ವವನ್ನು ಕಳೆದುಕೊಂಡಿದೆ.

Derivation of name and origin of the laal gonds: The Laal. Lal is derived by a country, place where a demon Laala was ruling. (Rev.f. kittel-kannada- Kannada disctniry, page 1359-60) . The laanji nandi is situated at Balaghat a district of Madhya Pradesh, Lanjigad, treated as the Naabhi (Fulcrum) centre of earth in Gond's mythology. This is the place where the king god of Gond's MAA-DEV, SHAMBHU SHEIKHS Shishyas, fllowers, Lingu's were taking bath in Vengangaaa- Vengoda river after they have been blessed by the Shambu-Sheiku . This place wasreferred as place of teaching 'GONDI' Religion and language. The Lanjighad is also associated with the gothra of 'Takam' vide page 35 Gondwana jeev jagath ki –utpatti, Patan aur punuruthan sangarsh 'by Tirumayi

Chandralekha Kangali. The Laanji kote is also referred in the book by Dr Acharya Mothi Ravan Kangalji vide (p-34) of Gondwana kote darshan.

General Cunningham considered that the name Gond probably came from Gauda, the clasicle term for part of the united provinces and Bengal. A Benares inscription relating to one of the Chedi kings of Tripura or Tewar (near Jabalpur) states that he was the Haihaya tribe, who lived ont borders of the Nerbudda in the district of the Western Gauda in the province of Malwa. Three or four other inscriptions also refer to the kings of Gauda in the same locality. Gauda, however was properly and commonly used has the name of part of Bengal .......... the central provinces is that in which the king of Gauda came to the assistance of the ruler of Malwa against the king of Kanaug, elder brother of the great Harshavardhana and slew the latter king in A D 605(Russell R V, 1975, 42)

ಈ ಮೇಲಿನ ವಿವರಣೆಯಂತೆ ಲಾಳಗೊಂಡ ಎಂಬ ಪದವು 'ಲಾಳ್' ಎಂಬ ಪದದಿಂದ ಬಂದಿದ್ದು ಇದು ಪ್ರದೇಶ ಸೂಚಕವಾಗಿ ಕಂಡು ಬರುತ್ತದೆ.

ನಾವು ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಲಾಳಗೊಂಡ ಎಂಬ ಪದವು ಎರಡು ಪದಗಳಿಂದ ಕೂಡಿದ್ದು, ಈ ಎರಡೂ ಪದಗಳು ಬಹು ಮುಖ್ಯವಾಗಿವೆ. ಅಂದರೆ 'ಲಾಳ' ಮತ್ತು 'ಗೊಂಡ'. ಲಾಳಗೊಂಡ ಎಂಬ ಪದದ ಉತ್ಪತ್ತಿ ತಿಳಿಯಬೇಕಾದರೆ ಈ ಎರಡೂ ಪದಗಳ ಉಗಮ ಮತ್ತು ಅರ್ಥವನ್ನು ನಾವು ತಿಳಿಯುವುದು ಅವಶ್ಯವಾಗಿದೆ. ಈ ಕುರಿತು ಅನೇಕ ಲೇಖಕರು ಮತ್ತು ವಿದ್ವಾಂಸರು ಈ ಕೆಳಗಿನಂತೆ ವಿವರಣೆ ನೀಡಿದ್ದಾರೆ.

ಆರ್ ವಿ ರಸೇಲ್ ಮತ್ತು ಹೀರಾಲಾಲ್ ಅವರು ತಮ್ಮ The Tribes and castes of the central provinces of India ಗ್ರಂಥದಲ್ಲಿ "ಲಾಣಗೊಂಡ ಜನರ ಬಗ್ಗೆ ಪ್ರಸ್ತಾಪಿಸುತ್ತ ಲಾಣ ಎಂಬುದು ಮಧ್ಯಪ್ರದೇಶ ಮತ್ತು ಆಂಧ್ರಪ್ರದೇಶದ ಗಡಿಭಾಗದ ಒಂದು ಪ್ರಾಂತ. ಈ ಪ್ರಾಂತವು ಗೊಂಡರಿಂದ ಆಳಲ್ಪಟ್ಟಿರುವುದು. ಇತಿಹಾಸ ಪುಟಗಳಿಂದ ತಿಳಿದುಬರುತ್ತದೆ. ಲಾಳಗೊಂಡ ಉತ್ತರ ಪದವಾದ ಗೊಂಡ ಎಂಬುದು ಪಶುಪಾಲಕ ವೃತ್ತಿಯನ್ನು ಸೂಚಿಸುತ್ತದೆ. ಜನರ ನಾಲಿಗೆಯಲ್ಲಿ 'ಲಾಣ' ಪದವು 'ಲಾಳ' ಎಂದು ರೂಪಾಂತರ ಗೊಂಡಿದೆ"(ರಸೆಲ್ಆರ್ವಿ, ೧೯೭೫). ಈ ಭಾಗದಿಂದ ವಲಸೆಗೊಂಡವರಿಗೆ ಲಾಲಗೊಂಡರು ಎಂದುಕರೆದಂತಿದೆ. "ಲಾಣಗೊಂಡರು ಲಾಲಗೊಂಡವಾಗಿ, ಲಾಳಗೊಂಡರಾಗಿರಬಹುದೆಂದು" ಅಮರೇಶ ಹೊಸಕೇರಿ(೧೯೮೩, ೦೪)ಅವರ ತರ್ಕವಾಗಿದೆ. 'ಲಾಣ' ಪ್ರದೇಶಸೂಚಕ ಪದವಾದರೆ, 'ಲಾಲ' ಹಿಂದಿ ಭಾಷೆಯ ಪದವಾದರೆ, 'ಲಾಳ' ದ್ರಾವಿಡ ಮೂಲದ ಕನ್ನಡ ಭಾಷೆಯ ಪದವಾಗಿರುವುದು ಎಂದಿದ್ದಾರೆ.

ಕಿಟ್ಟೆಲ್ ಅವರು "ಲಾಳ್ ಎಂದರೆ ಲಿಂಗವತ್ತಿಗೆ, ಲಾಳ್ ಎಂದರೆ ನಾಲ, ಲಾಳಿ ಎಂದರೆ ನೆಯ್ಯುವವ ಲಾಟ ಎಂದರೆ ಲಾಡ, ಲಾಟಿ ಎಂದರೆ ಭಾಷಿಕ, ಲಾಲ ಎಂದರೆ ರಾಜ ವೈಭವದ, ಲಾಲಾ ಎಂದರೆ ಅಸುರ"(ಕಿಟೆಲ್ ಶಬ್ದಕೋಶ, ೧೯೯೩, ೧೩೩೫-೬೦)ಎಂಬ ಅರ್ಥಗಳನ್ನು ನೀಡಿದ್ದಾರೆ. ಕಿಟ್ಟೆಲ್ ಅವರು ಲಾಳ್ ಎಂದರೆ ಲಿಂಗವತ್ತಿಗೆ ಎಂದಿರುವುದರ ಅರ್ಥ ಲಾಳಗೊಂಡ ಲಿಂಗಾಯತರೆಂದಾಗುವುದು ಲಾಲ ಎಂದರೆ ರಾಜವೈಭವ ಎಂದಿರುವುದು ಅರ್ಥ ಲಾಳಗೊಂಡರಲ್ಲಿಯ ಗೌಡ, ನಾಡಗೌಡ, ಸರನಾಡಗೌಡರೆಂದಾಗುವುದು. ಡಾ ಎಂ ಎಂ ಕಲಬುರ್ಗಿಯವರು "ಭಕ್ತರಲ್ಲಿ ವೃತ್ತಿಯನ್ನು ಅವಲಂಬಿಸಿ ಗಾಣಿಗ, ಬಣಜಿಗ, ಅಗಸ, ಕ್ಷೌರಿಕರೆಂಬ, ಪ್ರದೇಶ ಅವಲಂಬಿಸಿ ನೊಂಬರೆಡ್ಡಿ, ಮಲೆಗೌಡರೆಂಬ, ಆಡಳಿತವನ್ನು ಅವಲಂಬಿಸಿ ಗೌಡ, ಲಾಳಗೊಂಡರೆಂಬ ಉಪಜಾತಿಯ ಸಣ್ಣ ಕಂದಕಗಳು ನಿರ್ಮಾಣವಾಗಿವೆ ಎನ್ನುವಲ್ಲಿ, ಲಾಳಗೊಂಡ ಎಂಬುದು ಆಡಳಿತಸೂಚಿ ರೂಪ ಎಂದು ನಿರ್ಧರಿಸುವರು"(ಕಲಬುರ್ಗಿ ಎಂ ಎಂ, ೨೦೦೩, ೧೩). ಅಂದರೆ ಆಡಳಿತಗಾರರಾದ ಗೌಡ, ನಾಡಗೌಡ, ಸರನಾಡಗೌಡವೆಂಬುದೆ ಲಾಳಗೊಂಡವಾಗಿರಬಹುದೆಂದು ವಿವರಿಸಿದ್ದಾರೆ.

ಆರ್ ವಿ ರೆಸೆಲ್ ಮತ್ತು ಹಿರಾಲಾಲ್‌ರ ವಾದದಂತೆ 'ಲಾಣ' ಪ್ರದೇಶದಲ್ಲಿ ವಾಸವಾಗಿದ್ದ ಗೊಂಡರೇ ಲಾಳಗೊಂಡರಾಗಿದ್ದಾರೆ ಎಂಬುದು ಸತ್ಯಕ್ಕೆ ಸಮೀಪವಾಗಿದೆ ಎನ್ನಬಹುದು.

ಕಿಟೆಲ್‌ರವರ ಲಾಳಗೊಂಡ ಪದದ ನಿಷ್ಪತ್ತಿಯು ಕೇವಲ 'ಲಾಲ್' ಎಂಬ ಪದದಿಂದಾಗದೆ(ರಾಜವೈಭವ) 'ಲಾಳ್' ಎಂಬ ಲಿಂಗವತ್ತಿಗೆಯ ಹೆಸರಿನಿಂದ ಲಾಳಗೊಂಡರಾಗಿರುವುದು ಎಂದು ನಿರೂಪಿಸುತ್ತಾರೆ.

ಎಂ ಎಂ ಕಲಬುರ್ಗಿ ಇವರ ದೃಷ್ಟಿಕೋನದಂತೆ ಕೇವಲ ವೃತ್ತಿಯನ್ನು ಅವಲಂಬಿಸದೇ ಆಡಳಿತವನ್ನು ಅವಲಂಬಿಸಿ ಗೌಡ, ಲಾಳಗೊಂಡರಾಗಿರುವರು ಎಂದು ಪ್ರತಿಪಾದಿಸಿದ್ದಾರೆ.

ಕೇಶೀರಾಜರ ಕನ್ನಡ ನಿಘಂಟಿನ ಪ್ರಕಾರ' ಲಾಳ್' ಎಂದರೆ ಒಂದು ದೇಶದ ಹೆಸರು. ಈಗಿನ ಗುಜರಾತ, "ಲಾಟ-ಲಾಳಂ ನಾಡು"(ಕೇಶಿರಾಜ: ೧೯೯೩: ೭೭೧೦), ಅಂದರೆ ಲಾಳ ದೇಶಕ್ಕೆ ಸೇರಿದವನು.

ಜಿ ವೀರಭದ್ರಗೌಡ ಇವರು "ಲಿಂಗಾಯತ ಲಾಳಗೊಂಡ ಎಂಬುದು ಉಭಯ ಸಮಾಸಪದ. ಈ ಸಮುದಾಯ ಸೂಚಿಸುವ ಕೆಲವು ಪರ್ಯಾಯ ರೂಪಗಳನ್ನು ಗಮನಿಸಿದಾಗ ಕೆಲವುರೂಪಗಳಲ್ಲಿ ಸಾಮ್ಯವಿದ್ದರೆ ಇನ್ನು ಕೆಲವು ರೂಪಗಳಲ್ಲಿ ಅಸಾಮ್ಯತೆ ಕಂಡುಬರುತ್ತದೆ. ಆದ್ದರಿಂದ ಈ ಜಾತಿ ಸೂಚಕ ಶಬ್ದಗಳ ನಿಷ್ಪತ್ತಿಯನ್ನು ಸ್ಪಷ್ಟಪಡಿಸಲು, ಪರ್ಯಾಯ ರೂಪಗಳನ್ನು ಮುಖ್ಯವಾಗಿ ಮಾಡುವುದಗತ್ಯ.

| ಗುಂಪು ೧ | ಗುಂಪು ೨ | ಗುಂಪು ೩ |
|---|---|---|
| ಲಾಳಗೊಂಡ | ಲಾಳಿಗೊಂಡ | ಕಾಪು |

| | | |
|---|---|---|
| ಲಾಲಗೊಂಡ | ಲಾಲಿಗೊಂಡ | ದಾವಣಿಗರು |
| ಲಾಳ್ ಗೊಂಡ | ಲಾಲ್ ಗೊಂಡ | ಲಿಂಗಾಯತರು |
| ಲೋಳಗೊಂಡ | ಲ್ವಾಳ ಗೊಂಡ | ವೀರಶೈವರು |
| ನಾಳಗೊಂಡ | ನಾಳಿಗೊಂಡ | |

ಅರ್ಥದ ಹಿನ್ನೆಲೆಯಲ್ಲಿ ಗಮನಿಸಿದಾಗ ೧. ಬುಡಕಟ್ಟು ಜನಾಂಗ (Buchanan Francs: They are Tribe Of Karnataka Descent) ೨. ಲಾಣ ಪ್ರದೇಶದ ಕೊಂಡರು/ಗೊಂಡರು ೩.ಪ್ರವಾಸ ಸಂದರ್ಭದಲ್ಲಿ 'ಲಗಳಿ' ಬಳಸುವವರು ಎಂಬ ವಿವರಣೆ ನೀಡಬಹುದಾಗಿದೆ.

ಈ ೩ ಗುಂಪಿನಲ್ಲಿ ೧ ಹಾಗೂ ೨ನೇಯ ಗುಂಪಿನ ಪದಗಳು ಪ್ರಾದೇಶಿಕ ಕನ್ನಡ ಉಚ್ಚರಣೆ ಭಿನ್ನತೆಯಿಂದ ಸೃಷ್ಟಿಗೊಂಡವು ಎಂಬುದು ಸ್ಪಷ್ಟವಾಗುತ್ತದೆ. ಗುಂಪು ೩ರ ಕಾಪು ಎಂಬ ರೂಪವು ಕೃಷಿ ವೃತ್ತಿಯನ್ನು ಅವಲಂಬಿಸಿದವರು ಎಂಬ ಅರ್ಥ ಕೊಡುತ್ತಿದ್ದು, ತೆಲುಗು ಭಾಷಾ ಗಡಿಪ್ರದೇಶಗಳಲ್ಲಿ ಲಾಳಗೊಂಡರಿಗೆ ಸೂಚಿಸುವ ರೂಪವಾಗಿದೆ. ಇನ್ನು ದಾವಣಿಗರು ಎಂಬುದು ಈ ಸಮುದಾಯದ ಮಹಿಳೆ ನೀಲಮ್ಮನ ಪವಾಡದಿಂದ ಬಂದಿರುವುದೆಂದಿದ್ದಾರೆ"( ಜಿ ವೀರಭದ್ರಗೌಡ, ೨೦೦೯, ೩೨೩).

'ಲಾಳಗೊಂಡ' ರೂಪದಲ್ಲಿಯ 'ಗೊಂಡ' ಎಂಬುದು 'ಕೊಂಡ' ಎಂಬುದರ ಪರಿವರ್ತಿತ ರೂಪ. ಕೊಂಡ/ಗೊಂಡವು ಗುಡ್ಡಗಾಡು ಜನರಿಗೆ ಅನ್ವಯಿಸುತ್ತದೆ. 'ಲಾಟ'ವು ಪ್ರಾಚೀನ ಭಾರತದ ಒಂದು ಪ್ರದೇಶ. 'ಲಾಟ' ಪ್ರದೇಶದ ಕೊಂಡರು ಲಾಳಗೊಂಡರಾಗಿರಬೇಕು. ಈ ಜನಸಮುದಾಯವು ತಮ್ಮ ಮೂಲನೆಲೆಯಿಂದ, ದಕ್ಷಿಣದೆಡೆಗೆ ಬಂದು ಅಲ್ಲಲ್ಲಿ ನೆಲೆಸಿರಬೇಕು.

"ಮಧ್ಯಪ್ರದೇಶದ ಬಾಲಾಘಾಟ್ ಜಿಲ್ಲೆಯಲ್ಲಿರುವ 'ಲಾಣ' ತಹಸೀಲ್ ಗ್ರಾಮದಲ್ಲಿರುವ ಕೋಟೆಯಿಂದ ವಲಸೆ ಬಂದವರೇ 'ಲಾಣ' 'ಲಾಳ' ಗೊಂಡರೆಂದು ಅವರ ಗೋತ್ರ ಪ್ರಾಣಿ 'ಆಮೆ' ಯಾಗಿದ್ದು ಅವರ ರಾಜಲಾಂಛನವು 'ಗಢಾ-ಕಟಂಗಾ, ಮಂಡ್ಲಾಗಢ, ಚಂದಾಗಢ' ಲಾಂಜಿಗಢ, ಭೋರಮದೇವಗಢ, ಮಹೂರಗಢ, ಜುನ್ನಾರಗಢ, ಬಾಗಪುರ(ದೇವಗಢ)ದ ಕೋಟೆಯಲ್ಲಿ ಮಂದಿರಗಳಲ್ಲಿ ಇದೆ. ಇದು ಮದನ್ಮೋತ್ತ ಆನೆಯನ್ನು ಸಿಂಹವು ಪಳಗಿಸುವ ಚಿತ್ರ"(ಕಂಗಾಲಿ ಎಂ ಸಿ, ೨೦೧೨, ೨೨೭-೨೪೨) ಇದನ್ನೆ ಕರ್ನಾಟಕದ ಬೀದರ ಜಿಲ್ಲೆಯ ಮೈಲಾರದಲ್ಲಿ ನಡೆದ ೧೩ನೇ ಅಖಿಲ ಭಾರತ ಗೊಂಡಿ ಸಾಹಿತ್ಯ ಸಮ್ಮೇಳನದ ಲೋಗೋ ಆಗಿ ಸ್ವೀಕರಿಸಲಾಗಿದೆ.

"ಗೊಂಡಾರಣ್ಯ ಮೂಲನಿವಾಸಿಗಳಿಗೂ 'ಕುಡುಒಕ್ಕಲಿಗ' ಸಮುದಾಯಕ್ಕೂ ಅತ್ಯಂತಿಕ ಸಂಬಂಧವಿರುವುದನ್ನು ಸಮಾಜವಿಜ್ಞಾನಿಗಳು ಗುರುತಿಸಿದ್ದಾರೆ. ಇಂದಿಗೂ ಕೂಡ ಕುಡುಒಕ್ಕಲಿಗ ಜನಸಮುದಾಯದಲ್ಲಿ ಕಾಣಬರುವ ಲಾಳಗೊಂಡ, ರಾಜಗೊಂಡ, ಸಾಯಗೊಂಡ, ಹೆಳವಗೊಂಡ, ಮಾಳಗೊಂಡ, ಜಾಯಗೊಂಡ ಮುಂತಾದ ಅಡ್ಡಹೆಸರುಗಳಿರುವುದು ಗೊಂಡರಿಗೂ ಮತ್ತು ಕುಡುಒಕ್ಕಲಿಗರಿಗೂ ಇರುವ ಜನಾಂಗೀಯ ಸಂಬಂಧಗಳನ್ನು ಸ್ಪಷ್ಟಪಡಿಸುತ್ತದೆ. ಲಾಳಗೊಂಡರು ಉತ್ತರಕರ್ನಾಟಕದಲ್ಲಿ ವ್ಯಾಪಕವಾಗಿದ್ದರೆ, ದಕ್ಷಿಣಕರ್ನಾಟಕದಲ್ಲಿ ಕುಡುಒಕ್ಕಲಿಗರು ಹೇರಳವಾಗಿ ಬೇರು

ಬಿಟ್ಟಿರುವುದನ್ನು ಗುರುತಿಸುತ್ತೇವೆ. ಕರ್ನಾಟಕ ರಾಜ್ಯ ಒಂದರಲ್ಲಿಯೇ ಸುಮಾರು ಐದುನೂರಕ್ಕು ಹೆಚ್ಚಿನ ಇಂತಹ ಸ್ಥಳನಾಮ ದೊರಕುವುದನ್ನು ಕಾಣುತ್ತೇವೆ ಅಷ್ಟೇ ಅಲ್ಲ, ಗೊಂಡ ಬುಡಕಟ್ಟಿನಿಂದ ಕವಲೊಡೆದು, ಕುಡಿಯೋಡೆದ ಕುಡುಒಕ್ಕಲಿಗ ಮತ್ತು ಲಾಳಗೊಂಡರಲ್ಲಿ ಹಾಗೂ ಅವರ ಜೀವನಪದ್ಧತಿಯಲ್ಲಿ ಹಲವಾರು ಹೋಲಿಕೆಗಳಿವೆ ಎಂದಿರುವರು"(ಉತ್ನಾಳ್‌ಸಿದ್ದಣ್ಣ: ೨೦೦೯:೪).ಇಲ್ಲಿ ಲೇಖಕರು ಗೊಂಡರಿಂದ ಕವಲೊದಡೆದ ಕುಡುಒಕ್ಕಲಿಗ ಮತ್ತು ಲಾಳಗೊಂಡರು ಒಂದೇ ಎಂದು ತಿಳಿಸಿದ್ದಾರೆ.

ಮೇಲಿನ ತಜ್ಞರ ವಾದಗಳಾಗಲಿ ಅಥವಾ ಅಭಿಪ್ರಾಯಗಳಾಗಲಿ ಅಸತ್ಯವೆಂದು ಅಲ್ಲಗಳೆಯುವಂತಿಲ್ಲ. ಲಾಣ ಎಂಬ ಪದವು ಪ್ರದೇಶವಾಗಿದ್ದು ಅದು ಜನರ ಭಾಷೆಯಲ್ಲಿ ಪರಿವರ್ತನೆಯಾಗಿ ಲಾಳ ಆಗಿರುವ ಸಾಧ್ಯತೆ ಇರುತ್ತದೆ. ಹೀಗೆ ಲಾಳ ಪ್ರದೇಶದಿಂದ ಬಂದವರು ಲಾಳಗೊಂಡರಾಗಿಯೇ ಇರುವರು ನಂತರ ಸಮುದಾಯ ವಾಚಕವಾಗಿರುವುದಾಗಿ ಕಂಡು ಬರುವುದು ಮೂಲತ: ಇವರು ಬುಡಕಟ್ಟು ಜನರಾಗಿರುವದಾಗಿ ಊಹಿಸಬಹುದು. ಭಾರತದಲ್ಲಿರುವ ಹೆಚ್ಚು ಜನರು ಬುಡಕಟ್ಟು ಮೂಲದವರಾಗಿರುವರು.

ನಾಳಗೊಂಡೇಶ್ವರ ಪುರಾಣ ಕಾವ್ಯಂ ತಮ್ಮದೆಂದು ಹೇಳುವ ಇವರು ಎತ್ತುಗಳ ಮೇಲೆ ತಮ್ಮ ಸಾಮಾನುಗಳನ್ನು ಲಗಳೆ ಹಾಕಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುವುದರಿಂದ. ಇವರನ್ನು ಲಾಳಗೊಂಡ ಎಂದು ಕರೆದರು. ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿ 'ಲಗಳಿ' ಎಂಬ ಹೆಸರಿನ ಸಾಕಷ್ಟು ಮನೆತನಗಳಿವೆ. 'ಲಗಳೆ' ಪದವು 'ಲಗಳಿ' ಎಂದಾಗಿದೆ. ಈ ಪದವು ರೆಡ್ಡಿಗಳಲ್ಲಿ ಹೆಚ್ಚಾಗಿ ಕಾಣುತ್ತಿರುವುದರಿಂದ ರೆಡ್ಡಿಗಳ ಪೂರ್ವಾಶ್ರಮವೂ ಕುರುಬ ಕುಲದ್ದಾಗಿರುವುದರಿಂದ ಅಭ್ಯಸನೀಯ. ಹಾಗೆಯೇ ಈ ಪ್ರದೇಶಗಳಲ್ಲಿ ಕಾಣಸಿಗುವ 'ಲಾಗಳ', 'ಲಾಡ' ಮುಂತಾದ ಹೆಸರುಗಳ ಹಿನ್ನೆಲೆಯನ್ನು ಈ ಅರ್ಥದಲ್ಲಿ ಶೋಧಿಸಬಹುದು(ನಾಳಗೊಂಡೇಶ್ವರನ ಪುರಾಣದ ಕುರಿತು ಐತಿಹ್ಯಗಳಲ್ಲಿ ವಿವರಿಸಲಾಗಿದೆ).

'ಲಾಳಿ' ಎಂಬ ಪದಕ್ಕೆ ನೇಯ್ಗೆಯವನು(ಶಿವರಾಮ ಕಾರಂತ, ೧೯೯೦, ೪೬೫)ಎಂಬರ್ಥವಿದೆ. ನೇಕಾರಿಕೆಯಲ್ಲಿ 'ಹಾಸು'ವಿನಲ್ಲಿ 'ಹೊಕ್ಕು' ಸೇರಿಸುವ ಸಾಧನವಾಗಿ 'ಲಾಳಿ' ಕೆಲಸ ಮಾಡುತ್ತದೆ. ಅದರಿಂದ ಈ ಪದವು ಕಂಬಳಿ ನೇಕಾರಿಕೆಯಲ್ಲಿ ಪ್ರಥಮವಾಗಿ ಬಳಕೆಗೆ ಬಂದಿರಬಹುದು. "ಈ ಸಮುದಾಯದಲ್ಲಿ ಕಂಬಳಿಗೆ ಪೂಜ್ಯನಿಯ ಗೌರವವಿದೆ"(ಶ್ರೀ ನಾಳಗೊಂಡೇಶ್ವರ ಪುರಾಣ ಕಾವ್ಯಂ, ೧೯೬೩).

"ದೇವಾಂಗ ಪುರಾಣಗಳಲ್ಲಿ ಉಕ್ತವಾಗಿರುವ ಚಂದ್ರಗೊಂಡೆ, ಅಮರಗೊಂಡೆ, ಲಿಂಗಗೊಂಡೆ ಎಂಬ ಪರ್ಯಾಯ ಪದಗಳು ಈ ಶ್ರೀಶೈಲದ ಜನಾಂಗಕ್ಕಿವೆ"(ನಂಜುಂಡರಾಧ್ಯ ಎಂ ಜಿ, ೧೯೫೪, ೨೪). ಹೆಚ್ಚಾಗಿ ಲಾಳಗೊಂಡರು ಶ್ರೀಶೈಲದ ದೇವಸ್ಥಾನವನ್ನು ಆರಾಧಿಸುವರು.

"ಬೀದರ ತಾಲೂಕಿನ ಅಲಿಯಂಬರ ಗ್ರಾಮದಲ್ಲಿಯೂ ಕುಡುಒಕ್ಕಲಿಗ ಸಮುದಾಯದಲ್ಲಿ ಬೋರಗೊಂಡೆ, ಶೇಟಗೊಂಡೆ, ದಾಲಗೊಂಡೆ, ಲಾಲಗೊಂಡೆ, ದುಬುಲಗೊಂಡೆ ಎಂಬ ಮನೆತನದ

ಹೆಸರುಗಳು ಬಳಕೆಯಲ್ಲಿವೆ. ಬೀದರ ಜಿಲ್ಲೆಯ ಗೊಂಡರಲ್ಲಿಯು ಬೊಮಗೊಂಡೆ, ಕಾಳಗೊಂಡೆ, ರಾಯಗೊಂಡೆ, ಲಾಲಗೊಂಡೆ, ಹೆಸರುಗಳಿವೆ. ಕುಡುಒಕ್ಕಲಿಗರು ವೀರಭದ್ರನಿಗೆ ಆರಾಧಿಸುವವರಾದರೆ ಗೊಂಡರು ಬೀರಗೊಂಡೇಶ್ವರ(ಬೀರಪ್ಪ)ನಿಗೆ ಆರಾಧಿಸುವರು. ಊರಲ್ಲಿ ವೀರಭದ್ರನಿರುವನಾದರೆ ಅಡವಿಯಲ್ಲಿ ಬೀರಪ್ಪನಿರುವನು. ಮುಂದುವರೆದು ಹಲವು ಗೊಂಡರು ಕಾಲಾಂತರದಲ್ಲಿ ಕುಡುಒಕ್ಕಲಿಗರಾಗಿರುವ ಉದಾಹರಣೆಗಳಿವೆ. ಪಶುಪಾಲನೆಯಿಂದ ಕೃಷಿಗೆ ಕೂಡಿರುವವರೇ ಕುಡುಒಕ್ಕಲಿಗರೆನಿಸಿಕೊಂಡರು"(ಮೇತ್ರಿ ಕೆ ಎಂ, ೧೯೯೪, ೧೨೬).

ಲಾಳಗೊಂಡರು ಲಾಕುಳೀಶ ಪಾಶುಪತದ ಮೂಲಿಗರೆಂದು ಭಾವಿಸಲಾಗಿದೆ. ಇದೇ ಲಾಕುಳೀಶ ಪಾಶುಪತವು ದಕ್ಷಿಣಭಾರತದ ಆಶೀಕ ರಾಜವಂಶಗಳ ಹಿಂದೆ ಇದ್ದ 'ಕೃತಶಕ್ತಿ' ಲಕುಳೀಶ ಪಾಶುಪತವು ಲಾಂಜಿಗಢದಲ್ಲಿ ಆರಂಭವಾಗಿದೆಯೆಂದು ಭಾವಿಸಲಾಗಿದೆ. ಲಾಕುಳ ಶಬ್ದವು ಲಾಣಕುಣ, ಲಾಳಕುಳ ಶಬ್ದದಿಂದ ಬಂದಿದ್ದು 'ಕುಳ' ಶಬ್ದದಿಂದ ವಾಸಸ್ಥಳ ಎಂದು ಅರ್ಥೈಸಲಾಗುತ್ತದೆ.

ಈ ಲಾಕುಳೀಶ ಪಾಶುಪತದ ಲಾಂಛನವೇ ಎಲ್ಲಾ ಜ್ಯೋತಿರ್ಲಿಂಗಗಳಲ್ಲಿ, ಭಾರತದ ಪ್ರಸಿದ್ಧ ದೇವಸ್ಥಾನದ ಭಿತ್ತಿಚಿತ್ರಗಳಲ್ಲಿ, ತೇರುಗಳಲ್ಲಿ, ದೇವಸ್ಥಾನದ ಕಂಭಗಳಲ್ಲಿ ಕೆತ್ತಲ್ಪಟ್ಟಿದ್ದು, ಇದು 'ಲಾಂಜಿಘಢ'ದ ಮೂಲಿಗರದೆಂದು ಭಾವಿಸಲಾಗಿದೆ. ಮಧ್ಯಪ್ರದೇಶದ ಬಾಲಾಘಾಟ್ ಜಿಲ್ಲೆಯಲ್ಲಿರುವ 'ಲಾಣ' ತಹಸೀಲ್ ಗ್ರಾಮದಲ್ಲಿರುವ ಕೋಟೆಯಿಂದ ವಲಸೆ ಬಂದವರೇ 'ಲಾಣ', 'ಲಾಳ' ಗೊಂಡರೆಂದು ಹೇಳಲಾಗಿದೆ.

ಹೀಗೆ ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ಲಾಳಗೊಂಡರ ಹುಟ್ಟು, ಸಂಸ್ಕೃತಿ, ಸಾಂಸ್ಕೃತಿಕ ಹಿನ್ನಲೆ ಕುರಿತು ವಿವರಿಸಿದ್ದಾರೆ.

ಸಿಂದಿಗೇರಿ ನೀಲಮ್ಮ (ಕುರುಗೋಡು ನೀಲಮ್ಮ) ಇವರ ಚರಿತ್ರೆಯನ್ನು ಹೆಕ್ಕಿ ನೋಡಿದಾಗ ಕಂಡುಬರುವ ವಿಷಯವೇನೆಂದರೆ ಹಂಪೆಯ ದಂಡನಾಯಕನು ಇವಳ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಬಯಸಿದ. ಆದರೆ ನೀಲಮ್ಮ ನಿರಾಕರಿಸಿದಾಗ ಅವರ ಕುಟುಂಬವನ್ನು ಊರು ಬಿಟ್ಟು ಹೋಗುವಂತೆ ಸೂಚಿಸಿದರು. ಅವರು ಸಂಸಾರ ಸಮೇತ ಬಂದುಗಳೆಲ್ಲಾ ಊರು ಬಿಟ್ಟು ಹೋಗುವರು ಇವರೊಂದಿಗೆ ಬಂದ ಸಹಸ್ರಾರು ದನಕರುಗಳನ್ನು ಕಟ್ಟಲು ಹಗ್ಗವಿರಲಿಲ್ಲ. ಆಗ ನೀಲಮ್ಮ ಗೂಟ ಹೊಡೆದು ತನ್ನ ಕೊರಳಿನ ಬಂಗಾರದ ಸರಿಗೆಯಿಂದ ದಾವಣಿ ಮಾಡಿ ಸಹಸ್ರ ದನಗಳನ್ನು ಕಟ್ಟಿ ಪವಾಡಗೈದಳು. ಆದ್ದರಿಂದ ಇವರನ್ನು ದಾವಣಿಗರೆಂದು ಕರೆಯುತ್ತಾರೆ.

ಲಾಕುಳ>ಲಾಳಕುಳ>ಲಾಳ>ಲಾಣ ಹೀಗೆ ದ್ರಾವಿಡ ಭಾಷೆಗಳಲ್ಲಿ ಶಬ್ದವು ರೂಪಾಂತರ ಹೊಂದಿದ್ದು ಕಿಟೆಲ್ ಶಬ್ದಕೋಶದ ಪ್ರಕಾರ ೧.ಲಾಳ-ಲಾಲಾ ಎಂಬ ರಾಕ್ಷಸನು ಆಳುತ್ತಿದ್ದ ಪ್ರದೇಶ, ೨.ಲಿಂಗವತ್ತಿಗೆ ಎಂದು ಅರ್ಥೈಸಲಾಗಿದೆ(೧೩೫೯-೬೦, ೧೯೯೩). "(೧) ಲಾಕುಳ>ಲಾಳಕುಳ>ಲಾಳ ಪ್ರದೇಶವ (ಕುಳ>ವಿಳಾಸ) (೨) ಲಕುಳೀಸ>ಎಂದರೆ 'ಯೋಗದಂಡ' ದ ಒಡೆಯ-ಲಕುಳ-ಬಡಿಗೆ, ಗುಡ >ಕೋಲಾ(ಗೋಂ) ಪ್ರತಿಷ್ಠಿತ" (ಬಸವರಾಜ ಕೆ ಎಸ್, ೨೦೦೯, ೧-೧೯).

ಲಕುಳೀಶ-ಶೈವವು, ಲಾಣಕುಳ>ಲಾಕುಳ ಶೈವವಾಗಿರುವ ಸಾಧ್ಯತೆಯಿದ್ದು, ಲಾಣಗಢದಲ್ಲಿ ಶೈವಧರ್ಮ ದೀಕ್ಷೆ ನೀಡುವ ವ್ಯವಸ್ಥೆ ಇದ್ದ ಬಗ್ಗೆ ಎಂ ಸಿ ಕಂಗಾಲಿಯವರು ಹೇಳಿದ್ದಾರೆ. ಶೈವ ಶಬ್ದವು 'ಗೊಂಡ' ಸಾಯುಂಗವೇನ್>ಸಾಯ ವೇನ್>ಸೈವೇನ್>ಶೈವನ್ ಎಂದರೆ ಐದು ಖಂಡಗಳ ಒಡೆಯ= ಪಂಚ ಭೂಖಂಡಗಳ ಒಡೆಯ ಎಂದಾಗುತ್ತದೆ.

**೨.೩ ಲಾಳಗೊಂಡರ ಹುಟ್ಟಿನ ಐತಿಹ್ಯಗಳು, ಪೌರಾಣಿಕ ಮತ್ತು ದಂತ ಕಥೆಗಳು**

ಯಾವುದೇ ಒಂದು ಸಮುದಾಯವನ್ನು ಅಧ್ಯಯನ ಮಾಡುವಾಗ ಅವರ ಸಂಪ್ರದಾಯಗಳು, ನಂಬಿಕೆಗಳ ಅಧ್ಯಯನದಲ್ಲಿ ಆ ಸಮುದಾಯದ ಪುರಾಣ ಮತ್ತು ಐತಿಹ್ಯಗಳು ಮಹತ್ವ ಪೂರ್ಣವಾದ ಪಾತ್ರವಹಿಸುತ್ತವೆ. ಸಮುದಾಯದ ಜನರ ಜೀವನವನ್ನು ಅವು ನಿರ್ದೇಶಿಸುತ್ತವೆ, ಇದರಿಂದಾಗಿ ಇವುಗಳ ಅಧ್ಯಯನ ಮಾಡುವುದು ಅಗತ್ಯವಾಗಿದೆ. ಪುರಾಣವೆನ್ನುವುದು ದೇವತೆಗಳಿಗೆ, ಸಾಂಸ್ಕೃತಿಕ ವೀರರಿಗೆ, ವಿಶ್ವದ ಸೃಷ್ಟಿ, ಅದರ ವ್ಯವಸ್ಥೀಕರಣ, ಒಂದು ದೇಶದ, ಒಂದು ಜನಾಂಗದ ಅಥವಾ ಒಂದು ಸಮುದಾಯದ ಅಥವಾ ಒಂದು ಸಂಸ್ಕೃತಿಯ ಮೂಲ ಇವುಗಳನ್ನು ಕುರಿತ ಭಾಗವನ್ನು ಪುರಾಣಗಳಲ್ಲೇ ಕರೆಯಲಾಗುತ್ತದೆ. ಪುರಾಣ ಎಂದರೇನು? ಅದರ ಸ್ವರೂಪವೇನು? ಮೊದಲಾದ ಉಗಮಗಳ ಬಗ್ಗೆ ಸಾಕಷ್ಟು ಚರ್ಚೆ ನಡೆಸಿ ಬೇರೆಬೇರೆ ವಿವರಣೆಗಳನ್ನು ಕೊಡಲಾಗಿದೆ.

೧. ಶ್ರೀ ನಾಳಗೊಂಡೇಶ್ವರ ಪುರಾಣ ಕಾವ್ಯಂ: ಈ ಪುಸ್ತಕವು ಪುರಾಣ ರೂಪದಲ್ಲಿದೆ. ಒಟ್ಟು ೨೦ ಸಂಧಿಗಳಿದ್ದು, ವಾರ್ಧಿಕ ಮತ್ತು ಭಾಮಿನಿ ಷಟ್ಪದಿಯಲ್ಲಿದೆ. ಗೊಂಡ ಕುಲದಲ್ಲಿ ಹುಟ್ಟಿದ ನಾಳಗೊಂಡನಿಂದ ಲಾಳಗೊಂಡರು ಬಂದರು ಅವರು ಅಲ್ಲಿಂದ ದಕ್ಷಿಣದೆಡೆಗೆ ಬಂದು ನೆಲೆಸಿದರು ಎಂಬ ಅರ್ಥದಲ್ಲಿ ವಿವರಣೆ ನೀಡಿರುತ್ತಾರೆ.

ಗೊಂಡರಲಿ ಬೆಳೆದುಂಡು ಪ್ರಾಯವ
ಕಂಡು ದ್ರಾವಿಡ ವಂಶದಲಿ ಬಲ
ಗೊಂಡು ಹೈಮಾವತಿಯಳೊ ಸತಿಯಾಗಿ ಮುದದಿಂದಾ।
ಕಂಡಕಡೆನೋಡುತ್ತ ಯಂಮಗೆ
ರುಂಡಮಾಲನದಯವು ಯೆಂದಿಗೆ
ಕಂಡೆನೆನುತಂ ಮನದಿ ಧ್ಯಾನಿಸಿ ಗೊಂಡರನುಗೂಡಿ॥

ಗುಣಶೀಲ ಎಂಬ ಗಣಾವರನು ಶಿವನ ಸಭೆಯಲ್ಲಿ ಯಾರನ್ನು ಲಕ್ಷಿಸದೇ ಎಡ ಬಲ ಹೋಗುವ ಸಮಯದಲ್ಲಿ ಪುನೀತನೆಂಬ ಗಣಾವರನಿಗೆ ಪಾದ ಸೋಂಕಲು ಆ ಗಣವರನು ಗುಣಶೀಲನಿಗೆ ಶಾಪವಿತ್ತನು ನೀನು ಮರ್ತ್ಯಲೋಕದಲ್ಲಿ ಪುಣ್ಯಕ್ಷೇತ್ರವಾದ ಹಿಮಾಲಯ ಪರ್ವತದ ತಪ್ಪಲಿನಲ್ಲಿ ಮಹಾಕೊಳವಿದೆ. ಆ ಕೊಳದ ಸಮೀಪದಲ್ಲಿ ರುದ್ರಪ್ರಯಾಗವೆಂಬ ಪುಣ್ಯ ಸ್ಥಳ ಉಂಟು ಅದರ ಸಮೀಪದಲ್ಲಿ ಕಿರುಕುಳವೆಂಬ ಹಳ್ಳಿಯುಂಟು. ಆ ಗ್ರಾಮದಲ್ಲಿ ವಾಸವಾಗಿರುವ ಗೊಂಡರ ವಂಶದಲ್ಲಿ ನೀನು ಹುಟ್ಟುವೆ ಎಂದಾಗ ಅವನು ಚಿಂತಾಕ್ರಾಂತನಾಗುತ್ತಾನೆ. ಗಣವರನು ಶಾಂತ ಚಿತ್ತದಿಂದ

ಮರುಗಿ ಚಿಂತಿಸ ಬೇಡ ಗೊಂಡರಲ್ಲಿ ಹುಟ್ಟಿ ಹೈಮಾವತಿಯೆಂಬ ಸತಿಯನ್ನು ಪಡೆದ ನಂತರ ನಿಮಗೆ ಒಬ್ಬ ಮಗನು ಜನಿಸುವನು. ಅವನು ಮಹತ್ವಶಾಲಿಯಾಗಿಯು, ಪವಾಡ ಪುರುಶನಾಗಿಯು, ಜಗದೋದ್ಧಾರ ಮಾಡುವಂತವನಾಗುವನು. ನಿಮಗೆ ಅಂದು ನಿಶ್ಶಾಪವಾಗಿ ಕೈಲಾಸವನ್ನು ಪಡೆಯುವಿರಿ ಎಂದು ಗಣವರನು ಹೇಳುವನು.

ಗುಣಶೀಲನು ಪರಮಾತ್ಮನ ನುಡಿ ಕೇಳಿ ಗಗನಮಾರ್ಗದಿಂದ ಸೃಷ್ಟಿ ರೂಪದಿಂದ ಒಲಿದು ಹಿಮಾಲಯದ ತಪ್ಪಲಲ್ಲಿರುವ ಕಿರುಕುಳ ಎಂಬ ಹಳ್ಳಿಯಲ್ಲಿ ಗೊಂಡಕುಲದಲ್ಲಿ ಗುಣಶೀಲನೆಂಬ ಗಣವರನು ಜನಿಸಿ ರಾಮಾನಾಥ(ಅರ್ಥಾತ್) ರಾಮುಗೊಂಡನೆಂಬ ಹೆಸರನ್ನು ಪಡೆದು ಹೈಮಾವತಿಯೆಂಬ ಸತಿಯೊಡನೆ ಸಂಸಾರ ನಡೆಸುವನು. ರಾಮನಾಥ(ರಾಮಗೊಂಡ) ಮತ್ತು ಹೈಮಾವತಿಗೆ ಪುತ್ರ ಸಂತಾನವಿಲ್ಲದೆ ಇರುವಾಗ ಶಿವನ ಸ್ಮರಣೆ ಮಾಡುವರು ಶಿವನು ಗಳದಿಂದ ಒಂದು ಶಿಶು ಜನಿಸುವುದು ಅದಕ್ಕೆ ಪರಮಾತ್ಮನು ಭೂಲೋಕದಲ್ಲಿ ಪವಿತ್ರ ಕ್ಷೇತ್ರವಾದ ಹಿಮಾಲಯವೆಂಬ ಮಹಾಪರ್ವತವಿದೆ. ಆ ಪರ್ವತದ ಕೊಳಭಾಗದಲ್ಲಿ ಕಿರುಕುಳ ಎಂಬ ಗ್ರಾಮದಲ್ಲಿ ಗೊಂಡರು ಎಂಬ ವೀರಶೈವ ಲಿಂಗಿಬ್ರಾಹ್ಮಣರೆಂಬ ಕುಲವಿದೆ ಆ ಕುಲದಲ್ಲಿ ರಾಮಾನಾಥ ಹೈಮಾವತಿಯರೆಂಬ ಸತಿಪತಿಯರಿಗೆ ಜನಿಸಿ ನಾಳಗೊಂಡೇಶ್ವರ ಎಂಬ ನಾಮಾಂಕಿತದಿಂದ ಬೆಳೆದು ಜಗದಜಡರುಗಳು ಕಳೆದು ಪಾವನಗೊಳಿಸು. ನಾನು ಹಿಮಾಲಯದ ಶಿಖರದೊಳು, ಶ್ರೀಕೇದಾರನಾಥನ ಜ್ಯೋತಿರ್ಲಿಂಗದಲ್ಲಿ ಹುಟ್ಟಿ ಎಕೋರಾಮಾರಾಧ್ಯರೆಂಬ ನಾಮದಿಂದ ಜಗದ್ಗುರುವಾಗಿ ನಿನ್ನನ್ನು ಕಾಪಾಡುತ್ತೇನೆ ಎಂದು ಹೇಳುತ್ತಾನೆ.

ಹೈಮಾವತಿ ಮತ್ತು ರಾಮನಾಥ(ರಾಮಗೊಂಡ) ಇವರು ಮಕ್ಕಳಿಲ್ಲ ಎಂದು ಶಿವಸ್ಮರಣೆ ಮಾಡುವಾಗ ಶಿವನು ಹೈಮಾವತಿಯ ಸ್ವಪ್ನದಲ್ಲಿ ಬಂದು ಶಿವಶರಣನು ನಿನಗೆ ಹುಟ್ಟುವನು ಅವನಿಗೆ ನಾಳಗೊಂಡೇಶ್ವರ ಎಂಬ ನಾಮಾಂಕಿತ ಮಾಡಿರಿ ಎಂದು ಹೇಳುವನು. ಹಾಗೇಯೆ ನಾಳಗೊಂಡೇಶ್ವರನು ಹೈಮಾವತಿಯ ಗರ್ಭದಲ್ಲಿ ಹುಟ್ಟಿ ಬರುವನು ನಾಳಗೊಂಡೇಶ್ವರನಿಗೆ ಎಂಟು ವರ್ಷ ತುಂಬಿದ ನಂತರ ರಾಮಗೊಂಡನು ಕ್ರಿಯಾದೀಕ್ಷೆಗೆ ಮುಂದಾಗುವನು ಆಗ ಕೈಲಾಸದಲ್ಲಿಯ ಪರಮಾತ್ಮನು ಕೇದಾರಲಿಂಗದಲ್ಲಿ ಉದ್ಭವಿಸಿ ಎಕೋರಾಮಾರಾಧ್ಯರೆಂಬ ನಾಮದಿಂದ ಕಿರುಕುಳ ಎಂಬ ಹಳ್ಳಿಗೆ ಬಂದು ನಾಳಗೊಂಡೇಶ್ವರನನ್ನು ನೋಡಿದಾಗ ಆಗ ಪೂರ್ವದ ನೆನಪಾಗಿ ನಮಸ್ಕರಿಸುವನು. ತಂದೆತಾಯಿ ಇಬ್ಬರು ಮಗುವನ್ನು ಕೇದಾರಕ್ಕೆ ಕಳುಹಿಸುವರು.

ಹಿಮಾಲಯದ ಕೇದಾರನಾಥನ ಜೋತಿರ್ಲಿಂಗದ ದರ್ಶನ ಪಡೆದು ನಂತರ ದೀಕ್ಷೆಯನ್ನು ನೀಡಿದರು ತದನಂತರ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋಹಕ, ಪ್ರಸಾದವೆಂಬ ಅಷ್ಟಾವರ್ಣ ಮತ್ತು ಅಷ್ಟಾವರ್ಣವನ್ನಾಚರಿಸಿ ನಂಬಿ ಪೂರ್ವದಲ್ಲಿ ಕೈಲಾಸಕ್ಕೆ ಹೋದರೆಂಬ ಕಥೆಗಳನ್ನು ತಿಳಿಸಿದರು. ನಾಳಗೊಂಡೇಶ್ವರನಿಗೆ ೨೦,೨೧ ವರ್ಷಗಳಾಗುತ್ತಾಬರಲು ಗುರುಗಳು ಹೇಳಿದ ಪ್ರಕಾರ ನಾಗಾಲಾಂಬಿಕೆ ಎನ್ನುವ ವಧುವನ್ನು ವಿವಾಹವಾದನು ವಿವಾಹದ

ನಂತರ ರಾಮಗೊಂಡನಿಗೆ ಶಾಪವಿಮೋಚನೆಯಾಗಿ ಸತಿಯಾದ ಹೈಮಾವತಿ ಸಹಿತ ಕೈಲಾಸವನ್ನು ಹೊಂದಿದರು.

ನಾಳಗೊಂಡೇಶ್ವರನು ಒಮ್ಮೆ ಮನೆಯಲ್ಲಿ ಗುರುಚರರೊಂದಿಗೆ ಪಕ್ವಾನ್ನ ಬಡಿಸುವಾಗ ಹೆಂಡತಿಯನ್ನು ಕುರಿತು ನಿನ್ನ ಗರ್ಭದಲ್ಲಿರುವ ಶಿಶುವು ಕೆಡುಕುಮಾಡಿತು. ಆದ ಕಾರಣ ಗರ್ಭದ ಶಿಶು ಜಗಕ್ಕೆ ಬರಲಿ ಎಂದು ನುಡಿದನು. ಹಾಗೆಯೇ ಸತಿಯು ಗರ್ಭವತಿಯಾದಳು. ಗ್ರಾಮದ ಜನರೆಲ್ಲರು ಆಶ್ಚರ್ಯದಿಂದ ನೋಡಿದರು ನಂತರ ನಾಳಗೊಂಡೇಶ್ವರನ ನಿತ್ಯದ ನೇಮ ಸದ್ವಿಚಾರ ಗೋಪ್ಯ ಇವುಗಳನ್ನು ನೋಡಿ ಸಾಕ್ಷಾತ್ಪರ ಶಿವನೆಂದು ತಿಳಿದರು. ನಾಳಗೊಂಡೇಶ್ವರನು ಸತಿಯನ್ನು ಕರೆದು ಇಂದು ನೀನು ಸುಖವಾಗಿ ಪ್ರಸವಿಸು ಎಂದು ಹೇಳಿದ ಆ ಕ್ಷಣದಲ್ಲಿಯೇ ಗಂಡು ಮಗುವನ್ನು ಹೆತ್ತಳು ಹಳ್ಳಿಹಳ್ಳಿ ಪಟ್ಟಣಗಳಲ್ಲೆಲ್ಲ ಜನರು ಆಶ್ಚರ್ಯ ಚಕಿತರಾಗಿ ನಾಳಗೊಂಡೇಶ್ವರನು ಅವತಾರಪುರುಷನೆಂದು ಹೊಗಳಿದರು, ಜನರ ಕಣ್ಣಿಗೆ ಶರಣರಾದರು. ಒಂದಾನೊಂದು ದಿವಸ ಜನರಿಗೆ ಭವಿಷ್ಯ ಹೇಳತೊಡಗಿದನು. ಮುಂದೆ ಕೆಲಕಾಲ ಸಮೀಪವಾಗುತ್ತ ಬಂತು ತಾವೆಲ್ಲರು ಆ ಸ್ಥಳದಲ್ಲಿರಬೇಡಿರಿ ಆರ್ಯರಿಗೂ ಅನಾರ್ಯರಿಗೂ, ಗೊಂಡರು, ಬಿಲ್ಲರು, ತೊಡವ, ಖೊತ, ಇವೆಲ್ಲ ಜಾತಿಗಳಲ್ಲಿ ಮತಬೇದಗಳು ಹುಟ್ಟಿ ಬಡಿದಾಡಿ ಸಾಯುವರು. ಆದಕಾರಣ ಸುಖದಾಯಕವಾದ ದಕ್ಷಿಣ ಕರ್ನಾಟಕದ ಪ್ರಾಂತ್ಯಕ್ಕೆ ತೆರಳಿರಿ ಅಲ್ಲಿ ನಿಮಗೆ ದೇಶಾಧಿಪತ್ಯವು, ಗ್ರಾಮಾಧಿಪತ್ಯವು ದೊರೆಯುವವು. ನೀವು ಅಲ್ಲಿಯಾದರೂ ಪಾಪರಹಿತವಾದ ಕೃಷಿಕರ್ಮದಿಂದಲೇ ಜೀವಿಸಿರಿ ನನಗೆ ಮಾತ್ರ ಅಪ್ಪಣೆಯನ್ನು ಕೊಡಿರಿ ಶಿವನ ಸಾನಿತ್ಯವನ್ನು ಹೊಂದುವೆನೆಂದನು.

ನಾಳಗೊಂಡೇಶ್ವರನು ಹಿಮಾಲಯದ ಕಡೆಗೆ ಹೋಗುವಾಗ ಗುರುಗಳಾದ ಏಕೋರಾಮಾರಾಧ್ಯರು ಎದುರು ಬಂದು ಇಲ್ಲಿಗೇಕೆ ಬಂದೆ ಅಲ್ಲಿಯೇ ಶಿವನಿಲ್ಲವೆ ಎಂದನು. ಆಗ ನಾಳಗೊಂಡೇಶ್ವರನು ನಿಮ್ಮನ್ನು ನೋಡಲು ಬಂದೆನಷ್ಟೆ ಎಂದನು. ಗುರುಗಳ ಆದೇಶದಂತೆ ಹಿಮಾಲಯದ ಮಧ್ಯ ಪ್ರವೇಶಿಸಿ ಸಮಾಧಿಯನ್ನು ಹೊಂದುವನು. ಕೆಲವು ದಿನಗಳ ನಂತರ ಶೋಣಿತಪುರದರಸನಾದ ಬಾಣಾಸುರನ ಮಗಳು ಉಷಾದೇವಿಯು ಶ್ರೀ ನಾಳಗೊಂಡೇಶ್ವರನ ದೇವಾಲಯವನ್ನು ಕಟ್ಟಿಸಿ, ಈಶ್ವರನ ದರ್ಶನಕ್ಕೆ ಬಂದವರಿಗೆ ವಿಶ್ರಾಂತಿ ಹೊಂದುವುದಕ್ಕಾಗಿ ಒಂದು ಮಂಟಪವನ್ನು ಕಟ್ಟಿಸಿ, ಗುಡಿಯ ಮುಂಭಾಗದಲ್ಲಿ ಶಿಲೆಯಲ್ಲಿ ದ್ರಾವಿಡ ಲಿಪಿಯಿಂದ ತನ್ನ ಹೆಸರನ್ನು ಕೆತ್ತಿಸಿ ಪ್ರಸಿದ್ಧಿ ಪಡೆದಿದ್ದಾಳೆ. ಶ್ರೀ ಜಗದ್ಗುರುಗಳಾದ ಏಕೋರಾಮಾರಾಧ್ಯರಿಗೊಂದು ಬಹಳ ವಿಸ್ತಾರವಾದ ಮಠವನ್ನು ರಚಿಸಿ ಓಖಿಮಠವೆಂದು ಹೆಸರನ್ನಿಟ್ಟು ಗುರುಗಳಿಗೆ ದಾನಮಾಡಿದ್ದಾಳೆ ಎಂದು ಈ ನಾಳಗೊಂಡೇಶ್ವರ ಪುರಾಣದಲ್ಲಿ ತಿಳಿಸಲಾಗಿದೆ.

ಈ ಪುರಾಣದಿಂದ ತಿಳಿದು ಬರುವ ಸಂಗತಿಯೆಂದರೆ ನಾಳಗೊಂಡೇಶ್ವರನು ಗೊಂಡನು ಅವನು ವೀರಶೈವ ಲಿಂಗೀಬ್ರಾಹ್ಮಣ ಕುಲದಲ್ಲಿ ಜನಿಸುವನು ಎಂದು ತಿಳಿಸಲಾಗಿದೆ. ಅದರಂತೆ ಗೊಂಡ ಮತ್ತು ಲಾಳಗೊಂಡ ಸಮುದಾಯಗಳೆರಡು ಒಂದೇ ಎನ್ನುವ ಅರ್ಥವನ್ನು ಇಲ್ಲಿ ಸೂಚಿಸಲಾಗಿದೆ. ಅದರಂತೆ ವೀರಶೈವದಲ್ಲಿ ಬರುವ ಲಾಳಗೊಂಡರು ಅರ್ತಾತ್ ನಾಳಗೊಂಡನ ವಂಶದಿಂದ ಕವಲೊಡೆದವರು ಎಂದು ತಿಳಿಸಲಾಗಿದೆ.

೨. ಕ್ರಿ ಪೂ ೩೨೩೫-೩೨೨೮ ಶ್ರೀ ಕೃಷ್ಣನ ಜನನ. ಈತನು ಕಚ್ಛ್-೨೨ ಗುಜರಾತ್ ರಾಜ್ಯದ ರಾಜನ ಪ್ರಸ್ತುತ ರಾಜನ ವಂಶಾವಳಿಯಿಂದ ೫೪ ವಂಶಾವಳಿ ಹಿಂದೆ ಜನಿಸಿದನೆಂದು ಪ್ರಸ್ತುತ ರಾಜ ಪ್ರಾಗಾಮೂಲಾಜಿ ರಾಜನ ಹೇಳಿಕೆ. ಅಂದರೆ ಕೊನೆಯ ಸಂಭೂವಿನಿಂದ(೧೮೨-೫೪) = ೧೨೮ ನೇ ಪೀಳಿಗೆಯವನಾಗಿದ್ದಾನೆ. ಶ್ರೀಕೃಷ್ಣನು 'ಯಾದ' ಗೋತ್ರಜ. ಯಾದಾ ಎಂದರೆ ಗೊಂಡಿ ಭಾಷೆಯಲ್ಲಿ ಆಕಳು. ಲಾಳಗೊಂಡರು, ಲಾಳಗೊಲ್ಲರು 'ಲಾಳ; ಲಾಂಜೀಗಢದಿಂದ ಬಂದವರು. '೩೩' ಕೋಟಿ ದೇವತೆಗಳ ದೀಕ್ಷಾ ಭೂಮಿ. ಅಲ್ಲಿಂದ ಬಂದವರನ್ನು 'ಲಾಳಗೊಂಡ', 'ಲಾಳಗೊಲ್ಲ' ಎಂದು ಕರೆಯಲಾಗಿದೆ. "ಲಾಕುಳಗೊಂಡ" ರಿಂದ "ಲಾಕುಳೀಸ" ಪಾಶುಪತ ಪಂಥ ಆರಂಭವಾಗಿದೆ ಎಂಬ ಪ್ರತೀತಿ ಇದೆ.



೩. ಕುರುಗೋಡು ನೀಲಮ್ಮ: ಸಿಂದಿಗೇರಿ ನೀಲಮ್ಮ ಕುರುಗೋಡು ನೀಲಮ್ಮ ಎಂದೇ ಪ್ರಖ್ಯಾತಳಾದವಳು. ನೀಲಮ್ಮನ ಹುಟ್ಟೂರು ಬಳ್ಳಾರಿ ತಾಲೂಕಿನ ಸಿಂದಿಗೇರಿ. ಕೆಂಚನಗೌಡ, ಪೋರಮ್ಮನ ಮಗಳಾದ ನೀಲಮ್ಮ ಲಾಳಗೊಂಡರ ವಂಶದಲ್ಲಿ ಜನಿಸಿ ಶಿವಶರಣೆ ಎಂದು ಖ್ಯಾತಿ ಪಡೆದವಳು. ನೀಲಮ್ಮನವರು ೭ ವರ್ಷ ಇದ್ದಾಗ ಸಿಂದಿಗೇರಿಯಲ್ಲಿ ನಡೆಯುತ್ತಿದ್ದ ಬಸವಪುರಾಣ ಪ್ರವಚನ ಬಾಲಕಿ ಕೆಂಚಮ್ಮನ ಮೇಲೆ ಘಾಢವಾದ ಪರಿಣಾಮ ಬೀರಿತು. ದಿನದಿಂದದಿನಕ್ಕೆ ಕೆಂಚಮ್ಮನ ದೈವ ಪ್ರೇಮವು ಜನರ ಬಾಯಲ್ಲಿ ಹರಿಯತೊಡಗಿತು. ಒಮ್ಮೆ ತಾಯಿ ಪೂರಮ್ಮ ಮಗಳಿಗೆ ಎಣ್ಣೆ ಸ್ನಾನ ಮಾಡಿಸುತ್ತಿರಲು ಬಸವಣ್ಣನು ಜಂಗಮ ವೇಶದಾರಿಯಾಗಿ ಬಂದು ಭಿಕ್ಷೆ ಕೇಳಲು ಪೋರಮ್ಮ ಭಿಕ್ಷೆ ನೀಡಿ ಬಂದು ನೋಡಲು ಮಗಳು ಅದೃಶ್ಯಳಾಗಿದ್ದಳು. ಅತ್ತ ಉರೆಲ್ಲಾ ಹುಡುಕಿದರು ಮಗಳಾಗಲಿ ಜಂಗಮನಾಗಲಿ ಕಂಡುಬರಲಿಲ್ಲ. ಕೆಂಚಮ್ಮನಿಗೆ(ನೀಲಮ್ಮ) ವೈರಾಗ್ಯ ಹುಟ್ಟಿ ಕುರುಗೋಡಿಗೆ ಬಂದು ದೊಡ್ಡ ಬಸವೇಶ್ವರನ ಸಾನಿಧ್ಯದಲ್ಲಿ ನೆಲೆಸಿದಳು. ಅಷ್ಟರಲ್ಲಿ ಕೆಂಚಮ್ಮ ಕುರುಗೋಡಿನಲ್ಲಿ ಇರುವ ವಿಷಯ ತಿಳಿದುಬರುತ್ತದೆ. ತಂದೆತಾಯಿಯರು ಕೆಂಚಮ್ಮನನ್ನು ಮನೆಗೆ ಬರುವಂತೆ ಬೇಡಿದರು. ಆದರೆ ಕೆಂಚಮ್ಮ ಬಸವಣ್ಣನೇ ನನಗೆ ತಂದೆ ತಾಯಿ ಸಕಲವೂ ಅವನೇ, ನಾನು ಬರುವುದಿಲ್ಲವೆಂದು ಹೇಳುವಳು. ಕೆಂಚಮ್ಮನ ತಂದೆ ಕೆಂಚನಗೌಡನಿಗೆ ಮಗಳು ಶಿವಭಕ್ತೆಯಾಗುವ ಬಯಕೆ ಇರಲಿಲ್ಲ ಅವಳನ್ನು ಕೊಲೆಮಾಡಲು ಯತ್ನಿಸಿ ವಿಫಲರಾದರು.

ಕೆಂಚಮ್ಮನ ಭಕ್ತಿಯ ಪ್ರಖರತೆ ಬಳ್ಳಾರಿ ಮತ್ತು ಹೊಸಪೇಟೆಯ ಪೀಠಾದೀಶರಾದ ಹೇಮಕೂಟ ಪೀಠದ ನಿರಾಭಾರಿ ದೇಶಿಕಾರ್ಚಾರಾದ ಜಗದ್ಗುರು ಕಪ್ಪಿನ ಚನ್ನಬಸವ ಮಹಾಸ್ವಾಮಿಗಳು ಕುರುಗೋಡಿನ ಕೆಂಚಮ್ಮನ ಯೋಗ ವ್ಯಕ್ತಿತ್ವವನ್ನು ಹರಿತು ಇಷ್ಟಲಿಂಗ ಸಂಸ್ಕಾರ ನೀಡಿ ದೊಡ್ಡಬಸವೇಶ್ವರನ ಸನ್ನಿದಿಯಲ್ಲಿ ಲಿಂಗಪೂಜಾನುಷ್ಠಾನಕ್ಕೆ ಅನುಕೂಲ ಮಾಡಿಕೊಟ್ಟರು.

ಕುರುಗೋಡಿನಿಂದ ೨೫ ಕಿ.ಮೀ ದೂರದ ಮುದ್ದಾಪುರಕ್ಕೆ ಹೋಗಿ ಅಲ್ಲಿಯ ಜನರಿಗೆ ಶರಣ ತತ್ವದ ಮಹತ್ವ ತಿಳಿಸಿ ಜನರ ಸನ್ಮಾರ್ಗದಲ್ಲಿ ನಡೆಯಲು ಪ್ರೇರಕಳಾಗುತ್ತಾಳೆ. ಇದನ್ನು ಅರಿತ ಊರಿನ ಜನರು ಮತ್ತು ಹಿರಿಯರಾದ ಮುಕ್ಕನಗೌಡರು ಸೇರಿ ಒಂದು ದೊಡ್ಡ ಮಠವನ್ನು ಕಟ್ಟಿಸಿ ನೀಲಮ್ಮನ ಮಠವೆಂದು ನಾಮಕರಣ ಮಾಡುತ್ತಾರೆ. ಅಂದಿನಿಂದ ಕೆಂಚಮ್ಮ ನೀಲಮ್ಮಳಾಗಿ

ಪ್ರಖ್ಯಾತಳಾಗುತ್ತಾಳೆ. ಅದನ್ನು ಇಂದು ಕುರುಗೋಡು ನೀಲಮ್ಮನ ಮಠವೆಂದೇ ಕರೆಯುತ್ತಾರೆ. ನೀಲಮ್ಮ ಅದೇ ಮಠದಲ್ಲಿದ್ದುಕೊಂಡು ನಾಡಿನಾದ್ಯಂತ ಶರಣತತ್ವ ಪ್ರಚಾರಕ್ಕೆ ಎತ್ತಿನ ಮೇಲೆ ಕುಳಿತು ಪ್ರಯಾಣಿಸುತ್ತಾಳೆ. ಹೀಗೆ ಚಲಿಸುವಾಗ ಎತ್ತು ಮಾತ್ರ ಕಾಣಿಸುತ್ತಿತ್ತು ಆದರೆ ನಿಲಮ್ಮ ಕಾಣಿಸುತ್ತಿರಲಿಲ್ಲ. ಹೀಗೆ ಆಕೆಯ ಸುತ್ತ ಪವಾಡಗಳೇ ತುಂಬಿದ್ದವು.

ಗದಗ ಸಮೀಪದ ಕದಡಿ ಎಂಬ ಕ್ಷೇತ್ರಕ್ಕೆ ತೆರಳಿ ಪವಾಡ ನಡೆಸಿದಾಗ ಜನರು ಪ್ರಭಾವಿತರಾಗಿ ಮಠವೊಂದನ್ನು ನಿರ್ಮಿಸುತ್ತಾರೆ. ಹಂಪೆಯ ದಂಡನಾಯಕನು ಲಿಂಗಪೂಜಾನಿರತ ನೀಲಮ್ಮನನ್ನು ಕಂಡು ಸೌಂದರ್ಯಕ್ಕೆ ಮಾರುಹೋಗಿ, ನೀಲಮ್ಮ ನಿರಾಕರಿಸಿದಾಗ ಮೊಲದ ಮಾಂಸವನ್ನು ಲಿಂಗದ ಮೇಲೆ ಹಾಕಲು ಮಾಂಸವು ಮಲ್ಲಿಗೆ ಹಾರವಾಯಿತು ದಂಡನಾಯಕನಿಗೆ ನೀಲಮ್ಮನ ಮಹಿಮೆ ಅರ್ಥವಾಗಿ ಹಂಪಿಯಲ್ಲಿ ನೀಲಮ್ಮನ ಮಠವೊಂದನ್ನು ನಿರ್ಮಿಸಿ ಧರ್ಮಕಾರ್ಯದಲ್ಲಿ ತೊಡಗಿಸಿಕೊಂಡನು. ಹೀಗೆ ನೀಲಮ್ಮನ ಪವಾಡಗಳು ಅನೇಕ ಕದಡಿ ಕಲ್ಯಾಣವಾಗಿಸಿ ನೀಲಮ್ಮ ಅಲ್ಲೇ ನೆಲೆಸುವಳು. ನೀಲಮ್ಮನ ೮೦೦ ಮಠಗಳು ಉದಯಿಸಿದವು. ಶುದ್ಧ ಶ್ರಾವಣ ಮಾಸದಲ್ಲಿ ತನ್ನ ಜಾತ್ರೆಯನ್ನು ಕದಡಿಯಲ್ಲಿ ನೆರವೇರಿಸಲು ಕದಡಿಯ ಭಕ್ತರಿಗೆ ಹೇಳಿ ನೀಲಮ್ಮ ಅಲ್ಲಿಯೇ ಕೈಲಾಸ ಸೇರುವಳು.

೪. ದಾವಣೀ(ದಾವಣಿಗರು) ಲಾಳಗೊಂಡ ಲಿಂಗಾಯುತರು: ನೀಲಮ್ಮನ ಕಾಲದಿಂದಲೇ ಲಾಳಗೊಂಡರಲ್ಲಿ 'ದಾವಣಿ' ಎಂಬ ಒಂದು ಪ್ರಬೇದ ಜನ್ಮತಾಳಿದೆ. ಲಾಳಗೊಂಡರ ಮೂಲತ: ಪಶುಪಾಲಕರು. ಸಿಂದಿಗೇರಿಯಲ್ಲಿ ಆನೆಗೊಂದಿ ಅರಸರು ಆಳುತ್ತಿರುವಾಗ ಆನೆಗೊಂದಿ ಅರಸರು ನೀಲಮ್ಮನ ಸೌಂದರ್ಯಕ್ಕೆ ಮಾರು ಹೋಗಿ ಊಟಕ್ಕೆ ಆಮಂತ್ರಿಸುವರು. ನೀಲಮ್ಮನ ಸಹೋದರರು ಮಾತ್ರ ಊಟಕ್ಕೆ ಬರಲು ಅರಸರು ನೀಲಮ್ಮನನ್ನು ಊಟಕ್ಕೆ ಬರುವಂತೆ ತಿಳಿಸಿದರು, ನನ್ನ ಸಹೋದರರು ಊಟಮಾಡಿದರೆ ನಾನು ಊಟ ಮಾಡಿದ ಹಾಗೇ, ಎಂದಾಗ ಅರಸರು ಅದು ಹೇಗೆ ಸಾಧ್ಯ, ಹಾಗಾದರೆ ನಿಮ್ಮ ಸಹೋದರರು ಊಟ ಮಾಡಿದ್ದನ್ನೇ ನೀವು ಕಾರಿ ತೋರಿಸಿ ಎಂದಾಗ ನೀಲಮ್ಮಳು ಕಾರಿ ಪವಾಡಗೈವಳು, ಸಿಟ್ಟಿಗೆದ್ದ ಅರಸ ರಾಜ್ಯ ಬಿಟ್ಟು ಹೋಗುವಂತೆ ನೀಲಮ್ಮನ ಸಹೋದರರಿಗೆ ಆಜ್ಞಾಪಿಸುವನು, ನೀಲಮ್ಮ ಅವಳ ಸಹೋದರರು ಮತ್ತು ಲಾಳಗೊಂಡ ಬಂಧುಗಳನೇಕರು ಸಂಸಾರ ಸಮೇತ ತುಂಗಭದ್ರ ನದಿ ದಾಟಿ ಇಂದಿನ ಮುಂಡರಿಗಿ ತಾಲೂಕಿನ ಬಾಗೋಡಿಗೆ ಬಂದರು. ಇವರೊಂದಿಗೆ ತಂದಿದ್ದ ಸಹಸ್ರಾರು ದನಗಳನ್ನು ಕಟ್ಟಲು ಹಗ್ಗವಿರಲಿಲ್ಲ. ಆಗ ನೀಲಮ್ಮ ಗೂಟ ಹೊಡೆದು ತನ್ನ ಕೊರಳಿನ ಬಂಗಾರದ ಸರಗಿಯಿಂದ ದಾವಣಿ ಮಾಡಿ ದನಗಳನ್ನು ಕಟ್ಟಿ ಪವಾಡಗೈದಳು. ಅಂದಿನಿಂದ ಇವರಿಗೆ ದಾವಣಿಯರೆಂಬ ಹೆಸರು ಪ್ರಾಪ್ತವಾಯಿತು. ಲಾಳಿ ಹೊಡೆಯುವ(ಹಿಂದಕ್ಕೆ ಮುಂದಕ್ಕೆ ಹೆಜ್ಜೆ ಹಾಕುವ) ಗೂಳಿ ಎತ್ತು ತೆಗೆದುಕೊಂಡು ಬಳ್ಳಾರಿಯತ್ತ ಬಂದು ನೆಲೆಗೊಂಡವರಿಗೆ ಲಾಳಗೊಂಡರೆಂಬ ಹೆಸರು ಬಂದಿತು(ಮೈತ್ರಿ ಕೆ ಎಂ:೨೦೦೮:೪೫-೪೬).

೫. ದೇವಾಂಗ ಪುರಾಣದಲ್ಲಿ ಉಕ್ತವಾಗಿರುವ ಚಂದ್ರಗೊಂಡೆ, ಅಮರಗೊಂಡೆ, ಲಿಂಗಗೊಂಡೆ, ಎಂಬ ಪರ್ಯಾಯ ಪದಗಳು ಶ್ರೀ ಶೈಲದ ಜನಾಂಗಕ್ಕಿವೆ. ಕುಡುಒಕ್ಕಲಿಗ ಸಮುದಾಯದಲ್ಲಿ

ಬೋರಗೊಂಡೆ, ಶೇತಗೊಂಡೆ, ದಾಲಗೊಂಡೆ, ಲಾಲಗೊಂಡೆ, ದುಬುಲಗೊಂಡೆ ಎಂಬ ಮನೆತನದ ಹೆಸರುಗಳಿವೆ.

೬. ಲಾಳಗೊಂಡರು ರಾಣಿ ರುದ್ರಮ್ಮನ ಸೈನ್ಯದಲ್ಲಿ ಸಿಪಾಯಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅವರು ಕಾಕತೀಯ ಸಾಮ್ರಾಜ್ಯದ ಪತನದ ನಂತರ ನಲಗೊಂಡ ಕಡೆಯಿಂದ ವಿಜಯನಗರದ ಆನೆಗೊಂದಿಗೆ ಬಂದರು. ಅವರು ಆನೆಗಳ ಪಳಗಿಸಿದ ಸ್ಥಳವೇ ಆನೆಗೊಂದಿಯಾಯಿತೆಂದು ಭಾವನೆ ಇದೆ. ರಕ್ಕಸ–ತಂಗಡಿಗಿ ಯುದ್ಧದ ತರುವಾಯ ವಿಜಯನಗರ ಸಾಮ್ರಾಜ್ಯ ಪತನ ನಂತರ ಈ ಭಾಗದಿಂದ ಬಳ್ಳಾರಿ, ರಾಯಚೂರು ಇತರೆ ಭಾಗಗಳಲ್ಲಿ ನೆಲೆಗೊಂಡರು ಎಂದು ಹೆಳವರ ದಾಖಲೆಗಳ ಮೂಲಕ ತಿಳಿದು ಬರುತ್ತದೆ.

ಚಾರಿತ್ರಿಕ ಹಾಗೂ ಪೌರಾಣೀಕ ಅಂಶಗಳ ಪರಿಗಣನೆಯಿಂದ ಲಾಳಗೊಂಡರು ಉತ್ತರಭಾರತ ಮೂಲದವರು, ದಕ್ಷಿಣಕ್ಕೆ ಬಂದಿರುವುದನ್ನು ಈ ಕೆಳಗಿನ ಅಂಶಗಳ ಹಿನ್ನೆಲೆಯಲ್ಲಿ ಅನುಮಾನಿಸಿ ಕೊಳ್ಳಬಹುದು.

- ಆರ್ಯರ ಆಕ್ರಮಣದಿಂದ ದಕ್ಷಿಣದತ್ತ ಬಂದ ದ್ರಾವಿಡ ಜನಾಂಗದಲ್ಲಿ ಒಂದು ಜನಾಂಗವಾಗಿರಬೇಕು.
- ರಾಜಕೀಯ ಹಿನ್ನೆಲೆಯಲ್ಲಿ ಸೈನಿಕ ಇತರೆ ಸ್ಥಾನವನ್ನು ಅವಲಂಬಿಸಿ, ರಾಜಕೀಯವಾಗಿ ಬಂದಿರಬೇಕು.
- ಉತ್ತರ ಭಾರತದಲ್ಲಿಯ ಬರಗಾಲದಿಂದ ದಕ್ಷಿಣಕ್ಕೆ ವಲಸೆ ಬಂದಿರಬೇಕು.

ಹೀಗೆ ದಕ್ಷಿಣಕ್ಕೆ ಬಂದಿರಬಹುದಾದ ಲಾಳಗೊಂಡರು ಕಲ್ಯಾಣಕ್ರಾಂತಿಯ ಫಲವಾಗಿ, ಲಿಂಗದೀಕ್ಷೆ ಸ್ವೀಕರಿಸಿ ಲಿಂಗಧರ್ಮಿಗಳಾದರು. ಇವರು ಏಕಕಾಲದಲ್ಲಿ ಲಿಂಗಧಾರಿಗಳಾದಂತೆ ಕಂಡುಬರುವುದಿಲ್ಲ. ಸಂಪರ್ಕ ಸನ್ನಿವೇಶಗಳಿಗೆ ಒಳಗಾಗಿ ಕಾಲಾಂತರದಲ್ಲಿ ಲಿಂಗಧರ್ಮಿಗಳಾಗಿರಬೇಕು.

**೨.೪ ಲಾಳಗೊಂಡರ ನೆಲೆಯ ಹಿನ್ನೆಲೆ**

ಶ್ರೀ ಕೃಷ್ಣನು 'ಯಾದ' ಗೋತ್ರಜ ವಂಶದವನು. ಯಾದ ಎಂದರೆ ಗೊಂಡಿ ಭಾಷೆಯಲ್ಲಿ ಆಕಳು. ಲಾಳಗೊಂಡರು, ಲಾಳಗೊಲ್ಲರು 'ಲಾಳ' ಲಾಂಜಿಗಢದಿಂದ ಬಂದವರು. ಇದು ೩೩ ಕೋಟಿ ದೇವತೆಗಳ ದೀಕ್ಷಾಭೂಮಿ. ಅಲ್ಲಿಂದ ಬಂದವರನ್ನು 'ಲಾಳಗೊಂಡ, ಲಾಳಗೊಲ್ಲ' ಎಂದು ಕರೆಯಲಾಗಿದೆ.

ಭಾರತದ ಮಧ್ಯ ಮತ್ತು ಉತ್ತರ ಭಾಗದಲ್ಲಿ(ಗೊಂಡ್ವಾನ್‌ಖಂಡ) ಕೋಯಾ ವಂಶೀಯ ಗೊಂಡ ಸಂಬಂಧಿ ಸಮಾಜಗಳ ಹಲವಾರು ಸಣ್ಣ ಪುಟ್ಟ ರಾಜ್ಯಗಳಿದ್ದವು. ಗೊಂಡರಿಗೆ ಮತ್ತು ಅವರ ಧಾರ್ಮಿಕ ಆಚರಣೆಗಳಿಗೆ ಆರ್ಯರಿಂದ(ಕ್ರಿ. ಪೂ. ೩೦೦೦ ವರ್ಷಗಳ ಸುಮಾರಿಗೆ ಭಾರತಕ್ಕೆ ಆರ್ಯರ ಆಗಮನದಿಂದ)ಅಘಾದ ಪೆಟ್ಟುಬಿತ್ತು. ಅವರು ಅಂಬೋದ್ವೀಪ(ಭಾರತ)ದ ಮೂಲ ನಿವಾಸಿಗಳ ಗ್ರಾಮ ನಗರಗಳು ಮತ್ತು ರಾಜ್ಯಗಳನ್ನು ಸಮೂಲ ನಾಶಮಾಡಲಾರಂಭಿಸಿದರು. ಈಗಾಗಿ ಗೊಂಡ

ಧರ್ಮಿಯರನೇಕರು ಆರ್ಯರ ಗುಲಾಮರಾದರೆ, ಹಲವರು ಸ್ವಧರ್ಮ, ಸ್ವದೇಶದ ರಕ್ಷಣೆಗಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿದರು. ಇನ್ನೂ ಕೆಲವರು ತಮ್ಮನ್ನು ಉಳಿಸಿಕೊಳ್ಳಲು ದಕ್ಷಿಣ ಭಾರತದತ್ತ ವಲಸೆ ಹೋದರು. ಆದರೂ ಶೋಷಣೆ ನಿಲ್ಲಲಿಲ್ಲ. ಶಕರು, ಯುನಾನಿ, ಮೊಗಲ್ ಇತ್ಯಾದಿ ಧರ್ಮೀಯರ ಆಕ್ರಮಣ ಮೇಲಿಂದ ಮೇಲೆ ಆಗಿ ಗೊಂಡರ ಭಾಷೆ ಸಂಸ್ಕೃತಿಯ ಮೇಲೂ ಪ್ರಭಾವ ಬೀರಿದರು. ಆರ್ಯರು ಗೊಂಡರಲ್ಲಿಯೇ ಜಗಳ ಹಚ್ಚಿ ಲಾಭ ಪಡೆದರೆಂಬುದಕ್ಕೆ ಋಗ್ವೇದ, ರಾಮಾಯಣ, ಮಹಾಭಾರತ ಮತ್ತು ಪುರಾಣಗಳಲ್ಲಿಯ ಸಾಹಿತ್ಯವೇ ಸಾಕ್ಷಿಯಾಗಿರುವುದು ಅದರೂ ಕೋಯಾವಂಶೀಯ ಗೊಂಡರು ಆರ್ಯರ ಧರ್ಮಕ್ಕೆ ಒಪ್ಪಲಿಲ್ಲ.

ಹಲವಾರು ಗೊಂಡರು ಅನಿವಾರ್ಯವಾಗಿ ಆರ್ಯರ ಗುಲಾಮರಾಗಿ ಆರ್ಯರ ಧರ್ಮ ಸ್ವೀಕರಿಸಿದರೂ ಕೂಡ ಗೊಂಡರಿಗೆ ಅವರು ಆರ್ಯರೆನ್ನಲಿಲ್ಲ. ಬದಲಾಗಿ ಶೂದ್ರ, ದಾಸ, ದಶ್ಯು, ರಾಕ್ಷಸ, ದಾನವ, ಅಸುರ ಎಂಬೀ ಹೆಸರುಗಳಿಂದ ಕರೆದರು. ಬುದ್ಧನ ಕಾಲದಲ್ಲಿ ಭಾರತದಾದ್ಯಂತ ಬೌದ್ಧ ಧರ್ಮ ಪಸರಿಸಿತು. ಹಾಗೆ ನೋಡಿದರೆ ಬುದ್ಧನ ಹಾಗೂ ಗೊಂಡರ ತತ್ವಗಳಲ್ಲಿ ಭಿನ್ನತೆಯಿಲ್ಲ ಆದರೂ ಬೌದ್ಧ ಧರ್ಮ ನಾಟಲಿಲ್ಲ. ಉಳಿದೆಲ್ಲಾ ಧಾರ್ಮಿಕ ತತ್ವಗಳಲ್ಲಿಯೂ ಅನೇಕ ಅಂಶಗಳು ಗೊಂಡ ಧರ್ಮದ ತತ್ವಗಳನ್ನೆ ಅಳವಡಿಸಿಕೊಂಡಿದ್ದರೂ ಕೂಡ ಅವುಗಳನ್ನು ಅನುಸರಿಸದೇ ಇಂದಿಗೂ ಗೊಂಡರು ತಮ್ಮ ಮೂಲ ತತ್ವ ಸಂಸ್ಕೃತಿಯಿಂದ ವಿಚಲಿತವಾಗದಿರುವುದು ಸೋಜಿಗವೇ ಸರಿ! (ಮೋತಿರಾಮ್ ಕಂಗಾಲಿ, ೧೯೮೯, ೫೨೧೪).

ಈ ಮೇಲೆ ವಿವರಿಸಿದಂತೆ ಗೊಂಡರು ಮತ್ತು ಲಾಳಗೊಂಡರು ಆರ್ಯರ ಆಕ್ರಮಣದಿಂದ ಉತ್ತರ ಭಾರತದಿಂದ ದಕ್ಷಿಣದೆಡೆಗೆ ವಲಸೆ ಬಂದು ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು ಎನ್ನಬಹುದು. ಅನೇಕ ದಾರ್ಶನಿಕರ ಪ್ರಭಾವದಿಂದ ಹಲವರು ಮತಾಂತರಗೊಂಡರು, ಇನ್ನೂ ಕೆಲವರು ತಮ್ಮ ಮೂಲ ಸಂಸ್ಕೃತಿಯ ಉಳಿಯುವಿಕೆಯಲ್ಲಿ ಮುಂದುವರೆದು ತಮ್ಮ ಆಚಾರ ವಿಚಾರಗಳನ್ನು ಉಳಿಸಿಕೊಂಡರು.

ಪ್ರಾಚೀನ ಕಾಲದಲ್ಲಿ ಪೃಥ್ವಿಗೆ 'ಪ್ಯಾಂಜಿಯಾ' ಎಂತಲೂ ಕರಯಲಾಗುತ್ತಿತ್ತು. ಹಾಗೆಂದರೆ 'ಪೃಥ್ವಿ ಸಮೂಹ' ಎಂದರ್ಥ [Panjaea,-it is a Greek word meaning 'ALL EARTH' (Alfred Wegner)] ಪೃಥ್ವಿ(ಪ್ಯಾಂಜಿಯಾ) ಉತ್ತರ ಭಾಗವನ್ನು ಟಿರಿಷರಿ (ಯುರೇಷಿಯ) ಭೂಮಿಯೆಂದು ಮತ್ತು ದಕ್ಷಿಣ ಭಾಗವನ್ನು ಗೊಂಡವಾನ ಭೂಮಿಯೆಂದು ಗುರುತಿಸಲಾಯಿತು. ಪೃಥ್ವಿಯ ದಕ್ಷಿಣ ಭಾಗದಲ್ಲಿರುವ ನಿಕ್ಷೇಪಗಳೆಲ್ಲ ಮಧ್ಯಪ್ರದೇಶದ 'ಗೊಂಡ' ರಾಜ್ಯದ ನಿಕ್ಷೇಪಗಳಿಗೆ ಹೋಲಿಕೆಯಾಗಿರುವುದರಿಂದ "ಮೆಡ್ಲಿಕಾಟ್‌ರವರು ಆ ಪ್ರದೇಶಕ್ಕೆ "ಗೊಂಡವಾನ ಪ್ರದೇಶವೆಂದು" ಕರೆದರು. ಕ್ರಿ ಶ ೧೮೭೬ ರಲ್ಲಿ ಓ ಪೀಸ್ಟ್ ಮ್ಯಾಂಟಲ್‌ರವರು ಈ ಹೆಸರನ್ನು ಮೊದಲ ಬಾರಿಗೆ ಪ್ರಕಟಿಸಿದರು"(ಪುಟ್ಟಪ್ಪ ಕೆ ವಿ: ೧೯೬೪:೨೧೮). ಹಿಂದೆ ಗೊಂಡ್ವಾನ ಖಂಡಕ್ಕೆ ಕೋಯಿಮೂರ ಮಹಾದ್ವೀಪದ ಹೆಸರಿನಿಂದ ಪರಿಚಯಿಸಲಾಗುತ್ತಿತ್ತು. ಅದರಲ್ಲಿ ಪೃಥ್ವಿಯ ದಕ್ಷಿಣಗೋಳಾರ್ಧದ ೫

ಉಪ ಮಹಾದ್ವೀಪಗಳು ಕೂಡಿವೆ. ಆ ದ್ವೀಪ ಸಮೂಹಕ್ಕೆ ಗೊಂಡಿ ಭಾಷೆಯಲ್ಲಿ 'ಸಯಿಗಾರ' ಅಥವಾ 'ಸಿಂಗಾರ ದ್ವೀಪ' ಎಂದು ಕರೆಯುತ್ತಾರೆ. ಕಾಲಾಂತರದಲ್ಲಿ ಪ್ರಾಕೃತಿಕ ಬದಲಾವಣೆಯಿಂದಾಗಿ ಮೂಲ ಎರಡು ಖಂಡಗಳು ವಿಭಜನೆಗೊಂಡು ಟೆಥಿಸ್ ಸಮುದ್ರದಲ್ಲಿ ಹಿಮಾಲಯ ಪರ್ವತ ಜನ್ಮತಾಳಿತು. ಹಾಗೇಯೆ ಯಾವ ಭೂಮಿ ಗೊಂಡ್ವಾನ್ ಖಂಡದಲ್ಲಿ ಕೂಡಿತ್ತೋ, ಅದು ಒಡೆದು ಭೂ ಖಂಡಗಳಾಗಿ ಪರಿವರ್ತನೆಯಾಯಿತು.

ಗೊಂಡ್ವಾನ ಒಂದು ಮಹಾದ್ವೀಪ. ಇದರ ಇತಿಹಾಸವು ಬಹಳ ಪುರಾತನವಾದ್ದು. ಗೊಂಡ್ವಾನ ಭೂ ಪ್ರದೇಶ ಐದು ಭೂ ಖಂಡಗಳನ್ನು ಹೊಂದಿರುವ ವಿಸ್ತಾರವಾದ ಭೂ ಪ್ರದೇಶ. ಅವು ೧) ಆಫ್ರಿಕಾ ಖಂಡ ೨) ಏಷ್ಯಾ ಖಂಡ ೩) ಯುರೋಪ ಖಂಡ ೪) ಅಮೇರಿಕ ಖಂಡ ೫) ಅಂಟಾರ್ಟಿಕ ಖಂಡ. ಗೊಂಡ್ವಾನ ಲ್ಯಾಂಡ್ ಎಂಬುದು ಸಮಾಜಶಾಸ್ತ್ರಜ್ಞರು, ಜೀವಶಾಸ್ತ್ರಜ್ಞರ, ಮಾನವಶಾಸ್ತ್ರಜ್ಞರು, ಭುಗೋಳಶಾಸ್ತ್ರಜ್ಞರು. ಈ ಭೂಮಿಯು ಸುಮಾರು ೩೫೦ ದಶಲಕ್ಷ ವರ್ಷಗಳಿಂದ ೨೦೦ ದಶಲಕ್ಷ ವರ್ಷಗಳಿಗೂ ಹಿಂದೆ ಇದ್ದ ಭೂಗೋಳ ಸ್ಥಿತಿಯೆಂದು ಹೇಳುತ್ತಾರೆ, ಈ ಗೊಂಡ್ವಾನ ಲ್ಯಾಂಡ್ ಹಾಗೂ ಲುರೇಶಿಯಾ(LAURASIA) ಎಂಬ ಎರಡು ಭೂ ತುಂಡುಗಳು ಬೇರ್ಪಟ್ಟು ಖಂಡಾಂತರ ಚಲನಾ ಸಿದ್ಧಾಂತದನ್ವಯ ಈಗಿನ ಸ್ಥಿತಿಯು ನಿರ್ಮಾಣವಾಗಿದೆಯೆಂದು ವೈಜ್ಞಾನಿಕವಾಗಿ ನಂಬಲಾಗಿದೆ. ಈ ಐದೂ ಖಂಡಗಳಿಗೆ ಗೊಂಡ್ವಾನ್ ಖಂಡವೆಂದು ಕರೆಯುವರು ಅಲ್ಲಿಯ ಮೂಲ ನಿವಾಸಿಗಳ ಶಾರೀರಿಕ ಗುಣಧರ್ಮಗಳಲ್ಲಿ ಮತ್ತು ಸಾಂಸ್ಕೃತಿಕ ಮೌಲ್ಯಗಳಲ್ಲಿ ಹೋಲಿಕೆಯುಂಟು.

**೨.೫ ವಂಶವೃಕ್ಷ**

ಆರನೇ ಶತಮಾನದ ಆನಂತರದಲ್ಲಿ ಶಕ ವರ್ಷದ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಶಕ ವರ್ಷವೆಂಬುದು ಕುಷಾಣರ ದೊರೆ ಕಾನಿಷ್ಕನ ಆಡಳಿತ ವರ್ಷವೆಂದು ಹೇಳಲಾಗಿದೆ. ಆದರೆ ವಾಸ್ತವವಾಗಿ ಅದು ದಖ್ಖನ್ನಿನ ಪ್ರಸಿದ್ಧ ಅರಸನಾದ ಶಾತವಾಹನ ವಂಶದ ಗೌತಮಿಪುತ್ರಶಾತಕರ್ಣಿಯ ಆಡಳಿತ ವರ್ಷವೆಂದು ಎಂ ಗೋವಿಂದ ಪೈಯವರು ಪ್ರತಿಪಾದಿಸಿದ್ದಾರೆ. ಕರ್ನಾಟಕದ ಬಾದಾಮಿ ಚಾಲುಕ್ಯರೇ ಮೊದಲಾದವರ ಶಾಸನಗಳಲ್ಲಿ ಶಕ ವರ್ಷಗಳ ಉಲ್ಲೇಖಗಳು ಕಂಡು ಬರುತ್ತವೆ. ಇಂದಿಗೂ ಭಾರತದಾದ್ಯಂತ ತಮ್ಮ ಪಾರಂಪರಿಕ ಪಂಚಾಂಗಗಳಲ್ಲಿ ವಿಶೇಶವಾಗಿ ಬಳಕೆಗೊಳ್ಳುತ್ತಿರುವ ಶಕೆ ಎಂದರೆ ಶಾಲಿವಾಹನ ಶಕೆಯೇ ಆಗಿದೆ. ರಾಜ ಮನೆತನಗಳಲ್ಲಿ ಗೂಡಾಚಾರಿಗಳಾಗಿ ಕೆಲಸಮಾಡುತಿದ್ದ ಹೆಳವರು ರಾಜ ಮನೆತನಗಳ ವಂಶಾವಳಿಗಳನ್ನು ಬರೆಯುತ್ತಿದ್ದು ಊರಿಂದ ಊರಿಗೆ ಪ್ರಯಾಣ ಮಾಡುತ್ತಿದ್ದರು. ಮುಂದುವರೆದು ಇದನ್ನೇ ತಮ್ಮ ವೃತ್ತಿಯನ್ನಾಗಿಸಿಕೊಂಡ ಹೆಳವರು ಎಲ್ಲಾ ಸಮುದಾಯಗಳ ವಂಶಾವಳಿಯ ಬಗ್ಗೆ ಬರೆಯಲಾರಂಭಿಸಿದರು. ಅಂತೆಯೇ ಲಾಳಗೊಂಡರ ವಂಶಾವಳಿಯ ಮಾಹಿತಿಯನ್ನೂ ಹೆಳವರು ನಮೂದಿಸಿರುವ ದಾಖಲೆಗಳಿಂದ

ಪಡೆದುಕೊಂಡು ವಿಶ್ಲೇಷಿಸಲಾಗಿದೆ. ಇದರಿಂದಾಗಿ ಲಾಳಗೊಂಡರ ಹಿನ್ನೆಲೆ, ಮೂಲ ತಿಳಿಯಲು ಸಹಾಯಕವಾಗಿದೆ.

ಲಾಳಗೊಂಡ ಕುಟುಂಬಗಳ ಪ್ರತಿ ಮನೆತನಕ್ಕೂ ಅವರ ಅಲೆಮಾರಿತನವನ್ನೂ ಸೂಚಿಸುವ ಊರಿನ ಹೆಸರುಗಳಿವೆ. ಊದಾ:ಮಾಡಗಿರಿಯವರು, ಹಾಗಲೂರಿನವರು, ರಾಚೋಟಿಯವರು, ರಾರಾವಿಯವರು, ಜಂಬೂಗೊಂಡರು(ತೋರಣಗಲ್ಲಿನಲ್ಲಿ), ಮಾಳಗೊಂಡರು(ರಾರಾವಿಯಲ್ಲಿ), ಓಬಣ್ಣನವರ್ ಮುಂತಾದ ಊರಿನ ಹೆಸರುಗಳನ್ನೂ ತಮ್ಮ ಮನೆತನದ ಹೆಸರನ್ನಾಗಿಸಿಕೊಂಡಿರುವ ಪುರಾವೆಗಳನ್ನೂ ನೋಡಬಹುದು. ಇದಕ್ಕೆ ಸಂಬಂಧಿಸಿದ ವಂಶವೃಕ್ಷಗಳ ವಿವರದ ಪಟ್ಟಿಯನ್ನು ಅನುಬಂಧದಲ್ಲಿ ನಮೂದಿಸಲಾಗಿದೆ.

### ೨.೬ ಲಾಳಗೊಂಡರ ಹಿನ್ನೆಲೆ

ಲಾಳಗೊಂಡರ ಚಾರಿತ್ರಿಕ ಹಿನ್ನೆಲೆ ಹೇಳುವುದಾದರೆ ದಕ್ಷಿಣ ಭಾರತದಲ್ಲಿ ಶೇ ೮೦% ರಷ್ಟು ದ್ರಾವಿಡರು ಆರ್ಯರ ಆಕ್ರಮಣದಿಂದ ಚದುರಿ ಬಂದವರು. ತಮಿಳು, ಕನ್ನಡ, ತೆಲುಗು, ಇವು ದ್ರಾವಿಡರ ಮೂಲ ಭಾಷೆ ಮತ್ತು ಮೂಲ ಜನಾಂಗ ಎನ್ನಬಹುದು. ಭಾರತ ಸಿಂಧೂ ನಾಗರಿಕತೆಯ ಮೂಲ ಪ್ರತೀಕ. ಸಿಂಧೂಕೊಳ್ಳದ ನಾಗರಿಕತೆ ಪ್ರಪಂಚದ ಪ್ರಮುಖ ನಾಗರಿಕತೆ. ಸಿಂಧೂಕೊಳ್ಳದ ಸಂಸ್ಕೃತಿಯೇ ಸೈಂದವ(ಗೊಂಡಿ ಭಾಷೆ) ಸಂಸ್ಕೃತಿಯಾಗಿ ಹೆಸರು ಪಡೆಯಿತು. ಅಲ್ಲದೆ ಪಶುಪಾಲನೆ, ಕೃಷಿ, ಬೇಟೆಗಾರಿಕೆ ಇವು ನಾಗರಿಕತೆಯ ಮೂಲ ಕಸುಬುಗಳಾಗಿದ್ದವು. ದ್ರಾವಿಡರು ಗಂಗಾ, ಯಮುನಾ, ಸರಸ್ವತಿ, ಪಂಜಾಬ್, ಸಿಂಧೂ ನದಿ ಬಯಲಿನಲ್ಲಿ ಹರಡಿರುವುದಕ್ಕೆ ಸಿಂಧೂಕೊಳ್ಳದ ಸಂಸ್ಕೃತಿ ಹರಪ್ಪ, ಮಹೆಂಜದಾರೋದ ಹಲವಾರು ಪಳೆಯುಳಿಕೆಗಳೆ ಸಾಕ್ಷಿಯಾಗಿರುವವು. ಆರ್ಯರ ಆಕ್ರಮಣದ ನಂತರ ಬಹು ದೊಡ್ಡ ಸಾಮ್ರಾಜ್ಯಗಳು, ನಾಗರಿಕತೆಗಳು ಚಿಕ್ಕಚಿಕ್ಕ ಜನಪದ ಮಹಾ ಜನಪದಗಳಾಗಿ ಬೇರ್ಪಟ್ಟವು. "ಆರ್ಯರ ಆಗಮನದ ಮೊದಲು ದಕ್ಷಿಣಭಾರತದಲ್ಲಿ ಯಾವ ಜನಾಂಗವು ಇರಲಿಲ್ಲವೆಂದರ್ಥವಲ್ಲ. 'ದ್ರಾವಿಡರು' ಎಂದು ಸ್ಥೂಲ ಹೆಸರಿನಿಂದ ಹೇಳುವ ಜನಾಂಗ ದೊಡ್ಡ ಶಾಖೆ ಇದು. ಗಂಗಾ–ಕಾವೇರಿಗಳ ನಡುವಿನ ನಾಡಿನಲ್ಲಿರುವ ಆರ್ಯ–ಪೂರ್ವ ಸಮುದಾಯವೆಂದು ಹಲವರ ಅಭಿಪ್ರಾಯ ಎಂದು ಕೆ ಎಂ ಮೇತ್ರಿಯವರು ತಿಳಿಸಿದ್ದಾರೆ"(ಮೇತ್ರಿ ಕೆ ಎಂ, ೧೯೯೪, ೧೪೩).

"ಪುಷ್ಪಗಿರಿ ಕಾಳಾಮುಖರ ೧೨೨೭ ಪ್ರಸಿದ್ಧ ಕೇಂದ್ರ, ಶೈವರಲ್ಲಿಯ ಲಾಕುಳ ಮತ್ತು ಪಾಶುಪತರಿಗೆ 'ಕಾಳಾಮುಖ'ರೆಂದು ಹೆಸರು. ಮುಖದ ಮೇಲೆ ಕಪ್ಪುಗೆರೆ ಬರೆದುಕೊಳ್ಳುತ್ತಿದ್ದರಿಂದ ಇವರನ್ನು 'ಕಾಳಾಮುಖ'ರು 'ಅಸಿತವಕ್ತ್ರ'ರು ಎಂದು ಕರೆದಿದ್ದಾರೆ. ಶ್ರೀ ರೇವಣಸಿದ್ಧರು ಮತ್ತು ಶ್ರೀ

ಗುರುಸಿದ್ಧರಾಮೇಶ್ವರರು ಕಾಳಾಮುಖದ ಲಾಕುಳ ಶೈವಗುರುಗಳು. ಸಂಸ್ಕೃತದಲ್ಲಿ ಲಾಕುಳ ಕನ್ನಡದಲ್ಲಿ ದೊಣ್ಣೆ, ಲಕಡಿ, ಲಕುಡ ಎಂದು ಕರೆಯುತ್ತಾರೆ. ಸಿದ್ಧರಾಮರನ್ನು ದೊಣ್ಣೆ ಸಿದ್ಧರಾಮರೆಂದು ಕರೆದಿದ್ದಾರೆ. ಇವರ ಶಿಷ್ಯ ಪರಂಪರೆಯಿಂದ ಪುಷ್ಪಗಿರಿ ಮತ್ತು ಶ್ರೀ ಮಲ್ಲಿಕಾರ್ಜುನ ದೇವಾಲಯಗಳು ಪ್ರಾರಂಭವಾದವು ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯದ ವ್ಯವಹಾರವನ್ನು ಲಾಕುಳಶೈವರು ನಡೆಸುತ್ತಿದ್ದರೆಂಬುದಕ್ಕೆ ಸಾಕ್ಷಿಯಾಗಿದೆ"(ಶಾಂತವೀರಯ್ಯ ಹೀ ಚಿ, ೨೦೦೬, ೮೪-೮೫).

ಪಾಶುಪತರು "ಪಾಶ ಬಂಧಿತನೇ ಪಶು", "ಪಾಶಮುಕ್ತನೇ ಪಶುಪತಿ", ಆದ್ದರಿಂದಲೇ ಆ ಪರಶಿವನ್ನು ಪಶುಪತಿಯೆಂದು ಕರೆಯಲಾಗಿದೆ. "ಅಜ್ಞಾನದಿಂದ ಸುಜ್ಞಾನದತ್ತ ಸಾಗುವ ಪಥವೇ ಪಾಶಾಪತ". ಈ ಭವಬಂಧನದಿಂದ ಮುಕ್ತರಾಗುವ ಶೈವತತ್ತ್ವಾನುಯಾಯಿಗಳಾದ ಇವರು ಅನುಭವ ಸಿದ್ಧಾಂತಿಗಳು. "ಶೈವ" ಎಂದರೆ ಸೇರಿಕೊಳ್ಳುವುದು ಕೂಡಿಕೊಳ್ಳುವುದು ಎಂದಾಗಿದೆ. ಇದಕ್ಕೆ "ವೀರ" ಎಂಬ ವಿಶೇಷಣವು ಸೇರಿ "ವೀರಶೈವ ಎಂಬ ಶಬ್ದೋತ್ಪತ್ತಿಗೆ ಕಾರಣವಾಗಿದೆ. ವೀರಶೈವನೆಂದರೆ-ತನ್ನಲ್ಲಿ ತಾನು ಐಕ್ಯಗೊಳ್ಳುವ ಮೂಲ ಉದ್ದೇಶವುಳ್ಳವನೇ ವೀರಶೈವ(ಶ್ರೀ ಸದಾಶಿವಯೋಗಿ, ೨೦೦೬, ೯೯).

ಶೈವ ಧರ್ಮವು ಅತ್ಯಂತ ಪ್ರಾಚೀನವಾದ ಐದು ಸಹಸ್ರ ವರ್ಷಗಳ ಹಿಂದೆಯೇ ಸಿಂಧೂ ನದಿತೀರದ ನಾಗರಿಕತೆಯಲ್ಲಿತ್ತು. ಅಸೇತು ಹಿಮಾಚಲದವರೆಗೂ ಆಚರಣೆಯಲ್ಲಿತ್ತು. ಪ್ರಪಂಚದ ಮತಗಳಲ್ಲೆಲ್ಲ ಶೈವ ಮತವೇ ಅತ್ಯಂತ ಪ್ರಾಚೀನವಾದದ್ದು. ಮಧ್ಯಏಷ್ಯಾ, ಜಾವ, ಕಾಂಬೋಡಿಯಾ ಮುಂತಾದ ದೇಶಗಳಲ್ಲಿಯೂ ಶೈವ ದೇವಾಲಯಗಳಿದ್ದು ಭೌಗೋಳಿಕವಾಗಿಯೂ ವಿಶಾಲತೆಯನ್ನು ಸೂಚಿಸುತ್ತವೆ. ಎಂದು ಸರ್ ಜಾನ್ ಮಾರ್ಷಲ್, "ಮೊಹೆಂಜದಾರೋ ಅಂಡ್ ದ ಇಂಡಸ್ ಸಿವಿಲೈಜೇಷನ್" ಎಂಬ ಕೃತಿಯ ಮುನ್ನುಡಿಯಲ್ಲಿ ತಿಳಿಸಿದ್ದಾರೆ.

ಯೋಗರೂಢನಾದ ಶಿವನ ಪ್ರತಿಮೆಯಿಂದ ಶಿವಯೋಗದ ಕಲ್ಪನೆ ಆ ಕಾಲದಲ್ಲೇ ಇತ್ತು ಶಿವೋಪಾಸನೆಯ ಇತಿಹಾಸ ವೇದಗಳಿಗಿಂತಲೂ ಹಿಂದೆ ಹೋಗುತ್ತದೆ(ಕ್ರಿ ಪೂ ೩೨೫೦-೨೭೫೦). ಹರಪ್ಪ ಮಹೆಂಜದಾರೋ ಸೈಂದವ ಸಂಸ್ಕೃತಿಯಲ್ಲಿ ಕೊಂಬುಗಳಿರುವ ದೇವತೆಗೆ ಮೂರು ಮುಖಗಳಿವೆ. ಆತನು ಯೋಗಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ(ಬಸವರಾಜ ಕೆ ಆರ್, ೨೦೦೯, ೧).

"ಲಕುಳೀಶರ ಮುಖ್ಯವಾದ ಚಿಹ್ನೆ 'ಲಕುಳ'ವೆಂಬ ಯೋಗದಂಡ. ಲಕುಳಿಸ(ಲಕುಳೀಶ) ಒಬ್ಬ ಅವತಾರ ಪುರುಷ ಆತನು ಶೈವ ಪ್ರಪಂಚದಲ್ಲಿ ಪರಮ ಪೂಜ್ಯನಾಗಿರುವ ವಿಷಯ ಗ್ರಂಥಗಳಲ್ಲಿ ತಿಳಿದುಬರುತ್ತದೆ. ಪಾಶುಪತ ಸೂತ್ರಗಳನ್ನು ಸ್ವಯಂ ಲಕುಳೀಶನೆ ಭೋಧಿಸಿದನೆಂದು ಇತಿಹಾಸವಿದೆ ಎಂದು ತಿರುವಾಂಕೂರಿನ ವಿಶ್ವವಿದ್ಯಾಲಯ 'ಪಾಶುಪತ ಸೂತ್ರಂ'ನಲ್ಲಿ (ಪುಟ ೧೩) ತಿಳಿಸಿದೆ. ಕ್ರಿ ಶ

೨ನೇ ಶತಮಾನದಿಂದ ೫ನೇ ಶತಮಾನದವರೆಗೆ ಭಾರತದಲ್ಲಿ ಆಳುತ್ತಿದ್ದ ಗುಪ್ತರು, ಕರ್ನಾಟಕದಲ್ಲಿ ರಾಷ್ಟ್ರಕೂಟರು, ಚಾಲುಕ್ಯರು, ಶಾತವಾಹನರು, ಪಲ್ಲವರು ಮತ್ತು ಕದಂಬರು ಶೈವ ಮತಾವಲಂಬಿಗಳಾಗಿದ್ದರು. ಇದಕ್ಕೆ ಸಾಕ್ಷಿ ಅವರು ನಿರ್ಮಿಸಿದ ಶೈವ ದೇವಾಲಯಗಳು. ಪಾಶುಪತ ಶಾಖೆಯಲ್ಲಿ ಲಕುಳೀಶನಿಂದ ಸ್ಥಾಪಿತವಾದದ್ದೆ ಲಾಕುಳಶೈವ. ಇದು ತನ್ನದೇ ಆದ ತತ್ವವಿಚಾರವನ್ನೊಳಗೊಂಡಿದೆ. ಲಕುಳೀಶ ೨೮ ಯೋಗಾಚಾರ್ಯರಲ್ಲಿ ಒಬ್ಬನೆಂದು ಹೇಳಲಾಗುತ್ತದೆ"(ಬಸವರಾಜು ಕೆ ಆರ್, ೨೦೦೯, ೪).

೬ನೇ ಶತಮಾನದಿಂದ ೧೫ನೇ ಶತಮಾನದವರೆಗೂ ಈ ಲಾಕುಳ ಶೈವರ ಬಗ್ಗೆ ತಿಳಿಸುವ ಅನೇಕ ಶಾಸನಗಳು ದೊರಕಿವೆ. ಮಹಾಕೂಟದಲ್ಲಿ ಲಕುಳೀಶನ ಹೆಸರಿನ ದೇವಾಲಯವಿದೆ. ಎಲ್ಲೋರದಲ್ಲಿ ಅತ್ಯಂತ ಸುಂದರವಾದ ಲಕುಳೀಶನ ವಿಗ್ರಹವಿದೆ. ಅದು ಅತ್ಯಂತ ಪ್ರಾಚೀನ ವಿಗ್ರಹ. ಪ್ರಭಾವಶಾಲಿಗಳಾಗಿದ್ದ ಲಾಕುಳಶೈವರು ರಾಜಪೂಜಿತರಾಗಿದ್ದರು. ಚಾಲುಕ್ಯ ಚಕ್ರವರ್ತಿ(೬ನೇ ವಿಕ್ರಮಾಧಿತ್ಯ) ಪೆರ್ಮಾಡಿರಾಯರಿಗೆ ಇಂದ್ರ ಶಿವಾಚಾರ್ಯರು ರಾಜಗುರುಗಳಾಗಿದ್ದರು(ಕಲಬುರ್ಗಿ ಎಂ ಎಂ, ೧೯೪). ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವವು ಪಾಶುಪತ ಪ್ರಭೇದವೆಂದು ಹೇಳಿದೆ ಪಾಶುಪತ ಧರ್ಮವು ಶೈವಧರ್ಮಕ್ಕೆ ಮತ್ತೊಂದು ಹೆಸರು ಎಂದು ಎಂ ಚಿದಾನಂದ ಮೂರ್ತಿಯವರು ಕರ್ನಾಟಕ ಶಾಸನ ಸಂಪುಟ ಅಧ್ಯಯನದಲ್ಲಿ (ಅದೇ, ೧೨೭) ತಿಳಿಸಿದ್ದಾರೆ.

ಲಾಕುಳ ಶೈವ ಪಾಶುಪತರನ್ನು ೧೨ ನೇ ಶತಮಾನದ ಹಿಂದೆಯೇ ಲಿಂಗಿಗಳೆಂದು ಶಾಸನಗಳಲ್ಲಿ ಕರೆದರೆನ್ನಲಾಗಿದೆ. ಲಕುಳೀಶ ಪಾಶುಪತ ಧರ್ಮ ಪ್ರಾಚೀನ ಕರ್ನಾಟಕವನ್ನು ದಟ್ಟವಾಗಿ ವ್ಯಾಪಿಸಿ ದೇವಾಲಯ ನಿರ್ಮಾಣ, ಸ್ಥಾಪನೆ, ಧಾರ್ಮಿಕ ಸಾಮಾಜಿಕ ಚಟುವಟಿಕೆ ಇತ್ಯಾದಿಗಳ ಮೂಲಕ ಪ್ರಜೆಗಳಿಂದ ಹಿಡಿದು ಪ್ರಭುಗಳವರೆಗೂ ಎಲ್ಲಾ ಸ್ತರದ ಜನರ ಮೇಲೆ ಆಳವಾದ ಪ್ರಭಾವ ಬೀರಿತ್ತು. ೧೨ನೇ ಶತಮಾನದಿಂದ ಇಂದಿನವರೆಗೂ ಬಹು ದೊಡ್ಡ ಜನಾಂಗವಾಗಿ ಬೆಳೆದಿರುವ ವೀರಶೈವದ ಉಲ್ಲೇಖ ಯಾವುದೇ ಶಾಸನದಲ್ಲಿ ಕಂಡು ಬರುವುದಿಲ್ಲ. ನಕುಲೀಶ ಪಾಶುಪತದ ಉಲ್ಲೇಖ ಮಾತ್ರ ಕರ್ನಾಟಕದುದ್ದಗಲಕ್ಕೂ ವಿಫುಲ ಸಂಖ್ಯೆಯಲ್ಲಿ ಕಂಡುಬರುತ್ತವೆ (ಕಲಬುರ್ಗಿ ಎಂ ಎಂ, ೧೯೩). ೧೨ನೇ ಶತಮಾನದಲ್ಲಿ ಕಾಣಿಸಿಕೊಂಡ ನಮ್ಮ ನಾಡಿನ ವೀರಶೈವ ಲಕುಳೀಶ ಪಾಶುಪತದ ಪರಿಷ್ಕೃತ ರೂಪವೆಂದಿದ್ದಾರೆ.

**೨.೭ ಲಾಂಜಿಗಢ**

ಲಾಳ(ಲಾಂಜಿ)ಕೋಟ್–ಲಾಳಗೊಂಡರ–ಮೂಲ ಕೋಟೆಯಾಗಿದ್ದು, ಅವರ ಗೋತ್ರಪ್ರಾಣಿ ಆಮೆಯಾಗಿದೆ. ಗೋತ್ರ ವೃಕ್ಷ 'ಟೀ ಕಾಮ್ ಎಂದರೆ TEAKM–ತೇಗ–ಆಗಿದೆ, ಅವರ ವಂಶ

'ನಾಗ'ವಂಶವಾಗಿದೆ ಇವೇ ಚಿಹ್ನೆಗಳು ಹಂಪಿ ವಿರೂಪಾಕ್ಷ ದೇವಾಲಯದ ಬಲಭಾಗದಲ್ಲಿ ಗೋಪುರದ ನೆರಳು ತಿರುಗಿ-ಮುರಿಗಿ ಬೀಳುವ ಜಾಗದಲ್ಲಿ ಗೊಡೆಯಲ್ಲಿ ಕಾಣಬರುತ್ತಿವೆ. ಗೊಂಡ್ವಾನ್ ಗಢದರ್ಶನ(ಹಿಂದಿ) ಎಂ ಸಿ ಕಂಗಾಲಿ, ಪುಟ, ೩೮-೪೨, ಗೊಂಡ್ವಾನಪ್ರಿಂಟರ್ಸ-ತುಕುಡೋಜಿ, ನಾಗಪುರ(೧೯೯೦). ಮಧ್ಯಪ್ರದೇಶದ ಬಾಲಘಾಟ ಜಿಲ್ಲೆಯ ಸಾತ್ಪುಡಪರ್ವತ ಶ್ರೇಣಿಯ ಮಡಿಲಲ್ಲಿ ಇರುವ ಗೊಂಡರ ಧಾರ್ಮಿಕ ಮತ್ತು ಐತಿಹಾಸಿಕ ಸ್ಥಳ(ಕೋಟೆ) ಲಾಂಜಿಗಢ. ಇದು ಬಾಲಗಾಟ್ ಗೊಂಡಿಯಾ ಮಾರ್ಗದ ರಾಜೀಗಾಂವ್ ಗ್ರಾಮದ ಪೂರ್ವಕ್ಕೆ ೩೦ ಕಿ ಮಿ ದೂರದಲ್ಲಿದೆ. ಗೊಂಡಿ ಧರ್ಮದರ್ಶನದಲ್ಲಿ ಲಾಂಜಿಗಢಕ್ಕೆ ಒಂದು ವಿಶೇಷ ಮಹತ್ವವಿದೆ. ಪ್ರಾಚೀನ ಕಾಲದಲ್ಲಿ ಗೊಂಡಿ ಧರ್ಮಗುರು 'ಪಾರಿಕುಪಾರಲಿಂಗೋ' ಮಾತಾ ಕಲಿ-ಕಂಕಾಲಿಯ ೩೩ ಮಕ್ಕಳನ್ನು ಕಚಾರಗಢ ಪರ್ವತದ ಕೊಯಲಿ ಕಚಡಾ ಗುಹೆಗಳಿಂದ ಬಿಡುಗಡೆಗೊಳಿಸಿ ತನ್ನ ಅನುಯಾಯಿಗಳನ್ನಾಗಿಸಿಕೊಂಡು, ಅವರಿಗೆ ಗೊಂಡಿ ಧರ್ಮದ ಶಿಷ್ಯದೀಕ್ಷೆ ಕೊಟ್ಟು ಸಾಮಾಜಿಕ ಘಟಕಗಳಲ್ಲಿ ವಿಭಜನೆಮಾಡಿ ಇವರುಗಳ ಮುಖಾಂತರಗೊಂಡ ಸಮಾಜದ ವ್ಯವಸ್ಥೆ ಮಾಡಲಾಯಿತು.

### ೨.೮ ಲಾಳಗೊಂಡರ ಚಲನಶೀಲತೆ

ಭಾರತ ದೇಶದ ಜನರು ದ್ರಾವಿಡ ಮೂಲಿಗರು ಎನ್ನಬಹುದು ನಂತರ ಆರ್ಯರ ಆಕ್ರಮಣದಲ್ಲಿ ಹಲವರು ಅವರ ಪ್ರಭಾವಕ್ಕೆ ಒಳಗಾಗಿ ಅಥವಾ ಒತ್ತಾಯಕ್ಕೂ ಮಣಿದು ಮತಾಂತರಗೊಂಡರು. ಭಾರತ ಮೂಲತ: ಬುಡಕಟ್ಟು/ಆದಿವಾಸಿ ಸಂಸ್ಕೃತಿಯಿಂದ ಬಂದ ಜನರೇ ಹೆಚ್ಚು. ದ್ರಾವಿಡ ಮೂಲ ಸಮುದಾಯ ಗೊಂಡರು ಆರ್ಯರ ಮೊದಲೇ ಮಧ್ಯಏಷ್ಯಾದಿಂದ ಸಿಂಧೂ ನದಿಬಯಲು ಮಹೆಂಜೊದಾರೂ ಹರಪ್ಪಗಳಲ್ಲಿ ನೆಲಸಿ ಪಶುಪಾಲನೆಯೊಂದಿಗೆ ಕೋಸಲ ಅಥವಾ ಗೊಂಡಾರಣ್ಯದ ವಿಂಧ್ಯ, ಸಾತ್ಪುರ, ಗೊಂಡ್ವಾನಾ, ಗಂಗಾ, ನರ್ಮದಾ, ಗೋದಾವರಿ, ಕೃಷ್ಣ, ಕಾವೇರಿ, ನದಿಬಯಲುಗಳಲ್ಲಿ ವಾಸಿಸಲಾರಂಬಿಸಿ, ಕಂನಾಡು ರಾಜ್ಯದಿಂದ ಪುನ: ಆಂಧ್ರಪ್ರದೇಶ ಮಧ್ಯಪ್ರದೇಶಕ್ಕೆ ಗೊಂಡರ ವಲಸೆ(ಚಲನೆ) ಆಗಿರುವಂತೆ ಅವರ ಭಾಷೆಯಿಂದ ಅರಿವಾಗುವುದು.

### ೨.೯ ಲಾಳಗೊಂಡರ ಪ್ರಭೇದಗಳು

ಲಾಳಗೊಂಡರಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳನ್ನು ಕಾಣುತ್ತೇವೆ. ಒಂದು ಹಿರೇಲಾಳಗೊಂಡರು, ಮತ್ತೋಂದು ಚಿಕ್ಕಲಾಳಗೊಂಡರು. ಈ ಪ್ರಭೇದಗಳನ್ನು ಗುರುತಿಸುವುದು ಕಷ್ಟಸಾಧ್ಯವಾದರೂ ಕೂಡ ಅವರ ಒಂದು ಆಚರಣೆಯಿಂದ ಮಾತ್ರ ಅವರನ್ನು ಗುರುತಿಸಬಹುದು. ಕಾರಣ ಇವರು ಆಚರಿಸುವ ಎಲ್ಲಾ ಆಚರಣೆಗಳು ಒಂದೇ ತೆರನಾಗಿವೆ. ಚಿಕ್ಕಲಾಳಗೊಂಡರಲ್ಲಿ ವಿಧವಾವಿವಾಹ ಜಾರಿಯಲ್ಲಿದ್ದು ಹಿರೇಲಾಳಗೊಂಡರಲ್ಲಿ ಇದು ನಿಷಿದ್ಧ. ಹಾಗಾಗಿ ಈ ಒಂದು

ಕಾರಣದಿಂದಾಗಿ ಮಾತ್ರ ಇವರನ್ನು ಗುರುತಿಸಬಹುದು. ಪ್ರಸ್ತುತ ದಿನಮಾನಗಳಲ್ಲಿ ಈ ಪದ್ಧತಿಯು ಸಹ ನಿಧಾನಗತಿಯಲ್ಲಿ ಕಣ್ಮರೆಯಾಗುತ್ತಿದೆ.

**೨.೧೦ ಭಾರತದಲ್ಲಿ ಲಾಳಗೊಂಡರು**

| ಕ್ರ.ಸಂ | ರಾಜ್ಯ | ಲಾಳಗೊಂಡರ ಹೆಸರು |
|---|---|---|
| ೧. | ಆಂಧ್ರಪ್ರದೇಶ | ಲಾಳಜಂಗಮ, ಲಾಳಒಡ್ಡೆ, ಲಾಳಗೊಂಡೆ, ಲಾಳಗೊಂಡ ಬಣಜಿ, ಲಾಳಗೊಂಡಗೊಲ್ಲ, ಲಾಳಗೊಂಡ ಯಾಪಲಿಂಗಧಾರಿ. |
| ೨. | ಕರ್ನಾಟಕ | ಲಾಳಗೊಂಡ, ದಾವಣಿಗರು, ಕುಡು ಒಕ್ಕಲಿಗರು, ನೊಣಬ, ನಾಳಿಗೊಂಡ,ವೀರಶೈವರು, ನಾಳಗೊಂಡ, ಲಾಲಿಗೊಂಡ, ಲಾಳಿಗೊಂಡ, ಲಾಲಿಗೊಂಡ, ಲಾಳಗೊಂಡ ಕಾಪು |
| ೩. | ತಮಿಳುನಾಡು | ಲಾಳ, ಲಾಳ ಬ್ರಹ್ಮ, ಲಾಳ ಕಾಯಸ್ಥ, ಲಾಳ ಮರಾಠ, |

**ಲಾಳಗೊಂಡರ ಜನಸಂಖ್ಯೆ**

ಬ್ರಿಟೀಷ್ ಸರ್ಕಾರ ಭಾರತೀಯರ ಜಾತಿ, ಭಾಷೆ, ಪಂಗಡಗಳನ್ನು ತಿಳಿಯಲು ಪ್ರಥಮ ಬಾರಿಗೆ ೧೮೮೧, ರಲ್ಲಿ ಜನಗಣತಿಯನ್ನು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೂ ಪ್ರತಿ ೧೦, ವರ್ಷಗಳಿಗೊಮ್ಮೆ ಜನಗಣತಿ ಅಂಕಿ-ಅಂಶಗಳ ಸಂಗ್ರಹಣ ಕಾರ್ಯ ಮುಂದುವರೆದುಕೊಂಡು ಬಂದಿದೆ. ಆದ್ದರಿಂದ ದೇಶದ ಜಾತಿ, ಭಾಷೆ ಮತ್ತು ಸಂಸ್ಕೃತಿಯ ಸ್ಥೂಲ ಪರಿಚಯ ಕಂಡು ಬರುತ್ತಿದೆ. ಲಾಳಗೊಂಡರು ತಮಿಳುನಾಡು ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ಹರಡಿಕೊಂಡಿದ್ದಾರೆ. ೧೮೮೧ನೇ ಜನಗಣತಿಯ ವರದಿಯ ಪ್ರಕಾರ ಮದ್ರಾಸ್ ರಾಜ್ಯದ ಚಿಂಗಾಲ ಪಟ್, ಉತ್ತರ ಆರ್ಕಾಟ್, ಕೋಯ್‌ಮತ್ತೂರು ಮತ್ತು ಮದ್ರಾಸ್ ಜಿಲ್ಲೆಗಳಲ್ಲಿ ತಮಿಳು ಜಾತಿಯ ಲಾಲಾ ಎಂಬೀ ಹೆಸರಿನ ೪೮೯ ಜನ ದಾಖಲಾದರೆ, ತೆಲುಗು ಜಾತಿಗಳೆಂದು ಗೋದಾವರಿ, ಕರ್ನೂಲು, ಬಳ್ಳಾರಿ ಜಿಲ್ಲೆಗಳಲ್ಲಿ ಲಾಲಿಗೊಂಡ (Laligonda) ೧೯೮೮, ಗಂಜಾಮ ಕರ್ನೂಲು, ಬಳ್ಳಾರಿ ಜಿಲ್ಲೆಗಳಲ್ಲಿ ಲಾಲಿಗೊಂಡ ಬಲಿಜ (Laligonda balija) ೯೩, ಬಳ್ಳಾರಿ ಜಿಲ್ಲೆಯಲ್ಲಿ ಲಾಲಿಗೊಂಡ ಗೊಲ್ಲ(Laligondagolla)೯, ಲಾಲಿಗೊಂಡ ಕಾಪು(Laligondakapu)೨೬೯, ಮತ್ತು ಲಾಲಿಗೊಂಡ ಯಾಪಾಲಿಂಗದಾರಿ(Laligond yapalingadari)೧, ಜನ ದಾಖಲಾಗಿದ್ದಾರೆ. ಪ್ರಸ್ತುತ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೫೦ ಸಾವಿರಕ್ಕೂ ಹೆಚ್ಚು ಲಾಳಗೊಂಡರು ೩೦೦ ಗ್ರಾಮಗಳಲ್ಲಿ ಹಾಗೂ ಹಲವಾರು ನಗರ ಪ್ರದೇಶಗಳಲ್ಲಿ ನೆಲೆಸಿರುತ್ತಾರೆ.

ಎಂ ಆರ್ ಪಂಪನಗೌಡ ಇವರು ವೀರಶೈವ-ಲಿಂಗಾಯತ ಎಂದು ಹೇಳುವ ದಾಖಲೆಗಳ ಕುರಿತು ಸ್ಪಷ್ಟೀಕರಣ ಮಾಡಿದ್ದಾರೆ. ೧೮೮೧ ರಿಂದ ೧೯೦೧ ರ ವರೆಗೆ ಇಂಪೀರಿಯಲ್ ಸೆನ್ಸಸ್ ಅಡಿಯಲ್ಲಿ ತಮಿಳು ದೇಶದ ಜಾತಿವಾರು ಕ್ರಮ-ಸಂಖ್ಯೆ ೩೦೨೯-೩೧೯೬(೬೪ ಜಾತಿಗಳು)

ಲಿಂಗಾಯತದ ಉಪಜಾತಿಗಳು ಎಂದು ಗುರುತಿಸಲ್ಪಟ್ಟು ಕ್ರ ಸ ೩೦೭೩ ಹಾಗೂ ೩೮೪ ರಲ್ಲಿ ಕೇವಲ ಎರಡು ಜಾತಿಗಳನ್ನು ಲಿಂಗಾಯತ, ವೀರಶೈವರೆಂದು ಗುರುತಿಸಿದ್ದಾರೆ. ಅದೇ ರೀತಿ ತೆಲುಗು ದೇಶದ ಜಾತಿಗಳಲ್ಲಿ ಕ್ರ ಸ ೪೦೪೬-೪೦೬ ರ ವರೆಗೆ ಕ್ರ ಸ ೪೦೫೬, ೪೦೬೧ ರ ಜಾತಿಗಳನ್ನು ಲಿಂಗಾಯತ-ಜಂಗಮವೆಂದು ಗುರುತಿಸಿದ್ದಾರೆ. ಒಟ್ಟು ೨೭ ತೆಲುಗು ಲಿಂಗಾಯತ ಜಾತಿಗಳಲ್ಲಿ ಕೇವಲ ಎರಡು ಜಾತಿಗಳನ್ನು ಲಿಂಗಾಯತ- ಜಂಗಮವೆಂದು ಗುರುತಿಸಿದ್ದಾರೆ. ಅದೇ ರೀತಿ ಕನ್ನಡ ದೇಶದ ಲಿಂಗಾಯತ ಜಾತಿಗಳಲ್ಲಿ ೩೮ ಜಾತಿಗಳನ್ನು ಗುರುತಿಸಿ ಅದರಲ್ಲಿ ೩೮ ನೇ ಜಾತಿಯನ್ನು ವೀರಶೈವ ಎಂದು ಗುರುತಿಸಿದ್ದಾರೆ. ಅಂದರೆ ತಮಿಳು ೬೪ ಜಾತಿಗಳು, ತೆಲುಗು ೨೭ ಜಾತಿಗಳು ಹಾಗು ಕನ್ನಡ ದೇಶದ ೩೮ ಜಾತಿಗಳು ಹಾಗು ಮಲೆಯಾಳಿ ದೇಶದ ೫ ಲಿಂಗಾಯತ ಜಾತಿಗಳ ಪೈಕಿ ಕೇವಲ ೩ ಜಾತಿಗಳಿಗೆ ಲಿಂಗಾಯತ ವೀರಶೈವವೆಂದು ೨ಕ್ಕೆ ಲಿಂಗಾಯತ-ಜಂಗಮವೆಂದು ಗುರುತಿಸಿದ್ದಾರೆ. ಅಂದರೆ ಮುಖ್ಯ ಧರ್ಮ ಎಂದು ಕರೆದು ಅದರಲ್ಲಿ ವೀರಶೈವರು ಹಾಗೂ ಜಂಗಮರನ್ನು ಒಂದು ಜಾತಿಯಾಗಿ ಗುರುತಿಸಿದ್ದಾರೆಯೆ ಹೊರತು ವೀರಶೈವರಲ್ಲಿ ಲಿಂಗಾಯತರನ್ನು ಸೇರಿಸಿಲ್ಲ(ಮಿತ್ ಸೊಸೈಟಿ, ೩೮).

ಭಾರತವು ಬಹು ದೊಡ್ಡ ಜನಸಂಖ್ಯೆ ಹೊಂದಿದ ಪ್ರಜಾಪ್ರಭುತ್ವ ರಾಷ್ಟ್ರ, ಈ ವಿಶಿಷ್ಟವಾದ ಜೀವ ವಿಧಾನಗಳು ಜನಗಣತಿ ವರದಿಗಳಿಂದ ಗೊತ್ತಾದವು. ಜನಗಣತಿಯ ವರದಿಗಳು ಸಮುದಾಯಗಳನ್ನು ಅರಿಯಲು ಚಿಂತಕರಿಗೆ, ಸಂಶೋಧಕರಿಗೆ, ಸರಕಾರಗಳಿಗೆ ಸಹಕಾರಿಯಾದವು. ಸ್ವತಂತ್ರ ಭಾರತದ ಸರಕಾರಕ್ಕೆ ವಿಭಿನ್ನ ಜನಾಂಗಗಳ ಸಂಸ್ಕೃತಿ, ಆಚಾರ, ವಿಚಾರ ಅವರ ಜೀವನ ಮಟ್ಟವನ್ನು ಅರಿಯಲು ಹಾಗು ಸಹಸ್ರಾರು ವರ್ಷಗಳಿಂದ ಶೋಷಣೆಗೆ ಒಳಗಾದವರನ್ನು, ಸಮಾಜದಿಂದ ಕಡೆಗಣಿಸಲ್ಪಟ್ಟವರನ್ನು ಮೇಲೆತ್ತಲು ಅವರನ್ನು ಗುರುತಿಸಿ ಪಟ್ಟಿಯನ್ನು ತಯಾರಿಸಲು ಜನಗಣತಿಯ ದಾಖಲಾತಿಗಳನ್ನು ಬಳಸಲಾಯಿತು.

ಸ್ವಾತಂತ್ರಕ್ಕೂ ಪೂರ್ವದಲ್ಲಿ ಬ್ರಿಟೀಷರು ಭಾರತವನ್ನು ಅರಿಯಲು ತುಂಬಾ ಕ್ಲಿಷ್ಟಕರವಾಗಿದ್ದರಿಂದ ಅವರು ಜನಗಣತಿಯನ್ನು ಮಾಡಲು ನಿರ್ದರಿಸಿದರು. ಈ ಪ್ರಕಾರ ಲೀವೀಸ್ ಮ್ಯಾಕವೇರ್ ಬ್ಯಾರಿಸ್ಟರ್(Lewis Mc Iver Barrister) ಇವರು ಮದ್ರಾಸ್ ಸರ್ಕಾರದ ಅಡಿಯಲ್ಲಿ ಇಂಪ್ಯಾರಿಯಲ್ ಸೆನ್ಸಸ್ ವರದಿ ಪ್ರಕಟಗೊಂಡಿತ್ತು, ಈ ಪ್ರಕಾರ ಹೈದ್ರಬಾದ್ ಭಾಗದಲ್ಲಿ ಬಳ್ಳಾರಿಯು ಸಹ ಸೇರಿತ್ತು. ಆ ಯಾದಿಯ ಪ್ರಕಾರ ಆಗ ತಮಿಳು ಜಾತಿಯ ಜಾತಿವಾರು ಕ್ರಮಸಂಖ್ಯೆ ಅನುಸಾರವಾಗಿ(ಪು.೧೦೬). ೩೦೧೫ ರಲ್ಲಿ ನೀಲಗಿರಿ ಜಿಲ್ಲೆಯಲ್ಲಿ ಲಾಲ ಚಿಂಗಾಲ್ ಪೇಟೆ ಎಂತಲು, ೩೦೧೬ ಮದ್ರಾಸ್‌ನಲ್ಲಿ ಲಾಲ ಬ್ರಹ್ಮ ಎಂದು, ೩೦೧೭ ರಲ್ಲಿ ಚಿಂಗಾಲ್ ಪೇಟೆಯಲ್ಲಿ ಲಾಲ-ಕಾಯಸ್ಥ ಎಂತಲು, ೩೦೧೮ ರಲ್ಲಿ ಮದ್ರಾಸ್ ನಲ್ಲಿ ಲಾಲ-ಮರಾಠ ಎಂತಲು ಕರೆಯಲಾಗಿದೆ. ಅದೇ ರೀತಿ ತೆಲುಗು ದೇಶದ ಜಾತಿವಾರು ಕ್ರಮದಲ್ಲಿ ಅನುಸಾರವಾಗಿ ೪೦೧೦ ರಲ್ಲಿ ಲಾಲ-ಜಂಗಮ, ಲಾಲ ಕೃಷ್ಣ ಎಂತಲು, ೪೦೧೧ ಬಳ್ಳಾರಿ ಜಿಲ್ಲೆಯಲ್ಲಿ ಲಾಲಬಡ್ಡೆ

ಎಂದು, ೪೨೧೨ ರಲ್ಲಿ ಬಳ್ಳಾರಿಯ ಗೋದಾವರಿ, ಕರ್ನೂಲ್ ನಲ್ಲಿ ಲಾಲಗೊಂಡ ಎಂದು, ೪೦೧೩ ರಲ್ಲಿ ಲಾಲಗೊಂಡ ಬಲಜಿ ಎಂದು ಅದೇ ರೀತಿ ೪೦೧೪ ಕ್ರಮಸಂಖ್ಯೆಯಲ್ಲಿ ಬಳ್ಳಾರಿಯಲ್ಲಿ ಲಾಲಗೊಂಡ–ಗೊಲ್ಲ ಎಂದು ಮತ್ತು ಕ್ರಮ ಸಂಖ್ಯೆ ೪೨೧೬ ರಲ್ಲಿ ಲಾಲ ಗೊಂಡ–ಯಪಾಲಿಂಗಧಾರಿ ಎಂದು ೧೮೮೧ ರಲ್ಲಿ ಪ್ರಕಟಗೊಂಡ ಮದ್ರಾಸಿನ ಜನಗಣತಿಯ ಜಾತಿವಾರು ಪಟ್ಟಿಯಲ್ಲಿ ಪ್ರಕಟಗೊಂಡಿದೆ(ಅನುಬಂಧ–೨ List of Castes, Tribes, Communities whose population cannot be ascertained by justice L. G. Havanoor Commition Report ನೋಡಿ).

ಈ ಪ್ರಕಾರ ತೆಲುಗು ಮತ್ತು ತಮಿಳು ರಾಷ್ಟ್ರಗಳಲ್ಲಿ ಲಾಳಗೊಂಡ ಎಂಬ ಜನಾಂಗವು ನೆಲೆಗೊಂಡಿತ್ತು ಮತ್ತು ಅದಕ್ಕೆ ಪೂರಕವಾದ ಜನಗಣತಿ ಪಟ್ಟಿಯಲ್ಲಿ ಮಿಸಲಾತಿಯನ್ನು ನೀಡಿತ್ತು ಎಂದು ಈ ಪ್ರಕಾರ ತಿಳಿದುಬರುತ್ತದೆ. ಅದಲ್ಲದೆ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ನೆಲೆಯೂರಿದ್ದಾರೆ. ಎಂಬುದು ತಿಳಿದು ಬರುತ್ತದೆ. ಅಲ್ಲದೆ ಅವರನ್ನು ಬೇರೆಬೇರೆ ರೀತಿಯಲ್ಲಿ ಗುರುತಿಸುತ್ತಾರೆ ಎಂಬುದು ಕ್ರಮ ಸಂಖ್ಯೆ ೪೦೧೦–೪೦೧೬ನ್ನು ಗಮನಿಸಿದಾಗ ತಿಳಿದುಬರುತ್ತದೆ.

೧೮೯೧ ರಲ್ಲಿ ಮೈಸೂರು ಪ್ರಾಂತ್ಯದಲ್ಲಿ ವಿ ಎನ್ ನರಸಿಂಹ ಅಯ್ಯಂಗಾರ್ ಅವರು ಪ್ರಕಟಿಸಿದ ಜಾತಿವಾರು ಪಟ್ಟಿಯಲ್ಲಿ ಲಿಂಗಾಯತ ಸಮುದಾಯದಲ್ಲಿ ಒಟ್ಟು ೩೮ ಉಪಜಾತಿಗಳನ್ನು ಗುರುತಿಸಲಾಗಿದೆ. ಆದರೆ ಅದಕ್ಕೂ ಮುಂಚೆ ಪ್ರಕಟಗೊಂಡ ೧೮೮೧ ರಲ್ಲಿ ಕೇರಳದ ಜನಗಣತಿಯಲ್ಲಿ ಕೇವಲ ಲಿಂಗಾಯತ ಎಂಬ ಹೆಸರು ಮಾತ್ರ ದಾಖಲಾಗಿದೆ. ಎಲ್ಲಾ ವೈಜ್ಞಾನಿಕ ಅಧ್ಯಯನದಲ್ಲಿ ತಿಳಿದುಬರುವುದೇನೆಂದರೆ ಹೈದ್ರಾಬಾದ್ ಪ್ರಾಂತ್ಯ ಬಿಟ್ಟರೆ ವೀರಶೈವದ ಉಲ್ಲೇಖ ಬೇರೆ ರಾಜ್ಯಗಳಲ್ಲಿ ಇಲ್ಲ. ತಮಿಳುನಾಡು ಮತ್ತು ಕೇರಳ ಪ್ರಾಂತ್ಯಗಳಲ್ಲಿ ಸಹ ವೀರಶೈವದ ಪ್ರಸ್ತಾಪವಿಲ್ಲ ತಮಿಳುನಾಡಿನಲ್ಲಿ ಲಿಂಗಧಾರಿ ಲಿಂಗಾಯತರನ್ನು ಜಂಗಮರೆಂದು ಕರೆಯುತ್ತಾರೆ. ಅವರನ್ನು ಜಂಗಮ ಶೀರ್ಷಿಕೆ ಅಡಿಯಲ್ಲಿಯೇ ಮಾನ್ಯತೆ ಕೊಡಲಾಗಿದೆ. ಈ ಪ್ರಾಂತ್ಯಗಳ ಅಂಶವನ್ನು ಗಮನವಿಟ್ಟು ನೋಡಿದಾಗ ೧೮೮೧ ರಿಂದ ೧೯೦೧ ರ ವರೆಗೆ ನಡೆದ ಇಂಪ್ಯಾರಿಯಲ್ ಸೆನ್ಸಸ್ ಅಡಿಯಲ್ಲಿ ತಮಿಳು ಪ್ರಾಂತ್ಯದಲ್ಲಿ ಕ್ರಮ ಸಂಖ್ಯೆ ೩೦೨೫ ರಿಂದ ೩೯೭೬ ರ ವರೆಗೆ ಒಟ್ಟು ೬೪ ಜಾತಿಗಳು ಲಿಂಗಾಯತದ ಉಪಜಾತಿಗಳು ಎಂದು ಗುರುತಿಸಲ್ಪಟ್ಟು ಕ್ರ ಸಂ ೩೦೭೩ ಹಾಗೂ ೩೯೪ ರಲ್ಲಿ ಕೇವಲ ೨ ಜಾತಿಗಳನ್ನು ಲಿಂಗಾಯುತ ವೀರಶೈವವೆಂದು ಗುರುತಿಸಿದ್ದಾರೆ. ಅದೇ ರೀತಿ ತೆಲುಗು ಪ್ರಾಂತ್ಯದಲ್ಲಿ ೪೦೪೦ ರಿಂದ ೪೦೫೬ ರ ವರೆಗೆ ಒಟ್ಟು ೨೭ ಜಾತಿಗಳನ್ನು ಗುರುತಿಸಿದ್ದು ಅದರಲ್ಲಿ ಕ್ರ ಸಂ ೪೦೫೬–೪೦೬೧ ರ ಜಾತಿಗಳನ್ನು ಕೇವಲ ೨ ಜಾತಿಗಳನ್ನು ಲಿಂಗಾಯತ ಜಂಗಮವೆಂದು ಗುರುತಿಸಿದ್ದಾರೆ. ಅಂದರೆ ಮುಖ್ಯ ಧರ್ಮ ಲಿಂಗಾಯತವಾಗಿದ್ದು ಅದರಲ್ಲಿ ವೀರಶೈವ ಹಾಗೂ ಜಂಗಮರನ್ನು ಗುರುತಿಸಿದ್ದಾರೆ.(Imperial census of India-1881-oparation and results in the presidency of Madras Book no.315-482, s.no-445-449, India 1881,Vol-4 ಅನುಬಂಧ ೧ ನೋಡಿ)

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟು ನೋಡಿದಾಗ ೧೨ನೇ ಶತಮಾನದ ಪೂರ್ವದಲ್ಲಿ ಲಿಂಗಾಯತ ಎಂಬ ಪರಿಕಲ್ಪನೆ ಮೊಳಕೆ ಒಡೆದಿಲ್ಲವೆಂದು ಕಾಣುತ್ತದೆ. ಲಿಂಗಾಯತ ಮತ್ತು ವೀರಶೈವ ಎರಡು ಒಂದೇ ಅಥವಾ ಬೇರೆಬೇರೆ ಎಂಬ ಅಂಶಗಳು ಚರ್ಚೆಯ ಹಂತದಲ್ಲಿವೆ. ವೀರಶೈವ ಎಂಬ ಪರಿಕಲ್ಪನೆ ಮೊದಲಿನಿಂದಲೂ ಬೆಳೆದುಬಂದಿದೆ ಎನ್ನಬಹುದು. ಲಿಂಗಾಯತದಲ್ಲಿ ಬರುವ ಒಟ್ಟು ೩೮ ಸಮುದಾಯಗಳಲ್ಲಿ ಲಾಳಗೊಂಡ, ನೊಣಬ, ಕುಡುಒಕ್ಕಲಿಗ ಇನ್ನುಳಿದ ಕೆಲವೊಂದು ಸಮುದಾಯಗಳಿಗೆ ವೀರಶೈವ ಲಿಂಗಾಯತವೆಂದು ಮೀಸಲಾತಿ ನೀಡಿದ್ದು, ಅವುಗಳಿಗೆ ಪ್ರತ್ಯೇಕವಾದ ವಿಶೇಷ ಮೀಸಲಾತಿಯನ್ನು ಇನ್ನೂ ನೀಡಿಲ್ಲ, ಅದರಲ್ಲೂ ಸಹ ಪ್ರಾದೇಶಿಕವಾಗಿ ನೋಡಿದಾಗ ಜಾತಿ ಪ್ರಮಾಣ ಪತ್ರದಲ್ಲಿ ಕೆಲವೊಂದು ಭಾಗದಲ್ಲಿ ವೀರಶೈವ ಲಿಂಗಾಯತವೆಂದು, ಹಿಂದೂ ವೀರಶೈವವೆಂದು, ಹಿಂದೂ ಲಿಂಗಾಯತವೆಂದು ಈ ರೀತಿ ಜಾತಿ ಪ್ರಮಾಣ ಪತ್ರದಲ್ಲಿ ನಮೂದಿತವಾಗಿದ್ದು ಏರುಪೇರುಗಳನ್ನು ನಾವು ಕಾಣಬಹುದು. ಲಾಳಗೊಂಡರು ಗೊಂಡರಿಂದ ಕವಲೊಡೆದ ಒಂದು ಗುಂಪು ಎಂದು ಅವರ ಸಂಪ್ರದಾಯ, ಅವರ ವಲಸೆ, ಅವರ ದೈವಾರಾಧನೆ, ಅವರ ವಂಶವೃಕ್ಷಗಳಿಂದ ತಿಳಿದುಬರುವುದು. ಸಂವಿಧಾನ ಬದ್ಧವಾಗಿ ಲಾಳಗೊಂಡರು ವಿಶೇಷ ಮೀಸಲಾತಿಯ ಯಾವುದೇ ಪಟ್ಟಿಯಲ್ಲಿ ಇಲ್ಲ. ಈ ಕುರಿತು ಸಮಸ್ಯೆಯನ್ನು ಅರಿತ ಎಂ ಆರ್ ಪಂಪನಗೌಡ ಇವರು ಲಾಳಗೊಂಡೇಶ್ವರ ಎಜ್ಯುಕೇಷನ್ ಟ್ರಸ್ಟ್ ಸಿರಗುಪ್ಪ ಇವರ ಮುಖಾಂತರ ಸರಕಾರಕ್ಕೆ ಒಂದು ಮನವಿ ಪತ್ರವನ್ನು ೧೯೮೨ ರಲ್ಲಿ ಸಲ್ಲಿಸಿದ್ದಾರೆ. ಈ ಕುರಿತು ಇನ್ನೂ ಕಾನೂನು ಕ್ರಮ ಜರುಗಬೇಕಾಗಿದೆ. ಅದರ ಒಂದು ಪ್ರತಿಯನ್ನು ಅನುಬಂಧದಲ್ಲಿ ನಮೂದಿಸಲಾಗಿದೆ.

"ಬೇಟೆ ಮೂಲದ ಲಾಳಗೊಂಡರು ತಮ್ಮ ಪೂರ್ವ ಚರಿತ್ರೆ ಮರೆತು ಪಶುಪಾಲನೆಯ ಘಟ್ಟದಿಂದ ಮಾತ್ರ ಇತಿಹಾಸ ಕಟ್ಟಿಕೊಡಬಲ್ಲ ಪಳಯುಳಿಕೆಗಳನ್ನು ತನ್ನೊಡಲಲ್ಲಿಟ್ಟುಕೊಂಡು ಬಂದಿದ್ದಾರೆ, ಸಂಸ್ಕೃತಿಕರಣಕ್ಕೊಳಪಟ್ಟು ಅವಶ್ಯಕತೆಗಳಿಗೆ ತಕ್ಕಂತೆ ತಮ್ಮನ್ನು ತಾವು ಬದಲಿಸಿಕೊಂಡಿದ್ದಾರೆ. ಗೊಂಡರಾಗಿದ್ದ ಇವರು ಲಾಳಗೊಂಡರಾಗಿ ಲಿಂಗಾಯತರಾದ ಮೇಲೆ ಆದಿಬಣಜಿಗ, ಬಣಜಿಗ, ಪಂಚಮಸಾಲಿ, ಕುಡುಒಕ್ಕಲಿಗರೊಂದಿಗೆ ವಿವಾಹ ಸಂಬಂಧ ಬೆಳಸಲಾರಂಬಿಸಿದ್ದಾರೆ. ಸಂವಿಧಾನ ಬದ್ದವಾಗಿ ಲಾಳಗೊಂಡರು ಮೀಸಲಾತಿಯ ಯಾವುದೇ ಪಟ್ಟಿಯಲ್ಲಿಲ್ಲ. ಇವರ ಮೂಲ ಸಮುದಾಯ ಗೊಂಡರು ಬುಡಕಟ್ಟು ಪಟ್ಟಿಯಲ್ಲಿದ್ದರೆ, ಇವರ ಸಮಾನವಾಗಿರುವ ಇತರ ಸಮುದಾಯಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿವೆ. ಇದುವರೆಗೂ ವೀರಶೈವ/ಲಿಂಗಾಯತರೆಂದು ತಪ್ಪಾಗಿ ಹೇಳಿಕೊಂಡಿರುವ ಇವರು ನಿಜವಾಗಿಯು ಲಾಳಗೊಂಡ ಲಿಂಗಾಯತರಾಗಿದ್ದಾರೆ. ಇವರಿಗೆ ಇವರ ಹೆಸರಿನಲ್ಲಿಯೇ ವಿಶೇಷ ಮೀಸಲಾತಿ ಕಲ್ಪಿಸುವುದು ನ್ಯಾಯ ಸಮ್ಮತವಾಗಿದೆ ಎಂದು ಕೆ ಎಂ ಮೇತ್ರಿ ಇವರು ತಮ್ಮ ಲಾಳಗೊಂಡರ ಚರಿತ್ರೆ ಎಂಬ ಲೇಖನದಲ್ಲಿ ನಮೂದಿಸಿದ್ದಾರೆ.

**೨.೧೧ ಗೊಂಡರ ನೆಲೆಗಳು(ಊರಿನ ಹೆಸರುಗಳು)**

ಗೊಂಡ ಹೆಸರಿನ ಸ್ಥಳಗಳು ಕರ್ನಾಟಕದಲ್ಲಿ ಹೇರಳವಾಗಿ ಕಂಡು ಬರುತ್ತವೆ, ಕರ್ನಾಟಕದಲ್ಲಿ ಗೊಂಡ, ರಾಜಗೊಂಡ ಲಾಳಗೊಂಡ ಸಮುದಾಯಗಳು ಹೇರಳವಾಗಿ ಕಾಣಸಿಗುತ್ತಾರೆ. ಸೂರಗೊಂಡನಹಳ್ಳಿ, ರಾಜಗೊಂಡನಹಳ್ಳಿ, ಮೆದುಗೊಂಡನಹಳ್ಳಿ, ಕೊಂಡದಹಳ್ಳಿ, ಗಂಗಗೊಂಡನಹಳ್ಳಿ, ತಿಪ್ಪಗೊಂಡನಹಳ್ಳಿ, ಬೇದಗೊಂಡನಹಳ್ಳಿ, ರಾಮಗೊಂಡನಹಳ್ಳಿ, ಕೋಗುಂಡೆ, ಚಿಕ್ಕಗೊಂಡನಹಳ್ಳಿ, ಜಾನುಗೊಂಡನಹಳ್ಳಿ, ಆನೆಕೊಂಡ, ಉಜ್ಜುಕೊಂಡ, ಕನುಗೊಂಡನಹಳ್ಳಿ, ಬೊರಗೊಂಡನಹಳ್ಳಿ, ಮಾಲಗೊಂಡನಹಳ್ಳಿ, ಮಾಯಕೊಂಡ, ರಾಮಗೊಂಡನಹಳ್ಳಿ, ಶಿರಮಗೊಂಡನಹಳ್ಳಿ, ಮೂಲಗೊಂಡನಹಳ್ಳಿ, ಎಲಗೊಂಡನಹಳ್ಳಿ, ಜವನಗೊಂಡನಹಳ್ಳಿ, ಕೊಂಡಾಪುರ, ಗುಂಡಸಮುದ್ರ, ಗುಂಡೇರಿ, ಗುಂಡಿಕ್ಕೆ, ಗುಂಡಿಮಡು, ಗೊಂದಿಹಳ್ಳಿ, ಚೌಡಗೊಂಡೇನಹಳ್ಳಿ, ನಾರಾಯಣಗೊಂಡನಹಳ್ಳಿ, ಬಂಜೆಗೊಂಡನಹಳ್ಳಿ, ಅರಸಿಗೊಂಡಿ, ಕಮಲಗೊಂಡಿ, ಗೋಪಗೊಂಡನಹಳ್ಳಿ, ಗೌಡಗೊಂಡನಹಳ್ಳಿ, ವ್ಯಾಸಗೊಂಡನಹಳ್ಳಿ, ಸೆಟ್ಟಿಗೊಂಡನಹಳ್ಳಿ, ಉಳಿವಿನಗೊಂಡಿ, ಕೊಂಡಜ್ಜಿ, ಗೊರವಿಗೊಂಡನಹಳ್ಳಿ, ನೀರಗುಂದ, ಮುತ್ತಾಗುಂದಿ, ಸಿದ್ಧಗೊಂಡನಹಳ್ಳಿ, ಹೊತರಗೊಂಡನಹಳ್ಳಿ, ಹಾರಗೊಂಡನಹಳ್ಳಿ, ಕನ್ನಗೊಂದಿ, ಸಿರಿಗೊಂಡನಹಳ್ಳಿ, ಆಡಗೊಂಡನಹಳ್ಳಿ, ಆದಿಗೊಂಡನಹಳ್ಳಿ, ಅಜಗೊಂಡನಹಳ್ಳಿ, ಆಲಗೊಂಡನಹಳ್ಳಿ, ಅಮ್ಮಗೊಂಡನಹಳ್ಳಿ, ಅಣ್ಣಗೊಂಡನಹಳ್ಳಿ, ಅಪ್ಪಗೊಂಡನಹಳ್ಳಿ, ಯಲಗೊಂಡನಹಳ್ಳಿ, ಯಾಚಗೊಂಡನಹಳ್ಳಿ, ಬಾಚಿಗೊಂಡನಹಳ್ಳಿ, ನೀಲಗೊಂಡನಹಳ್ಳಿ, ಸಂಗೊಂಡನಹಳ್ಳಿ, ರಾಚಪ್ಪಗೊಂಡಗಾಂವ, ಪಾವಗೊಂಡನಹಳ್ಳಿ, ಬಂಜಗೊಂಡನಹಳ್ಳಿ, ಬೆಟ್ಟಗೊಂಡನಹಳ್ಳಿ, ಬೀಚಗೊಂಡನಹಳ್ಳಿ, ಬೀಡುಗೊಂಡನಹಳ್ಳಿ, ಬೈರಗೊಂಡನಹಳ್ಳಿ, ಬೊಮ್ಮಗೊಂಡನಹಳ್ಳಿ, ಚೀಲಗೊಂಡನಹಳ್ಳಿ, ಬೀರಗೊಂಡನಹಳ್ಳಿ, ಚೋರಗೊಂಡನಹಳ್ಳಿ, ದಾಸಗೊಂಡನಹಳ್ಳಿ, ದೇವಗೊಂಡನಹಳ್ಳಿ, ಗಡಿಗೊಂಡಗಾಂವ, ಗಂಗೋಡಹಳ್ಳಿ, ಗಿರಿಗೊಂಡನಹಳ್ಳಿ, ಗೊಂಡವಾನ, ಗೋಪಗೊಂಡನಹಳ್ಳಿ, ಗುಡಿಗೊಂಡನಹಳ್ಳಿ, ಹಾಲುಗೊಂಡನಹಳ್ಳಿ, ಹನುಮಗೊಂಡನಹಳ್ಳಿ, ಹರಗೊಂಡನಹಳ್ಳಿ, ಹಾರೋಗೊಂಡನಹಳ್ಳಿ, ಹಾಸಗೊಂಡನಹಳ್ಳಿ, ಹೆಗ್ಗಗೊಂಡನಹಳ್ಳಿ, ಹುಚ್ಚಗೊಂಡನಹಳ್ಳಿ, ಜಡೆಗೊಂಡನಹಳ್ಳಿ, ಕಾಡಗೊಂಡನಹಳ್ಳಿ, ಕಾಮಗೊಂಡನಹಳ್ಳಿ, ಕಾಟಗೊಂಡನಹಳ್ಳಿ, ಕೆಂಗೊಂಡನಹಳ್ಳಿ, ಕೋಲಗೊಂಡನಹಳ್ಳಿ, ಕೊಂತಗೊಂಡನಹಳ್ಳಿ, ಕೋಟಗೊಂಡನಹಳ್ಳಿ, ಕುರುಬಗೊಂಡ, ಲಕ್ಷ್ಮಿಗೊಂಡನಹಳ್ಳಿ, ಲಾಲಗೊಂಡನಹಳ್ಳಿ, ಲಾಲಬಾಗ, ಲಾಳಸಂಘ, ಮಾದಗೊಂಡನಹಳ್ಳಿ, ಮಾಳಗೊಂಡನಹಳ್ಳಿ, ಮಾರಗೊಂಡನಹಳ್ಳಿ, ಮಾಸ್ತಿಗೊಂಡನಹಳ್ಳಿ, ಮಾಯಗೊಂಡನಹಳ್ಳಿ, ಮೋಟಗೊಂಡನಹಳ್ಳಿ, ನಾಗಗೊಂಡನಹಳ್ಳಿ, ನೆಲಗೊಂಡನಹಳ್ಳಿ, ಪರುಬಗೊಂಡನಹಳ್ಳಿ, ಪಾಯಗೊಂಡನಹಳ್ಳಿ, ಸಂಗೋಡಹಳ್ಳಿ, ಯಾಚಗೊಂಡನಹಳ್ಳಿ, ಸೂರಗೊಂಡನಹಳ್ಳಿ, ಇತ್ಯಾದಿ ಈ ಸ್ಥಳ ನಾಮಗಳು ಗೊಂಡ, ರಾಜಗೊಂಡ, ಲಾಳಗೊಂಡರ ನೆಲೆಗಳನ್ನು ಸೂಚಿಸುತ್ತವೆ.

೨.೧೨ ಲಾಳಗೊಂಡರ ಭೌಗೋಳಿಕತೆ

| ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿನ ಲಾಳಗೊಂಡ ಸಮುದಾಯದ ನೆಲೆಗಳು | | | | | | |
|---|---|---|---|---|---|---|
| ಜಿಲ್ಲಾವಾರು ಕ್ರಸಂ | ಜಿಲ್ಲೆ | ತಾಲೂಕು | ಗ್ರಾಮವಾರು ಕ್ರಸಂ | ಗ್ರಾಮ /ನೆಲೆ | ಕುಟುಂಬಗಳು | |
| | | | | | ೨೦೦೧ | ೨೦೧೫ –೨೦೧೬ ಸಮೀಕ್ಷೆ ಪ್ರಕಾರ |
| ೧ | ಬಾಗಲಕೋಟೆ | ಬಾಗಲಕೋಟೆ | ೧ | ಬಾಗಲಕೋಟೆ ನಗರ | ೦೪ | ೦೭ |
| | | | ೨ | ಬೇವೂರು | ೧೯ | ೨೨ |
| | | | ೩ | ಬೋಡನಾಯಕ ದಿನ್ನಿ | ೩೧ | ೪೦ |
| | | | ೪ | ಚೌಡಾಪುರ | ೦೮ | ೧೨ |
| | | ಹುನುಗುಂದ | ೫ | ಹುನುಗುಂದ ನಗರ | ೦ | ೧೮ |
| | | | ೬ | ಇಳಕಲ್ | ೦ | ೦೪ |
| | | | | ಒಟ್ಟು | ೬೨ | ೧೦೩ |
| ೨ | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | ೭ | ಅಣ್ಣೇಶ್ವರ | ೦೨ | ೦೪ |
| | | | ೮ | ಅವುತಿ | ೧೧ | ೧೫ |
| | | | ೯ | ಬಯ್ಯಪ್ಪನಹಳ್ಳಿ | ೦೫ | ೦೫ |
| | | | ೧೦ | ಬೀಚಗೊಂಡನ ಹಳ್ಳಿ | ೦೫ | ೦೫ |
| | | | ೧೧ | ಭುವನ ಹಳ್ಳಿ | ೦೪ | ೦೬ |
| | | | ೧೨ | ಚಿಕ್ಕ ಜಾಲ | ೦೧ | ೦೦ |
| | | | ೧೩ | ಗಂಗ ಮುತ್ತನಹಳ್ಳಿ | ೦೩ | ೦೩ |
| | | | ೧೪ | ಕುಂಬಗಾನಹಳ್ಳಿ | ೦೩ | ೦೩ |
| | | | ೧೫ | ಕೆಂಪತಮ್ಮನಹಳ್ಳಿ | ೦೨ | ೦೪ |

| | | | | | | |
|---|---|---|---|---|---|---|
| | | | ೧೬ | ಕೋಡಿಮಂಚೇನಹಳ್ಳಿ | ೦೧ | ೨೫ |
| | | | ೧೭ | ಮುದ್ದನಾಯಕನ | ೨೦ | ೨೨ |
| | | | | ಹಳ್ಳಿ | | |
| | | | ೧೮ | ನೀಲೇರಿ | ೦೨ | ೦೨ |
| | | | ೧೯ | ಪರಸೇನಹಳ್ಳಿ | ೧೦ | ೧೦ |
| | | | ೨೦ | ಸಿಂಗವಾರ | ೦೫ | ೦೮ |
| | | | ೨೧ | ಉದಯಗಿರಿ | ೦೨ | ೦೨ |
| | | | | ಒಟ್ಟು | ೮೫ | ೧೧೪ |
| | | ದೊಡ್ಡಬಳ್ಳಾಪುರ | ೨೨ | ಆಲಹಳ್ಳಿ | ೦೨ | ೦೨ |
| | | | ೨೩ | ಬಾಚಹಳ್ಳಿ | ೧೦ | ೧೨ |
| | | | ೨೪ | ದರ್ಗಾಜೋಗಳ್ಳಿ | ೩೦ | ೨೮ |
| | | | ೨೫ | ದೊಡ್ಡಬಳ್ಳಾಪುರ | ೦೩ | ೦೩ |
| | | | | ನಗರ | | |
| | | | ೨೬ | ಕುರುಬರಹಳ್ಳಿ | ೧೦೮ | ೧೧೯ |
| | | | ೨೭ | ಕೊಡಿಗೆಹಳ್ಳಿ | ೧೫ | ೧೫ |
| | | | ೨೮ | ಕೋಳೂರು | ೫೦ | ೫೦ |
| | | | ೨೯ | ಮಲ್ಲಾತನಹಳ್ಳಿ | ೧೨೦ | ೧೨೨ |
| | | | ೩೦ | ನಾಗಸಂದ್ರ | ೨೦೦ | ೨೧೦ |
| | | | ೩೧ | ರಾಮಯ್ಯನ | ೧೦೦ | ೧೦೩ |
| | | | | ಪಾಳ್ಯ | | |
| | | | ೩೨ | ರಾಜಗಟ್ಟ | ೧೪ | ೧೪ |
| | | | ೩೩ | ರೋಜಿಪುರ | ೨೦ | ೨೦ |
| | | | ೩೪ | ಸಿದ್ದನಾಯಕನಹಳ್ಳಿ | ೭೦ | ೭೫ |
| | | | ೩೫ | ಸೊನ್ನಾಪುನ ಹಳ್ಳಿ | ೩೩ | ೩೪ |
| | | | ೩೬ | ತಿದ್ದಾಪುರ | ೦೧ | ೦೫ |
| | | | ೩೭ | ವಡ್ಡರ ಪಾಳ್ಯ | ೧೦೦ | ೧೦೦ |
| | | | | ಒಟ್ಟು | ೮೭೬ | ೯೧೨ |

| | | | | | | |
|---|---|---|---|---|---|---|
| | | ನೆಲಮಂಗಲ | ೩೮ | ಅಗ್ರಹಾರ | ೭೫ | ೬೫ |
| | | | ೩೯ | ಅಬ್ಬಿಗೆರೆ | ೭೫ | ೭೭ |
| | | | ೪೦ | ಹೊನ್ನಸಂದ್ರ | ೫೦ | ೫೨ |
| | | | ೪೧ | ಐಕಡಪುರ | ೧೫ | ೧೭ |
| | | | ೪೨ | ಕುದುರೆಗೆರೆ | ೪೦ | ೩೮ |
| | | | ೪೩ | ಮುತ್ತಹಳ್ಳಿ | ೫೦ | ೫೩ |
| | | | ೪೪ | ನರಸೀಪುರ | ೬೦ | ೬೪ |
| | | | ೪೫ | ಶಿವಕೋಟೆ | ೫೦ | ೫೨ |
| | | | ೪೬ | ತರಬಿನಹಳ್ಳಿ | ೪೦ | ೪೨ |
| | | | ೪೭ | ತೊರೆನಾಗಸಂದ್ರ | ೧೦೦ | ೧೦೦ |
| | | | | ಒಟ್ಟು | ೫೫೫ | ೫೬೦ |
| ೩ | ಬೆಳಗಾವಿ | ಬೈಲಹೊಂಗಲ | ೪೮ | ಬೈಲಹೊಂಗಲ | ೦೧ | ೧೨ |
| | | | ೪೯ | ಕಿತ್ತೂರು | ೦ | ೧೫ |
| | | | ೫೦ | ಸವದತ್ತಿ | ೦ | ೧೬ |
| | | | ೫೧ | ಬೆಳಗಾಂ ನಗರ | ೦ | ೦೫ |
| | | | ಒಟ್ಟು | ೦೧ | ೪೮ | |
| ೪ | ಬಳ್ಳಾರಿ | ಬಳ್ಳಾರಿ | ೫೨ | ಅಮರಾಪುರ | ೨೫ | ೨೯ |
| | | | ೫೩ | ಅಲ್ಲಿಪುರ | ೦೨ | ೦೮ |
| | | | ೫೪ | ಅಸುಂಡಿ | ೩೦ | ೩೫ |
| | | | ೫೫ | ಬಸರುಕೋಡು | ೨೩ | ೪೨ |
| | | | ೫೬ | ಬಸವಪುರ | ೦೧ | ೧೨ |
| | | | ೫೭ | ಬಳ್ಳಾರಿ ನಗರ | ೯೩ | ೯೩ |
| | | | ೫೮ | ಬಳ್ಳಾರಿನಗರ | ೧೭ | ೧೭ |
| | | | | ಕ್ರಿಶ್ಚಿಯನ್ | | |
| | | | ೫೯ | ಬೆಣಕಲ್ಲು | ೧೭ | ೨೫ |
| | | | ೬೦ | ಬ್ಯಾಲಚಿಂತೆ | ೧೯ | ೨೨ |
| | | | ೬೧ | ಚಳ್ಳಗುರ್ಕಿ | ೧೧೬ | ೧೩೦ |

| | | | | | | |
|---|---|---|---|---|---|---|
| | | | ೬೨ | ದಾಸರನಾಗೇನ ಹಳ್ಳಿ | ೩೯ | ೬೦ |
| | | | ೬೩ | ಗೆಣಕೆಹಾಳು | ೧೬೧ | ೧೬೨ |
| | | | ೬೪ | ಇಬ್ರಾಹಿಂಪುರ | ೪೭ | ೫೦ |
| | | | ೬೫ | ಜಾಲಿಹಾಳು | ೬೪ | ೬೯ |
| | | | ೬೬ | ಕಕ್ಕಬೇವಿನಹಳ್ಳಿ | ೧೭ | ೩೦ |
| | | | ೬೭ | ಕಗ್ಗಲ್ಲು ವೈ | ೧೫ | ೩೨ |
| | | | ೬೮ | ಕಲ್ಲುಕಂಬ | ೨೧ | ೨೯ |
| | | | ೬೯ | ಕಲ್ಲುಕುಟಿಗಿನ ಹಾಳು | ೫೧ | ೬೨ |
| | | | ೭೦ | ಕಾರೆಕಲ್ಲು | ೬೮ | ೭೦ |
| | | | ೭೧ | ಕರ್ಚೇಡು | ೫೭ | ೬೫ |
| | | | ೭೨ | ಕೊರಲಗುಂದಿ | ೧೪ | ೧೫ |
| | | | ೭೩ | ಕುಂಟನಹಾಳು | ೪೫ | ೬೨ |
| | | | ೭೪ | ಕುಡಿತಿನಿ | ೨೫ | ೩೦ |
| | | | ೭೫ | ಕುರುಗೋಡು | ೩೮ | ೬೫ |
| | | | ೭೬ | ಕೊಳಗಲ್ಲು | ೫೦ | ೫೩ |
| | | | ೭೭ | ಬಬ್ಬುಕುಂಟೆ | ೩೦ | ೩೫ |
| | | | ೭೮ | ಲಕ್ಷ್ಮೀಪುರ | ೩ | ೧೦ |
| | | | ೭೯ | ಮಸೂದಿಪುರ | ೪೭ | ೬೮ |
| | | | ೮೦ | ಮೀನಹಳ್ಳಿ | ೦೯ | ೬ |
| | | | ೮೧ | ಮೋಕ | ೦೫ | ೧೫ |
| | | | ೮೨ | ಮುಷ್ಠಘಟ್ಟ | ೫೫ | ೫೭ |
| | | | ೮೩ | ಪರಮದೇವನ ಹಳ್ಳಿ | ೦೫ | ೧೦ |
| | | | ೮೪ | ಶಂಕರ ಬಂಡೆ | ೧೨೬ | ೧೩೪ |
| | | | ೮೫ | ಶಿಂದಗೇರಿ | ೨೯ | ೩೫ |

| | | | | | | |
|---|---|---|---|---|---|---|
| | | | ೮೬ | ಶ್ರೀಧರ ಗಡ್ಡೆ | ೦೧ | ೦೫ |
| | | | ೮೭ | ಸಿದ್ದಮ್ಮನಹಳ್ಳಿ | ೨೦ | ೩೪ |
| | | | ೮೮ | ವಣೆನೂರು | ೪೬ | ೪೬ |
| | | | ೮೯ | ವೀರಾಪುರ ಹೆಚ್ | ೫೮ | ೬೦ |
| | | | ೯೦ | ವೀರಾಪುರ ಕೆ | ೧೨ | ೧೫ |
| | | | ೯೧ | ಎಮ್ಮಿಗನೂರು | ೦೩ | ೧೪ |
| | | | ೯೨ | ಯಾಳ್ಪಿ | ೨೫ | ೨೯ |
| | | | ೯೩ | ಏಳುಬೆಂಚಿ | ೫೦ | ೫೩ |
| | | | | ಒಟ್ಟು | ೧೫೭೫ | ೧೮೯೩ |
| | | ಹಡಗಲಿ | ೯೪ | ಹರಗನೂರು | ೧೦ | ೧೫ |
| | | | ೯೫ | ಹಿರೇಹಡಗಲಿ | ೧೦ | ೧೨ |
| | | | ೯೬ | ಹಿರೇಬನ್ನಿ ಮಟ್ಟಿ | ೦೮ | ೦೮ |
| | | | ೯೭ | ಮಾಗಳ | ೧೦ | ೧೫ |
| | | | | ಒಟ್ಟು | ೩೮ | ೫೦ |
| | | ಹಗರಿಬೊಮ್ಮನ | ೯೮ | ಹಗರಿಬೊಮ್ಮನ | ೦ | ೦೩ |
| | | ಹಳ್ಳಿ | | ಹಳ್ಳಿ | | |
| | | | ೯೯ | ಹಂಪಾಪಟ್ಟಣ | ೦ | ೦೪ |
| | | | | ಒಟ್ಟು | ೦ | ೭ |
| | | ಹೊಸಪೇಟೆ | ೧೦೦ | ಚಿಕ್ಕಜಾಯಿಗನೂರು | ೩೮ | ೪೫ |
| | | | ೧೦೧ | ದೇವಸಮುದ್ರ | ೧೨ | ೧೪ |
| | | | ೧೦೨ | ಹೊಸಪೇಟೆ | ೦೯ | ೧೨ |
| | | | ೧೦೩ | ಜೌಕು | ೧೮ | ೨೫ |
| | | | ೧೦೪ | ಕಂಪ್ಲಿ | ೨೯ | ೩೫ |
| | | | ೧೦೫ | ಮೆಟ್ರಿ | ೦೩ | ೧೩ |
| | | | ೧೦೬ | ರಾಮಸಾಗರ | ೪೦ | ೪೩ |
| | | | ೧೦೭ | ಸೋಮಲಾಪುರ | ೧೫ | ೨೨ |
| | | | ೧೦೮ | ಸುಗ್ಗೇನಹಳ್ಳಿ | ೧೩ | ೧೩ |

| | | | | | | |
|---|---|---|---|---|---|---|
| | | | ೧೦೯ | ವೆಂಕಟಾಪುರ | ೦೩ | ೦೩ |
| | | | | ಒಟ್ಟು | ೧೮೦ | ೨೨೫ |
| | | ಸಿರಗುಪ್ಪ | ೧೧೦ | ಚರೂರು | ೪೫ | ೫೦ |
| | | | ೧೧೧ | ಗಜಿಗನಹಾಳ | ೪೬ | ೪೭ |
| | | | ೧೧೨ | ಗುಂಡಿಗನೂರು | ೩೩ | ೩೫ |
| | | | ೧೧೩ | ಹಾಗಲೂರು | ೫೧ | ೫೦ |
| | | | ೧೧೪ | ಹಳೇಕೋಟೆ | ೦೪ | ೦೫ |
| | | | ೧೧೫ | ಹಾವಿನಹಾಳು | ೨೦ | ೨೨ |
| | | | ೧೧೬ | ಹೊನ್ನಳ್ಳಿ | ೨೧ | ೨೦ |
| | | | ೧೧೭ | ಹೊಸಳ್ಳಿ ಹೆಚ್ | ೦೯ | ೧೨ |
| | | | ೧೧೮ | ಇಬ್ರಾಹಿಂಪುರ | ೨೬ | ೨೬ |
| | | | ೧೧೯ | ಕರ್ಚಿಗನೂರು | ೫೮ | ೬೨ |
| | | | ೧೨೦ | ಕರೂರು | ೧೭೪ | ೧೭೪ |
| | | | ೧೨೧ | ಎಂ. ಸೂಗೂರು | ೪೦ | ೪೨ |
| | | | ೧೨೨ | ನಡವಿ ಕ್ಯಾಂಪ್ | ೧೦ | ೧೦ |
| | | | ೧೨೩ | ರಾಂಪುರ | ೬೪ | ೬೫ |
| | | | ೧೨೪ | ರಾರಾವಿ | ೭೨ | ೭೦ |
| | | | ೧೨೫ | ಶಾಲಿಗನೂರು | ೩೮ | ೩೮ |
| | | | ೧೨೬ | ಶಾನವಾಸಪುರ | ೧೦೦ | ೧೦೨ |
| | | | ೧೨೭ | ಶಿರಿಗೇರಿ | ೯೦ | ೯೩ |
| | | | ೧೨೮ | ಶ್ರೀಧರಗದ್ದೆ | ೧೫ | ೧೫ |
| | | | ೧೨೯ | ತಾಳೂರು | ೦೫ | ೧೦ |
| | | | ೧೩೦ | ತೊಂಡೆಹಾಳು | ೨೨ | ೨೫ |
| | | | ೧೩೧ | ಉಪ್ಪಾರ ಹೊಸಳ್ಳಿ | ೦೩ | ೦೫ |
| | | | ೧೩೨ | ವತ್ತೂರು ಮುರುಳಿ | ೫೬ | ೫೬ |
| | | | | ಒಟ್ಟು | ೯೬೪ | ೯೯೨ |
| | | ಸಂಡೂರು | ೧೩೩ | ದೌಲತ್ ಪುರ | ೦೮ | ೧೬ |
| | | | ೧೩೪ | ಹಳೇದರೋಜಿ | ೦೨ | ೦೫ |

| | | | | | | |
|---|---|---|---|---|---|---|
| | | | ೧೩೫ | ಸಂಡೂರು | ೨೦ | ೨೫ |
| | | | ೧೩೬ | ತಾರಾನಗರ | ೦೨ | ೦೮ |
| | | | ೧೩೭ | ತೋರಣಗಲ್ಲು | ೬೨ | ೬೮ |
| | | | ೧೩೮ | ಯಶವಂತನಗರ | ೧೦ | ೧೧ |
| | | | | ಒಟ್ಟು | ೧೦೪ | ೧೩೩ |
| ೫ | ಚಿತ್ರದುರ್ಗ | ಚಳ್ಳಕೆರೆ | ೧೩೯ | ಓಬಳಾಪುರ | ೨೫ | ೩೨ |
| | | ಚಿತ್ರದುರ್ಗ | ೧೪೦ | ಅಯ್ಯನಹಳ್ಳಿ | ೧೫ | ೧೫ |
| | | | ೧೪೧ | ಭರಮಸಾಗರ | ೫೦ | ೫೮ |
| | | | ೧೪೨ | ಚಿತ್ರದುರ್ಗ ನಗರ | ೦ | ೪೦ |
| | | ಹಿರಿಯೂರು | ೧೪೩ | ಬೇತೂರು | ೧೦ | ೧೮ |
| | | | ೧೪೪ | ಧರ್ಮಾಪುರ | ೦೮ | ೧೨ |
| | | | ೧೪೫ | ಕೋಡಿಹಳ್ಳಿ | ೧೦ | ೧೫ |
| | | | ೧೪೬ | ಹಿರಿಯೂರು ನಗರ | ೦೦ | ೨೮ |
| | | | | ಒಟ್ಟು | ೧೧೮ | ೨೧೮ |
| ೬ | ದಾವಣಗೆರೆ | ಹರಪನಹಳ್ಳಿ | ೧೪೭ | ಹರಪನಹಳ್ಳಿ | ೨೫ | ೪೨ |
| | | | ೧೪೮ | ಬಾಗಳಿ | ೧೦ | ೧೮ |
| | | ಜಗಲೂರು | ೧೪೯ | ದೋಣಿಹಳ್ಳಿ | ೨೦ | ೨೫ |
| | | ದಾವಣಗೆರೆ | ೧೫೦ | ದಾವಣಗೆರೆ | ೦೦ | ೦೫ |
| | | | | ಒಟ್ಟು | ೫೫ | ೯೦ |
| ೭ | ಧಾರವಾಡ | ಧಾರವಾಡ | ೧೫೦ | ಮಾರಡಿಗಿ | ೪೪ | ೪೮ |
| | | | ೧೫೨ | ಧಾರವಾಡ ನಗರ | ೦೦ | ೨೮ |
| | | ಕಲಘಟಗಿ | ೧೫೩ | ಜಿನ್ನೂರು | ೧೦ | ೧೩ |
| | | | ೧೫೪ | ನೆಲ್ಲಿ ಹರವಿ | ೧೦ | ೧೭ |
| | | ಹುಬ್ಬಳ್ಳಿ | ೧೫೫ | ಹುಬ್ಬಳ್ಳಿ | ೧೦ | ೩೮ |
| | | | | ಒಟ್ಟು | ೭೪ | ೧೪೪ |
| ೮ | ಗದಗ | ಗದಗ | ೧೫೬ | ಗದಗ | ೦೯ | ೨೩ |

| | | | | | | |
|---|---|---|---|---|---|---|
| | | | ೧೫೭ | ಲಿಂಗದಹಳ್ಳಿ | ೧೦ | ೧೧ |
| | | ಮುಂಡರಗಿ | ೧೫೮ | ಬಾಗೇವಾಡಿ | ೧೦ | ೧೨ |
| | | | ೧೫೯ | ಹಳ್ಳಿಗುಡಿ | ೦೫ | ೦೫ |
| | | | ೧೬೦ | ಮುಂಡರಗಿ | ೨೨ | ೨೮ |
| | | ಶಿರಹಟ್ಟಿ | ೧೬೧ | ಬಾಲೆಹೊಸೂರು | ೧೩ | ೧೫ |
| | | | ೧೬೨ | ಚೊಡ್ಡೂರು | ೦೩ | ೦೫ |
| | | | ೧೬೩ | ಮಾಗಡಿ | ೦೮ | ೦೮ |
| | | | ೧೬೪ | ಮಾರಡಗಿ | ೧೫ | ೧೮ |
| | | | ೧೬೫ | ನಿಲೋಗಲ್ಲು | ೨೯ | ೩೦ |
| | | | ೧೬೬ | ಉಣತೂರು | ೧೩ | ೧೩ |
| | | | ೧೬೭ | ಸುರಣಗಿ | ೧೦ | ೧೦ |
| | | | | ಒಟ್ಟು | ೧೪೭ | ೧೭೮ |
| ೯ | ಗುಲಬರ್ಗಾ | ಶಾಹಪುರ | ೧೬೮ | ಬಸವಂತಪುರ | ೭೧ | ೭೬ |
| | (ಕಲಬುರ್ಗಿ) | | | | | |
| | | | ೧೬೯ | ಭೂಮ್ಮನಹಳ್ಳಿ | ೦೮ | ೧೦ |
| | | | ೧೭೦ | ದೊರನಹಳ್ಳಿ | ೧೩ | ೧೩ |
| | | | ೧೭೧ | ಹಿರೆ ತುಮಕೂರು | ೦೮ | ೦೮ |
| | | | ೧೭೨ | ಉರುಸಗಂಡಿಗೆ | ೦೫ | ೧೧ |
| | | | ೧೭೩ | ಮನಗಿನಹಾಳು | ೧೨ | ೧೨ |
| | | | ೧೭೪ | ಮನಮುಟುಗಿ | ೫೦ | ೫೪ |
| | | | ೧೭೫ | ನಂದಿಹಳ್ಳಿ | ೧೩ | ೧೮ |
| | | | | ಒಟ್ಟು | ೧೮೦ | ೨೦೨ |
| ೧೦ | ಹಾವೇರಿ | ಬ್ಯಾಡಗಿ | ೧೭೬ | ತಡಸ | ೧೦ | ೧೩ |
| | | ಹಾವೇರಿ | ೧೭೭ | ಬನ್ನಿಮಟ್ಟಿ | ೦೬ | ೦೯ |
| | | | ೧೭೮ | ಹೊಸರತ್ತಿ | ೦೧ | ೦೩ |
| | | | ೧೭೯ | ಕಿತ್ತೂರು | ೧೭ | ೨೦ |
| | | | ೧೮೦ | ಕೋಳೂರು | ೨೦ | ೨೮ |

| | | | | | | |
|---|---|---|---|---|---|---|
| | | | ೧೮೧ | ಕೊರಡೂರು | ೬೩ | ೭೦ |
| | | | ೧೮೨ | ಮಣ್ಣೂರು | ೨೦ | ೨೦ |
| | | | ೧೮೩ | ಮುಗದೂರು | ೧೦ | ೧೨ |
| | | | ೧೮೪ | ಮೇಲ್ಮೂರಿ | ೦೮ | ೧೦ |
| | | ರಾಣೆಬೆನ್ನೂರು | ೧೮೫ | ದ್ಯಾವನಕಟ್ಟೆ | ೧೫ | ೧೫ |
| | | | ೧೮೬ | ಗುಡ್ಡದ ಆನವೇರಿ | ೧೭ | ೧೭ |
| | | | ೧೮೭ | ಕಮದೊಡ್ಡು | ೩೦ | ೩೦ |
| | | | ೧೮೮ | ರಾಣೆಬೆನ್ನೂರು | ೦೮ | ೦೮ |
| | | ಸವಣೂರು | ೧೮೯ | ಚಿಕ್ಕಮಾರನಹಳ್ಳಿ | ೦೩ | ೦೩ |
| | | | ೧೯೦ | ಹಿರೇ ಮಗದೂರು | ೩೪ | ೩೪ |
| | | | ೧೯೨ | ಕಲಕೋಟೆ | ೧೦ | ೧೫ |
| | | | | ಒಟ್ಟು | ೨೭೨ | ೩೦೭ |
| ೧೧ | ಕೊಪ್ಪಳ | ಗಂಗಾವತಿ | ೧೯೩ | ಅರಳಿಹಳ್ಳಿ | ೦೨ | ೦೪ |
| | | | ೧೯೪ | ಗಂಗಾವತಿ | ೧೦ | ೨೩ |
| | | | ೧೯೫ | ಹೊಸಕೇರಿ | ೩೯ | ೩೯ |
| | | | ೧೯೬ | ಹೊಸಹಳ್ಳಿ | ೨೦ | ೨೨ |
| | | | ೧೯೭ | ಯರಡೋಣಿ | ೮೦ | ೮೫ |
| | | ಕೊಪ್ಪಳ | ೧೯೮ | ಗತ್ತಿರಟ್ಟಳ | ೦೧ | ೦೦ |
| | | | ೧೯೯ | ಕವಲೂರು | ೦೧ | ೦೩ |
| | | | ೨೦೦ | ಕೊಪ್ಪಳ ನಗರ | ೦೫ | ೦೬ |
| | | ಕುಷ್ಟಗಿ | ೨೦೧ | ಕುಷ್ಟಗಿ ನಗರ | ೦೩ | ೦೩ |
| | | | ೨೦೨ | ತಾವರಗೆರೆ | ೨೦ | ೨೦ |
| | | ಯಲಬುರ್ಗ | ೨೦೩ | ಕುಕನೂರು | ೦೨ | ೦೨ |
| | | | ೨೦೪ | ರಾಜೂರು | ೦೨ | ೦೨ |
| | | | | ಒಟ್ಟು | ೧೮೫ | ೨೦೯ |
| ೧೨ | ರಾಯಚೂರು | ದೇವದುರ್ಗ | ೨೦೫ | ಬೊಮ್ಮನಹಾಳು | ೧೬ | ೨೦ |
| | | | ೨೦೬ | ಗಣೆಕಲ್ | ೦೭ | ೧೦ |

| | | | | | | |
|---|---|---|---|---|---|---|
| | | | ೨೦೭ | ಹೇಮನಾಳು | ೦೫ | ೦೫ |
| | | | ೨೦೮ | ಕೊಂಚಪಲ್ಲಿ | ೧೫ | ೧೬ |
| | | | ೨೦೯ | ನಾಗಡದಿನ್ನಿ | ೪೯ | ೫೦ |
| | | | ೨೧೦ | ನಾಗೋಲಿ | ೧೮ | ೨೦ |
| | | | ೨೧೧ | ತೊಣಚಿಪಲ್ಲಿ | ೦೧ | ೧೦ |
| | | | | ಒಟ್ಟು | ೧೧೧ | ೧೩೧ |
| | | ಮಾನ್ವಿ | ೨೧೨ | ಆಲ್ದಾಳು | ೪೦ | ೪೫ |
| | | | ೨೧೩ | ಅಮರೇಶ್ವರ | ೦೬ | ೦೬ |
| | | | | ಕ್ಯಾಂಪ್ | | |
| | | | ೨೧೪ | ಅತ್ತನೂರು | ೫೨ | ೬೦ |
| | | | ೨೧೫ | ಬೆಟ್ಟದೂರು | ೧೩ | ೧೫ |
| | | | ೨೧೬ | ಭೋಗಾವತಿ | ೧೬ | ೧೮ |
| | | | ೨೧೭ | ಚಿಕ್ಕಕೊಟ್ನೆಕಲ್ | ೩೦ | ೩೩ |
| | | | ೨೧೮ | ಚಿಮಲಾಪುರ | ೩೧ | ೩೫ |
| | | | ೨೧೯ | ದದ್ದಾಲಾ ಪನ್ನೂರು | ೧೫ | ೧೫ |
| | | | ೨೨೦ | ದೇವತಗಲ್ | ೧೫ | ೧೭ |
| | | | ೨೨೧ | ಗವಿಘಟ್ಟೆ | ೪೯ | ೫೨ |
| | | | ೨೨೨ | ಹಳ್ಳಿಹೊಸೂರು | ೪೯ | ೪೯ |
| | | | ೨೨೩ | ಹರನಹಳ್ಳಿ | ೧೯ | ೨೦ |
| | | | ೨೨೪ | ಹರ್ವಿ | ೮೨ | ೯೦ |
| | | | ೨೨೫ | ಹಿರೇಕೊಟ್ನೆಕಲ್ | ೯೬ | ೯೬ |
| | | | ೨೨೬ | ಜಾಜಿರಪನ್ನೂರು | ೦೮ | ೧೦ |
| | | | ೨೨೭ | ಜಾಕಲ ದಿನ್ನಿ | ೦೯ | ೧೦ |
| | | | ೨೨೮ | ಜಾನೆಕಲ್ಲು | ೫೦ | ೫೩ |
| | | | ೨೨೯ | ಕಲ್ಲೂರು | ೧೫ | ೧೫ |
| | | | ೨೩೦ | ಕರಡಿಗುಡ್ಡ | ೨೨ | ೨೪ |
| | | | ೨೩೧ | ಮಾಚನೂರು | ೩೬ | ೩೮ |

| | | | | | | |
|---|---|---|---|---|---|---|
| | | | ೨೩೨ | ಮಾಡಗಿರಿ | ೮೭ | ೯೦ |
| | | | ೨೩೩ | ಮಲ್ಲಿಗೆ ಮಡುವು | ೩೩ | ೩೫ |
| | | | ೨೩೪ | ಮಾನ್ವಿ | ೧೦ | ೧೫ |
| | | | ೨೩೫ | ನಂದಿಹಾಳು | ೨೪ | ೨೪ |
| | | | ೨೩೬ | ನಸಲಾಪುರ | ೦೨ | ೦೫ |
| | | | ೨೩೭ | ನವಲಕಲ್ಲು | ೧೧ | ೧೧ |
| | | | ೨೩೮ | ನುಗಡೋಣಿ | ೨೮ | ೩೦ |
| | | | ೨೩೯ | ಪೋತ್ನಾಳು | ೦೮ | ೦೯ |
| | | | ೨೪೦ | ಸೈದಾಪುರ | ೦೩ | ೦೫ |
| | | | ೨೪೧ | ಶಾಖಾಪುರ | ೧೦೭ | ೧೦೭ |
| | | | ೨೪೨ | ಶಿಂಗಿಡಿದಿನ್ನಿ | ೩೨ | ೩೨ |
| | | | ೨೪೩ | ನೀರಮಾನ್ವಿ | ೬೧ | ೬೧ |
| | | | | ಒಟ್ಟು | ೧೦೫೯ | ೧೧೨೫ |
| | | ರಾಯಚೂರು | ೨೪೪ | ಬೇವಿನಬೆಂಚಿ | ೦೧ | ೦೧ |
| | | | ೨೪೫ | ಬುಡದಿನ್ನಿ | ೦೩ | ೦೩ |
| | | | ೨೪೬ | ಫತ್ತೇಪುರ | ೧೭ | ೧೭ |
| | | | ೨೪೭ | ಗಧಾರ | ೦೩ | ೦೩ |
| | | | ೨೪೮ | ಗಾಣದಾಲ್ | ೦೮ | ೦೮ |
| | | | ೨೪೯ | ಗಂಗವಾರ | ೧೪ | ೧೪ |
| | | | ೨೫೦ | ಗಿಲ್ಲೇ ಸೂಗೂರು | ೦೬ | ೦೬ |
| | | | ೨೫೧ | ಗೋನಾಳ | ೩೨ | ೩೨ |
| | | | ೨೫೨ | ಹೊಸಪೇಟೆ | ೦೪ | ೦೬ |
| | | | ೨೫೩ | ಹಿಡಪನೂರು | ೦೬ | ೦೬ |
| | | | ೨೫೪ | ಜಾಗರಕಲ್ಲು | ೦೪ | ೦೪ |
| | | | ೨೫೫ | ಜಾಗಿರ | ೫೭ | ೫೭ |
| | | | | ವೆಂಕಟಾಪುರ | | |
| | | | ೨೫೬ | ಕಲ್ಮಲ | ೫೮ | ೫೮ |

| | | | | | | |
|---|---|---|---|---|---|---|
| | | | ೨೫೭ | ಮಡ್ಡಿಪೇಟೆ | ೨೨ | ೨೨ |
| | | | ೨೫೮ | ಮಲ್ಲಾಪುರ | ೦೪ | ೦೪ |
| | | | ೨೫೯ | ಮಾರ್ಚೇಡು | ೦೨ | ೦೨ |
| | | | ೨೬೦ | ಮಿರ್ಜಾಪುರ | ೩೯ | ೩೯ |
| | | | ೨೬೧ | ನೆಲಹಾಳ | ೩೮ | ೩೮ |
| | | | ೨೬೨ | ರಾಯಚೂರು | ೭೭ | ೭೭ |
| | | | | ನಗರ | | |
| | | | ೨೬೩ | ಯರಗೇರ | ೦೪ | ೦೪ |
| | | | | ಒಟ್ಟು | ೩೯೯ | ೪೦೧ |
| | | ಸಿಂಧನೂರು | ೨೬೪ | ಅಬಲನೂರು | ೧೪೨ | ೧೪೨ |
| | | | ೨೬೫ | ಬನ್ನಿಗೂರು | ೦೧ | ೦೩ |
| | | | ೨೬೬ | ಬೂದಿವಾಳ | ೭೨ | ೭೨ |
| | | | ೨೬೭ | ಚಿತ್ರಾಲಿ | ೦೪ | ೦೪ |
| | | | ೨೬೮ | ಗೊನ್ನಿಗನೂರು | ೦೯ | ೦೯ |
| | | | ೨೬೯ | ಹರಟನೂರು | ೨೧ | ೨೧ |
| | | | ೨೭೦ | ಹೊಸಹಳ್ಳಿ | ೫೦ | ೫೦ |
| | | | ೨೭೧ | ಹುಡಾ | ೧೦ | ೧೨ |
| | | | ೨೭೨ | ಹುಲಗುಂಚಿ | ೦೮ | ೦೮ |
| | | | ೨೭೩ | ಮಲ್ಕಾಪುರ | ೧೧ | ೧೪ |
| | | | ೨೭೪ | ಮುಕ್ಕುಂದ | ೩೦ | ೩೦ |
| | | | ೨೭೫ | ರೌವುಡಾಕುಂದ | ೦೩ | ೦೩ |
| | | | ೨೭೬ | ಸಾಲಗುಂದಾ | ೧೨ | ೧೨ |

| | | | | | | |
|---|---|---|---|---|---|---|
| | | | ೨೭೭ | ಸಾನಬಾಳ | ೦೧ | ೦೧ |
| | | | ೨೭೮ | ಸಿದ್ದರಾಮಾಪುರ | ೧೫ | ೧೫ |
| | | | ೨೭೯ | ಸಿಂದನೂರು | ೨೮ | ೨೮ |
| | | | ೨೮೦ | ಸಿಂಗಾಪುರ | ೦೯ | ೦೯ |
| | | | ೨೮೧ | ಸೋಮಲಾಪುರ | ೧೯ | ೧೯ |
| | | | ೨೮೨ | ತುರವಿಹಾಳು | ೧೯ | ೧೯ |
| | | | ೨೮೩ | ಉಪ್ಪಳ | ೦೫ | ೦೫ |
| | | | ೨೮೪ | ವಳಬಳ್ಳಾರಿ | ೩೨ | ೩೨ |
| | | | ೨೮೫ | ವಲಕಮದಿನ್ನಿ | ೩೫ | ೩೫ |
| | | | ೨೮೬ | ಯದ್ದಲದೊಡ್ಡಿ | ೦೫ | ೦೫ |
| | | | | ಒಟ್ಟು | ೫೪೧ | ೫೪೮ |
| ೧೩ | ಶಿವಮೊಗ್ಗ | ಸೊರಬ | ೨೮೭ | ಸುಮನಹಳ್ಳಿ | ೭೩ | ೮೦ |
| | | | | ಒಟ್ಟು | ೭೩ | ೮೦ |
| ೧೪ | ತುಮಕೂರು | ಕೊರಟಗೆರೆ | ೨೮೮ | ಮರಚರ ಹಳ್ಳಿ | ೧೦ | ೧೬ |
| | | | ೨೮೯ | ತೀತ | ೧೦ | ೧೨ |
| | | ಚಿಕ್ಕನಾಯಕನ ಹಳ್ಳಿ | ೨೯೦ | ತರಬನಹಳ್ಳಿ | ೧೦ | ೧೪ |
| | | ತುಮಕೂರು | ೨೯೧ | ಬೂಗಡನ ಹಳ್ಳಿ | ೦೭ | ೧೧ |
| | | | | ಒಟ್ಟು | ೩೭ | ೫೩ |
| | | | | ಒಟ್ಟು | ೭೬೬೨ | ೮೭೪೩ |

**ಆಧಾರ ಗ್ರಂಥಗಳು**

ಅಮರೇಶ ಹೊಸಕೇರಿ, *ಕರ್ನಾಟಕ ಲಾಳಗೊಂಡರ ಸ್ಥಿತಿಗತಿ* (ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿನಾಂಕ ೨೫.೧.೧೯೮೩:೦೪)

ಕಲಬುರ್ಗಿ ಎಂ ಎಂ, ಸರ್ವಾಧ್ಯಕ್ಷರ ಭಾಷಣ, ೭ನೇ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ (ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು:೨೦೦೩:೦೩)

ಕೇಶಿರಾಜ, *ಕನ್ನಡ ನಿಘಂಟು ಸಂಪುಟ ೭* (ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು:೧೯೯೩).

ನಾಯಕ ಹಾ ಮಾ(ಸಂ), *ವಿಶ್ವಕೋಶ ಸಂಪುಟ ೬* (ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು:೧೯೭೩)

ಪುಟ್ಟಪ್ಪ ಕೆ ವಿ, *ಭಾರತದ ಭೂ ವಿಜ್ಞಾನ* (೧೯೬೪)

ಮೇತ್ರಿ ಕೆ ಎಂ, "*ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ: ಒಂದು ಸಮಾಜಶಾಸ್ತ್ರೀಯ ಅಧ್ಯಯನ*" (ಅಪ್ರಕಟಿತ ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ೧೯೯೪

ವೀರಭದ್ರಗೌಡ ಜಿ, *ಲಾಳಗೊಂಡ ಲಿಂಗಾಯತರು*, ಕಲಬುರ್ಗಿ ಎಂ ಎಂ, *ಲಿಂಗಾಯತ ಉಪಪಂಗಡಗಳ ದಾಖಲೀಕರಣ* (ಎಂ ಎಸ್ ವಿ ಏಜ್ಯುಕೇಶನ್ ಸೊಸೈಟಿ, ಎಂ ಎಸ್ ವಾಲಿ, ಇಳಕಲ್:೨೦೦೯).

ವಿಠಲಸಿಂಹ ಧೂರ್ವೆ, *ಮಹಾರಾಜ್ ಸಂಗ್ರಾಮ್ ಶಾಹ ಕೆ* (ಬಾವನ್ ಘಡ್, ಗೊಟುಲ ಪ್ರಕಾಶನ: ೧೯೯೦)

ವೆಂಕಟ ಸುಬ್ಬಯ್ಯ ಜಿ, *ಕನ್ನಡ ನಿಘಂಟು ಸಂಪುಟ ೩* (ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು: ೧೯೭೭)

ಶಾಂತವೀರಯ್ಯ ಹೀ ಚಿ, *ಶ್ರೀ ಗುರು ಸಿದ್ದರಾಮೇಶ್ವರ ೮೩೩ನೇ ಸ್ಮರಣ ಸಂಚಿಕೆ* (ಹರಿಹರ: ೨೦೦೬)

ಶಿವಸ್ವಾಮಿ, *ಕುರುಬ ಜನಾಂಗ–ಐತಿಹಾಸಿಕ ಸಂಕ್ಷಿಪ್ತ ಅಧ್ಯಯನ* (ಪವಿತ್ರ ಮುದ್ರಣ ಅಜ್ಜಂಪುರ: ೨೦೦೭).

ಶ್ರೀ ಸದಾಶಿವಯೋಗಿ (ಲೇ), *ಕಾಯಕಯೋಗಿ ಸಿದ್ಧರಾಮ ಜಯಂತಿ*, ವಿಶೇಷ ಲೇಖನ (೨೦೦೬:೯)

ಸದಾಶಿವಪ್ಪ ಕುಂ ಬಾ, *ನೊಣಬರು* (ಸಂ), ಡಾ ಎಫ್ ಟಿ ಹಳ್ಳಿಕೇರಿ, *ಹಾಲುಮತ ವ್ಯಾಸಂಗ–೨* (ಕನ್ನಡ ವಿಶ್ವವಿದ್ಯಾಲಯ, ಹಂಪಿ:೨೦೧೦)

ಸಿದ್ದರಾಮ ಶಾಸ್ತ್ರಿಗಳು, *ಶ್ರೀ ನಾಳಗೊಂಡೇಶ್ವರ ಪುರಾಣ ಕಾವ್ಯಂ* (ಶ್ರೀ ದೊಡ್ಡ ಬಸಪ್ಪ ಅಪ್ಪಾ, ಕಲಬುರ್ಗಿ, ಶ್ರೀ ಶಿಖರ ಮಠ:೧೯೫೫)

ಹೋರಿ ಎಂ ವಿ (ಲೇ), *ಗೊಂಡ ಸಂಸ್ಕೃತಿಯ ಕವಲುಗಳು ಮತ್ತು ಧೃವೀಕರಣ* (ಸಂ), ೮೩೮ನೇ ಶ್ರೀ ಗುರುಸಿದ್ಧರಾಮೇಶ್ವರ ಜಯಂತಿ ಮಹೋತ್ಸವ, (ಹರಿಹರ:೨೦೧೧)

Rassel R V, *The Tribes and Caste of Central Provinces of India* (New Delhi, Cosmo Publication:1975)

# ಅಧ್ಯಾಯ: ಮೂರು

## ಲಾಳಗೊಂಡರ ಸಾಮಾಜಿಕ ಚಲನೆ

# ಅಧ್ಯಾಯ: ಮೂರು

## ಲಾಳಗೊಂಡರ ಸಾಮಾಜಿಕ ಚಲನೆ

ಮಾನವನು ಸಮೂಹ ಅಥವಾ ಗುಂಪು ಜೀವನ ಪದ್ಧತಿಯನ್ನು ಅಳವಡಿಸಿಕೊಂಡ ಸಮಯದಲ್ಲಿ ಸಮಾಜವು ಸರಳವಾಗಿತ್ತು. ನಾಗರಿಕತೆಯ ಪ್ರಾರಂಭದ ಮಾನವನ ವಿಚಾರಗಳ ಸ್ವರೂಪವು ಅಪರಿಪಕ್ವವಾಗಿದ್ದವು. ನೈಸರ್ಗಿಕ ಕ್ರಿಯೆಗಳಾದ ಮಳೆ, ಮಹಾಪೂರ, ಭೂಕಂಪ, ಜ್ವಾಲಾಮುಖಿ ಇತ್ಯಾದಿಗಳೆಲ್ಲದರಲ್ಲಿಯ ಬದಲಾವಣೆಗಳು ಮಾನವನಿಗೆ ಭಯಪಡುವಂತೆ ಮಾಡಿ ಯಾವುದೋ ಒಂದು ಶಕ್ತಿ ಪ್ರಭಾವದಿಂದ ಈ ಅನಾಹುತಗಳು ಸಂಭವಿಸುತ್ತವೆ ಎಂದುಕೊಂಡು ಬಲವಾಗಿ ನಂಬಿ ಮಾನವ ಅವುಗಳ ಜೊತೆ ಹೊಂದಾಣಿಕೆ ಮಾಡಿಕೊಂಡು ಆರಾಧನೆ ಮಾಡಲು ಪ್ರಾರಂಭಿಸಿದನು. ಇದರಿಂದ ಪ್ರಕೃತಿ ಆರಾಧನಾ ಕ್ರಮ ಬೆಳೆಯಿತು. ಮಾನವನ ಅಜ್ಞಾನದಿಂದ ವಸ್ತು ಪೂಜೆ ಅಸ್ತಿತ್ವಕ್ಕೆ ಬಂತು, ಅನೇಕ ದೇವರುಗಳು ಸೃಷ್ಠಿಗೊಂಡವು. ಇದನ್ನೇ ಅಗಷ್ಟ್ ಕೋಮ್ಟ್ ರವರು 'ಕಾಲ್ಪನಿಕ ಹಂತ' (Theological stage) ಎಂದು ಕರೆದಿದ್ದಾರೆ. ಈ ಹಂತದಲ್ಲಿ ಮಾನವನು ಆಹಾರ ಸಂಗ್ರಹಣೆ, ಬೇಟೆಗಾರಿಕೆ ಮಾಡಿಕೊಂಡು ಜೀವನ ನಡೆಸುತ್ತಿದ್ದನು. ತನ್ನ ಸಂರಕ್ಷಣೆಗಾಗಿ ನಾಯಿಯನ್ನು ಸಾಕಿದ ಮತ್ತು ಸೌಮ್ಯ ಸ್ವಭಾವದ ಪ್ರಾಣಿಗಳನ್ನು ಕೃಷಿ ಉಪಯೋಗಕ್ಕೆ ಮೊದಲು ಬಳಸಿಕೊಳ್ಳತೊಡಗಿದನು. ಒಂದೆಡೆ ನೆಲೆ ನಿಂತು ಜೀವನ ಸಾಗಿಸಲು ಮುಂದಾದನು. ಆಗ ಸಮಾಜದ ಹುಟ್ಟು ಮತ್ತು ಸಮುದಾಯದ ಹುಟ್ಟು ಬೆಳೆಯಿತು. ನಾವು ನಮ್ಮವರು ಎಂಬ ಪರಿಕಲ್ಪನೆ ಬೆಳೆದು ಸಾಮಾಜಿಕ ರಚನೆಯಾಯಿತು. ಇದನ್ನೆ ರ್‍ಯಾಡ್ ಕ್ಲಿಫ್ ಬ್ರೌನ್ ರವರು ವ್ಯಕ್ತಿಗಳಿಗೆ ಸಾಮಾಜಿಕ ರಚನೆಯ ಭಾಗಗಳು ಎಂದು ಕರೆದಿದ್ದಾರೆ. ಹೀಗೆ ರಚನೆಗೊಂಡ ಸಮುದಾಯಗಳಲ್ಲಿ ಅವರದೇ ಆದ ಆಚಾರ–ವಿಚಾರ, ಸಾಮಾಜಿಕ ನಿಯಮಗಳನ್ನು ಕಟ್ಟಿ ಬೆಳಸಿಕೊಂಡರು. ಈ ಹಂತದ ಸಾಮಾಜಿಕ ಬೆಳವಣಿಗೆಯಲ್ಲಿ ಅನೇಕ ಸಮುದಾಯಗಳು ಒಂದೆಡೆ ನೆಲೆನಿಂತು ಪಶುಪಾಲನೆ ಮತ್ತು ವ್ಯವಸಾಯ ವೃತ್ತಿ ಪ್ರಾರಂಭಿಸಿದವು. ಆಗ ಆಸ್ತಿ ಪರಿಕಲ್ಪನೆ ಬೆಳೆಯಿತು ಇದರಿಂದ ಉಳಿಗಮಾನ್ಯ ಪದ್ಧತಿ ಮತ್ತು ಎಸ್ಟೇಟ್ ಪದ್ಧತಿಯಂತಹ ಆಚರಣೆಗಳು ಬೆಳೆದು ಬಂದವು. ಉಳ್ಳವರು ಮತ್ತು ಇಲ್ಲದವರು ಎಂಬ ಪರಿಕಲ್ಪನೆಗಳು ಬೆಳೆದು ಸಾಮಾಜಿಕ ಪ್ರಸ್ತುತತೆಯನ್ನು ಅವು ಎತ್ತಿ ಇಡಿದವು. ಈ ಕಲ್ಪನೆಗಳು ಭಾರತದಲ್ಲಿ ಯುರೋಪಿಯನ್ನರ ಆಗಮನದಿಂದ ಬಲವಾಗಿ ಬೆಳೆದು ನಿಂತವು. ಭಾರತದಲ್ಲಿದ್ದ

ವರ್ಣ ವ್ಯವಸ್ಥೆಗೆ ಪೂರಕವಾಗಿ ಇವುಗಳು ಆಡಳಿತವನ್ನು ನೆಡಸತೊಡಗಿದವು. ಹೀಗೆ ಸಮಾಜದಲ್ಲಿ ಏಣಿ-ಶ್ರೇಣಿ ಪರಿಕಲ್ಪನೆ ಬೆಳೆಯುತ್ತಾ ಬಂದಿತು. ಸ್ತರವಿನ್ಯಾಸವಿಲ್ಲದ ಸಮಾಜ ಇತಿಹಾಸ ಪೂರ್ವದಿಂದಲೂ ಕಾಣ ಸಿಗುವುದಿಲ್ಲ. ಅಂತೆಯೇ ಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ಪಿಟರಿಯಮ್ ಸೋರೋಕಿನ್‌ರವರು "ಸ್ತರವಿನ್ಯಾಸವಿಲ್ಲದ ಸಮಾಜ ಒಂದು ದಂತ ಕಥೆಯಾಗಿದೆ" ಎಂದಿದ್ದಾರೆ. ಕಾರ್ಲ ಮಾರ್ಕ್ಸನ ವರ್ಗ ಸಂಘರ್ಷವು ಈ ಸ್ತರವಿನ್ಯಾಸದ ಪರಿಕಲ್ಪನೆಯ ಫಲವಾಗಿದೆ ಎನ್ನಬಹುದು. ಸ್ತರವಿನ್ಯಾಸ ಹೊಂದಿದ ಸಮಾಜಗಳು ಸಂಕೀರ್ಣತೆಯಿಂದ ಕೂಡಿದ ಸಮಾಜಗಳಾದವು. ಆರಂಭದ ಸರಳ ಸಮಾಜ ಸಂಕೀರ್ಣ ಸಮಾಜಗಳಾದವು. ಯುರೋಪಿನಲ್ಲಿ ವರ್ಗ ವ್ಯವಸ್ಥೆಯಲ್ಲಿ ಸಮಾಜ ನಿರ್ಮಾಣವಾದರೆ, ಭಾರತದಲ್ಲಿ ಜಾತಿ ವ್ಯವಸ್ಥೆ ಆಧಾರದ ಮೇಲೆ ಸಮಾಜದ ಸ್ತರವಿನ್ಯಾಸ ರೂಪಗೊಂಡಿದೆ. ಭಾರತದಲ್ಲಿ ಬಹಳ ಆಳವಾಗಿ ಬೇರೂರಿರುವ ಮತ್ತು ಬಹು ದೀರ್ಘವಾದ ಹಿನ್ನೆಲೆಯನ್ನು ಹೊಂದಿರುವ ಸಾಮಾಜಿಕ ವ್ಯವಸ್ಥೆಯಾಗಿದೆ. ಮನುಸ್ಮೃತಿಯ ವರ್ಣ ನೀತಿಯಿಂದ ಹಿಡಿದು ಸಮಾಜದಲ್ಲಿ ತನ್ನದೇ ಆದ ನೆಲೆಯನ್ನು ಕಂಡು ಕೊಂಡು ಬಂದಿದೆ. ಜಾತಿ ಸ್ತರವಿನ್ಯಾಸದಲ್ಲಿ ಸಾಮಾಜಿಕ ಚಲನೆ ಅಷ್ಟೊಂದು ಸುಲಭವಲ್ಲ. ಆದ್ದರಿಂದ ಡಿ ಎನ್ ಮಜುಂದಾರ್ ಮತ್ತು ಟಿ ಎನ್ ಮದನ್ ರವರು "ಜಾತಿಯು ಒಂದು ನಿರ್ಬಂಧಿತ ಅಥವಾ ಮುಚ್ಚಿದ ಸಮೂಹವಾಗಿದೆ" ಎಂದಿದ್ದಾರೆ.

ಚಲನೆ ಸಮಾಜದ ಪ್ರಮುಖ ಲಕ್ಷಣ. ಸಾಮಾಜಿಕ ಚಲನೆ ವ್ಯಕ್ತಿ, ಸಮುದಾಯ, ಸಮಾಜದ ಹುಟ್ಟಿನಿಂದ ನಡೆದು ಬಂದ ಒಂದು ಪ್ರಕ್ರಿಯೆ. ಅದೇ ರೀತಿ ಎಲ್ಲಾ ಸಮುದಾಯ ಮತ್ತು ಸಮಾಜದಲ್ಲಿ ಅತೀ ವೇಗವಾಗಿ ಇಲ್ಲವೆ ನಿಧಾನಗತಿಯಲ್ಲಿ ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ಚಲನೆ ಕಂಡು ಬರುತ್ತದೆ.

ಸಾಮಾಜಿಕ ಚಲನೆ ವ್ಯಕ್ತಿಗತ, ಕುಟುಂಬ, ಕೌಟುಂಬಿಕ ವ್ಯವಸ್ಥೆ ಮುಂತಾದ ವಿಭಿನ್ನ ವರ್ಗಗಳಿಂದ ಸಮಾಜದಲ್ಲಿ ಹಂಚಿಕೆಯಾಗಿದೆ. ಸಾಮಾಜಿಕ ಚಲನೆ ಸಮಾಜದಲ್ಲಿ ಸಾಮಾಜಿಕ ಸ್ಥಾನಮಾನದ ಬದಲಾವಣೆಗೆ ಪೂರಕವಾಗಿ ಕೆಲಸ ಮಾಡುತ್ತದೆ. ಸಾಮಾಜಿಕ ಚಲನೆ, ಸಾಮಾಜಿಕ ಅಸಮಾನತೆ ಮತ್ತು ಸಾಮಾಜಿಕ ಸ್ತರ ವ್ಯವಸ್ಥೆಯೊಂದಿಗೆ ಸೇರಿಕೊಂಡಿದೆ. ಅಂದರೆ ಸ್ತರ ವ್ಯವಸ್ಥೆಯ ರೂಪ ಯಾವುದೇ ಇದ್ದರೂ ವ್ಯಕ್ತಿಗಳು ಅವರವರ ಅಂತಸ್ತು ಮತ್ತು ಪಾತ್ರಗಳ ಆಧಾರದ ಮೇಲೆ ಸಮಾಜದಲ್ಲಿ ಮೇಲಂತಸ್ತು ಮತ್ತು ಕೆಳಅಂತಸ್ತಿಗೆ ಚಲಿಸುವುದು ಸಾಮಾಜಿಕ ಅಸಮಾನತೆಗೆ ಕಾರಣವಾಗಬಹುದು. ಹೀಗೆ ಚಲಿಸುವ ಪ್ರಕ್ರಿಯೆ ವ್ಯಕ್ತಿಗಳಿಂದ ಮತ್ತು ಸಮೂಹಗಳಿಂದ ಯಾವಾಗಲೂ ನಡೆಯುತ್ತಲೇ ಇರುತ್ತದೆ. ಸಮಾಜವು ಗತಿ ಶೀಲವಾಗಿರುವಂತೆ ಅದರ ಸದಸ್ಯರು ಕೂಡ ಜಡವಸ್ತುಗಳಂತಿರದೇ ಕ್ರಿಯಾಶೀಲರಾಗಿರುತ್ತಾರೆ. ಹೀಗೆ ಸಾಮಾಜಿಕ ಚಲನೆ ನಡೆಯುತ್ತಿರುತ್ತದೆ.

ಪಿ ಎ ಸೋರೋಕಿನ್‌ರವರು ಚಲನೆಯನ್ನು ಪ್ರಮುಖವಾಗಿ ಎರಡು ಪ್ರಕಾರಗಳಲ್ಲಿ ತಿಳಿಸಿದ್ದಾರೆ. ಶೃಂಗ ಚಲನೆ ಅಥವಾ ಲಂಬ ಚಲನೆ ಮತ್ತು ಸಮನಾಂತರ ಚಲನೆ ಎಂದು ಎರಡು ಬಗೆಯ ಚಲನೆಯನ್ನು ವಿವರಿಸಿದ್ದಾರೆ. ಲಂಬ ಚಲನೆಯಲ್ಲಿ ಸಾಮಾಜಿಕ ಆರೋಹಣ ಮತ್ತು ಸಾಮಾಜಿಕ

ಅವರೋಹಣ ಎಂಬ ಎರಡು ವಿಧಗಳನ್ನು ತಿಳಿಸಿದ್ದಾರೆ. ಸಾಮಾಜಿಕ ಆರೋಹಣ ಸಮಾಜದಲ್ಲಿ ಮೇಲ್ಮುಖವಾಗಿ ಚಲಿಸುವ ಪ್ರಕ್ರಿಯೆಯಾಗಿದ್ದರೆ, ಸಾಮಾಜಿಕ ಅವರೋಹಣವು ಸಮಾಜದಲ್ಲಿ ಕೆಳಮುಖವಾಗಿ ವ್ಯಕ್ತಿಯ ಚಲನೆಯ ಪರಿಸ್ಥಿತಿಯನ್ನು ಸೂಚಿಸುತ್ತದೆ.

ಸಮನಾಂತರ ಚಲನೆಯು ಹೆಚ್ಚು ಕಡಿಮೆ ಒಂದೇ ಅಂತಸ್ತಿನ ಸ್ಥಾನದಿಂದ ಇನ್ನೊಂದು ಸ್ಥಾನಕ್ಕೆ ಚಲಿಸುವುದನ್ನು ಸಮನಾಂತರ ಚಲನೆ ಎನ್ನುವರು. ಡಬ್ಲ್ಯೂ ಪಿ ಸ್ಕಾಟ್‌ರವರ ಪ್ರಕಾರ, "ಒಬ್ಬ ವ್ಯಕ್ತಿ ಅಥವಾ ಒಂದು ಸಮೂಹವು ಒಂದು ಸಾಮಾಜಿಕ ವರ್ಗ ಅಥವಾ ಸ್ತರದಿಂದ ಇನ್ನೊಂದರತ್ತ ಚಲಿಸುವುದನ್ನು ಸಾಮಾಜಿಕ ಚಲನೆ ಎನ್ನಬಹುದು".

ಹೀಗೆ ಟ್ಯುಮಿನ್, ಸೋರೋಕಿನ್, ಲಿಪ್ಸೆಟ್ ಮತ್ತು ಬೆಂಡಿಕ್ಸ್, ಬ್ಲೌ ಡಂಕನ್, ಪೀಟರ್ ವರ್ಸ್ಲೆ, ಜೆ ಹೆಚ್ ಅಬ್ರಾಹಂ ಮುಂತಾದ ಸಮಾಜಶಾಸ್ತ್ರಜ್ಞರು ಸಾಮಾಜಿಕ ಚಲನೆಯ ಕುರಿತು ತಮ್ಮದೇ ಆದ ಹೇಳಿಕೆಯನ್ನು ಬೇರೆ ಬೇರೆ ಆಯಾಮಗಳಲ್ಲಿ ವಿವರಿಸಿದ್ದಾರೆ.

ಸಾಮಾಜಿಕ ಚಲನೆಯ ಪ್ರಶ್ನೆಯು ತೀರ ಸರಳವಾದುದೇನಲ್ಲ. ಸ್ತರವ್ಯವಸ್ಥೆಯ ಸ್ವರೂಪವನ್ನು ಅವಲಂಬಿಸಿರುವ ಸಾಮಾಜಿಕ ಚಲನೆಯು ವಿವಿಧ ಆಯಾಮಗಳನ್ನು ಹೊಂದಿದ್ದು ಬಹಳ ಗಹನವಾದ ಅಂಶಗಳನ್ನು ಒಳಗೊಂಡಿದೆ. ಸಾಮಾಜಿಕ ಚಲನೆಯ ವಿವಿಧ ರೂಪಗಳು, ಅದರ ೫ ಕಾರಣಗಳು, ಪರಿಣಾಮಗಳು ಮತ್ತು ತೊಡಕುಗಳು ಸಾಮಾಜಿಕ ಚಲನೆಯ ದಿಕ್ಕು ಮತ್ತು ಗತಿ, ಸಾಮಾಜಿಕ ಚಲನೆಯ ಪರವಾಗಿರುವ ಹಾಗೂ ವಿರೋಧಿಸುವ ವಿಚಾರ ತತ್ವಗಳು ಮುಂತಾದವು ಸಾಮಾಜಿಕ ಚಲನೆಯ ವಿಶ್ಲೇಷಣೆಯಲ್ಲಿ ಬಹಳ ಮಹತ್ವ ಪೂರ್ಣವಾದವುಗಳಾಗಿವೆ.

ಜನರ ಸಾಮಾಜಿಕ ಚಲನೆಗೆ ವಿಶೇಷವಾದ ಪ್ರಾಮುಖ್ಯವಿದೆ. ಕ್ರಿಯಾಶೀಲರಾದ ಜನ ಒಂದೆಡೆ ನಿಲ್ಲದೆ ತಮ್ಮ ಸಾಮಾಜಿಕ ಚೌಕಟ್ಟಿನೊಳಗೆ ಚಲಿಸುತ್ತಲೇ ಇರುತ್ತಾರೆ. ಈ ಚಲನೆಯ ರೂಪ–ಸ್ವರೂಪ, ಆಳ–ಅಗಲ, ವ್ಯಾಪ್ತಿ ಮತ್ತು ವೈಪರಿತ್ಯಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ.

"ಯಾವುದೇ ಜಾತಿ ಇರಲಿ, ಧರ್ಮವಿರಲಿ ಅಥವಾ ಭಾಷೆಯೇ ಇರಲಿ, ಸಾಂಸ್ಕೃತಿಕ ವಿನ್ಯಾಸಗಳಿರಲಿ ಪ್ರತಿಯೊಂದಕ್ಕೂ ನಿರ್ಧಿಷ್ಟ ಬೆಳವಣಿಗೆಯ ಒಂದು ನಿರ್ಧಿಷ್ಟ ಕ್ರಮದ ಅಭಿವ್ಯಕ್ತಿಗಳು ಇರುತ್ತವೆ. ಎಷ್ಟೋ ಪುರಾತನ ಬೇರುಗಳನ್ನು ಹೊಂದಿರುವಂತೆ ಬಾಸವಾಗುವ ಜಾತಿ ಕೂಡ ಜನಾಂಗೀಯತೆ ಮೂಲವಾದುದಲ್ಲ. ಆದರೆ ಒಂದು ಸಮಾಜದ ಉತ್ಪಾದನ ವಿನ್ಯಾಸದೊಳಗೆ ಒಂದು ಪಂಗಡವಾಗಿ ಏರ್ಪಟ್ಟು ಕಡೆಗೆ ಒಂದು ಸಾಂಸ್ಕೃತಿಕ ಗುರುತಿಸಿಕೊಳ್ಳುವಿಕೆಯನ್ನು ರೂಢಿಸಿಕೊಂಡ 'ಜಾತಿ' ಎಂಬುದು ಹೇಗೆ ಒಂದು ನಿರ್ಧಿಷ್ಟ ಜನಸಮುದಾಯದ ಸಾಮಾಜಿಕ ಸಂಘಟಿಸಿಕೊಳ್ಳಲು ಜನ ಸಮುದಾಯಗಳು ಆರಂಭಿಸುವಂತೆಯೇ, ಅದರ ಮೂಲ ಅವರವರ ಗುರುತಿಗೆ ಸಿಗದಷ್ಟು ಪ್ರಾಚೀನ ಕಾಲದಲ್ಲಿ ಮುಳುಗಿ ಹೋಗಿರಬಹುದು ಅಥವಾ ಒಂದು ನಿರ್ಧಿಷ್ಟ ವ್ಯಕ್ತಿ ಅಥವಾ ಘಟನೆಯಿಂದ

ಆರಂಭವಾಗಿರಬಹುದು".

"ಪ್ರಪಂಚದಲ್ಲಿ ಜೀವವಿಕಾಸದ ನಂತರ ಮನುಷ್ಯ ಎಂಬ ಪ್ರಾಣಿ ಇನ್ನಿತರ ಪ್ರಾಣಿಗಳಿಗಿಂತ ಭಿನ್ನವಾಗಿರಲು ಅವನಿಗಿರುವ ಏಕೈಕ ಆಧಾರ ಸಂಸ್ಕೃತಿ. ಮಾನವನೇ ಸಂಸ್ಕೃತಿಯ ಮೂಲ ನಿರ್ಮಾಪಕನಾಗಿದ್ದರಿಂದ ಅವನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತಾ ಬಂತೋ ಅಷ್ಟಷ್ಟು ಸಂಸ್ಕೃತಿಯು ವಿಕಾಸವಾಗುತ್ತಾ ಬಂತು ಆಗ ಅಂತಸ್ತು ಮತ್ತು ಜಾತಿ ಇವು ಮುಖ್ಯವಾಗಿರುವುದಿಲ್ಲ." (ಬಂಜಿಗೆರಿ ಜಯಪ್ರಕಾಶ್).

ಸಾಮಾಜಿಕ ಪರಿವರ್ತನೆ ಕುರಿತು ಅನೇಕ ಸಮಾಜಶಾಸ್ತ್ರಜ್ಞರ ಹೇಳಿಕಗಳನ್ನು ಗಮನಿಸಿದಾಗ ಸಾಮಾಜಿಕ ಪರಿವರ್ತನೆ ಹಾಗೂ ಚಲನೆ ಮತ್ತು ಬದಲಾವಣೆಗಳು ಸಾಮಾಜಿಕ ರಚನೆಗೆ ಕಾರಣವಾಗಿರುತ್ತವೆ. ಇವತ್ತಿನ ಸ್ಥಿತಿಗಳು, ನಾಳಿನ ಸ್ಥಿತಿಗಳಿಗೂ ವ್ಯತ್ಯಾಸವಿರುತ್ತವೆ.

ಸಾಮಾಜಿಕಚಲನೆ ನಿಧಾನಗತಿಯಲ್ಲಿ ನಡೆದರೂ ಸಹ ಅದರಲ್ಲಿನ ಬದಲಾವಣೆಗಳಿಂದ ಸಮಾಜದ ನಿರ್ಮಾಣ ಹಂತಹಂತವಾಗಿ ಕಂಡು ಬರುತ್ತದೆ. ಅವುಗಳ ಸ್ಥಿತಿಯಲ್ಲಿ ಅಂತರವನ್ನು ನಾವುಕಾಣುತ್ತೇವೆ. ಹೀಗೆ ಲಾಳಗೊಂಡರಲ್ಲಿಯೂ ಸಹ ಅನೇಕ ಬದಲಾವಣೆ ಕಂಡು ಬರುತ್ತವೆ. ಅವುಗಳನ್ನು ನಾವು ಪುಸ್ತಕಗಳಲ್ಲಿ ವಿವರಿಸಿದ ಲೇಖಕರೊಂದಿಗೆ ಸಾಮ್ಯತೆ ಮತ್ತು ಪರಾಮರ್ಶನದ ಮೂಲಕ ಕಾಣಬಹುದು.

೩.೧ ಲಾಳಗೊಂಡರ ಚಲನೆ

ಲಾಳಗೊಂಡ ಸಮುದಾಯದವರು ಮೂಲತಃ ಮಧ್ಯಪ್ರದೇಶ ಮತ್ತು ಆಂಧ್ರಪ್ರದೇಶದ ಗಡಿ ಭಾಗದಿಂದ ವಲಸೆ ಬಂದಿದ್ದಾರೆ. ಇವರು ಮೂಲತಃ ದ್ರಾವಿಡ ಸಮುದಾಯದವರು, ಲಾಳಗೊಂಡ ಸಮುದಾಯದವರು 'ಲಾಣ' ಪ್ರದೇಶದಿಂದ 'ಲಗಳಿ' ಹಾಕಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಕೃಷಿಗಾಗಿ ಬಂದವರಾದ್ದರಿಂದ ಇವರಿಗೆ ಈ ಹೆಸರು ಬಂದಿದೆ. ಲಾಣ ಪ್ರದೇಶವು ಗೊಂಡರ ಮೂಲ ನಿವಾಸವಾದ್ದರಿಂದ ಇವರಿಗೆ ಈ ನಾಮಾಂಕಿತ ಬಂದಿದೆ. ಇವರ ಮೂಲ ವೃತ್ತಿ ಪಶುಪಾಲನೆ ಮತ್ತು ಕೃಷಿ. ಇವರು ಆಂಧ್ರದ ಭಾಗವನ್ನು ಸುತ್ತುವರೆದು ತುಂಗಭದ್ರಾ, ಕೃಷ್ಣಾನದಿ ಪಾತ್ರವನ್ನು ಬಳಸಿ ಉತ್ತರ ಕರ್ನಾಟಕದ ಕಡೆ ಪ್ರಯಾಣ ಬೆಳೆಸಿರುವ ಸಾಧ್ಯತೆಗಳಿದ್ದು, ವಿಜಯ ನಗರ ಕೆಳದಿ ಸಾಮ್ರಾಜ್ಯಗಳಲ್ಲಿ ತಮ್ಮ ಅಸ್ಥಿತ್ವ ಕಂಡುಕೊಂಡು ಅದರ ಪತನದ ನಂತರ ಬೆಂಗಳೂರು ಗ್ರಾಮಾಂತರ, ಶಿವಮೊಗ್ಗ, ಕೊಪ್ಪಳ, ಬಳ್ಳಾರಿ ಹೀಗೆ ಮುಂತಾದ ಕಡೆ ನೆಲೆಯೂರಿರುವರು.

ಆರ್ಯರು ಉತ್ತರ ಭಾರತಕ್ಕೆ ಬಂದಾಗ ಅನೇಕ ಸಾಮ್ರಾಜ್ಯಗಳು ರಾಜರಿಂದ ಆಳ್ವಿಕೆಗೆ ಒಳಪಟ್ಟಿದ್ದವು. ಮಧ್ಯಏಷ್ಯಾದಿಂದ ಬಂದ ಆರ್ಯರು ಆಕ್ರಮಣದ ಮೂಲಕ ಭಾರತೀಯ ಸಮುದಾಯದ ಮೇಲೆ ಬಹಳ ಬಲವಾದ ಪೆಟ್ಟು ನೀಡಿದವು. ಇದರಿಂದಾಗಿ ಉತ್ತರಭಾರತದ ಅನೇಕ ಬುಡಕಟ್ಟುಗಳಾದ ಶಬರ, ವ್ಯಾದ, ಗೊಂಡ, ಮುಂಡ, ಬಿಲ್ಲವ ಮುಂತಾದ ಬುಡಕಟ್ಟುಗಳು ದಕ್ಷಿಣಭಾರತದ ವಿಂದ್ಯಪರ್ವತ, ಸಾತ್ಪುರ, ಪಶ್ಚಿಮ ಮತ್ತು ಪೂರ್ವ ಘಟ್ಟಗಳ ಅರಣ್ಯ ಪ್ರದೇಶಗಳಲ್ಲಿ ನೆಲೆಯೂರಿದರು. ಹೀಗೆ

ಬಂದು ನೆಲೆಯೂರಿದ ಸಮುದಾಯಗಳು ಅಲ್ಲಿದ್ದ ರಾಜರುಗಳ ಅಧೀನದಲ್ಲಿ ತಮ್ಮ ಸೇವೆಯನ್ನು ಮಾಡತೊಡಗಿದರು. ಇನ್ನೂ ಕೆಲವು ಸಮುದಾಯಗಳು ತಮ್ಮಲ್ಲಿ ಒಬ್ಬ ನಾಯಕನನ್ನು ಆರಿಸಿಕೊಂಡು ಆಡಳಿತ ನೆಡಸತೊಡಗಿದವು. ಇನ್ನುಳಿದವು ಕೃಷಿ ಹಾಗೂ ಪಶುಪಾಲನೆ ಮತ್ತು ತಮ್ಮ ತಮ್ಮ ಅನುವಂಶಿಕ ವೃತ್ತಿಯಲ್ಲಿ ಪ್ರವೃತ್ತರಾದರು. ಈ ವೃತ್ತಿಗಳು ಅನುವಂಶಿಕವಾಗಿ ಬಂದಿದ್ದರಿಂದ ಅವುಗಳೇ ಮೂಲ ಪ್ರವೃತ್ತಿಗಳಾಗಿ ಮೇಲುಕೀಳು ಎಂಬ ವರ್ಣ ವ್ಯವಸ್ಥೆ ಅಸ್ಥಿತ್ವಕ್ಕೆ ಬಂದಿತು. ಇದೇ ಮುಂದೆ ಜಾತಿಯಾಗಿ ಬೆಳೆದದ್ದನ್ನು ಕಾಣಬಹುದು. ಈ ಸಂದರ್ಭದಲ್ಲಿ ಕರ್ನಾಟಕದಲ್ಲಿ ಸಿಂಧರು ಕ್ರಿ ಶ ೨೯೦-೧೨೫೦ ರವರೆಗೆ ದಕ್ಷಿಣಭಾರತದ ಎಲ್ಲಾ ರಾಜವಂಶಗಳಿಗೆ ಬೆಂಗಾವಲಾಗಿ ಆಳಿದ್ದು ಕದಂಬ ಮಯೂರವರ್ಮನ ಸಂಬಂಧಿಗಳೆಂದು ದಾಖಲಾಗಿದೆ(ಸೂಗಯ್ಯ ಹಿರೇಮಠ:೧೯೯೬:೪೧). ಆದರೆ ಜಾತಿಯು ಕಟುವಾಗಿ ಬೆಳೆದದ್ದು ಗುಪ್ತರ ಆಳ್ವಿಕೆಯಲ್ಲಿ, ಇದರ ಪ್ರಭಾವವಾಗಿ ಸಾಮಾಜಿಕ ಅಸಮಾನತೆ ಬೆಳೆಯಿತು. ಕೆಳವರ್ಗದ ಸಮುದಾಯಗಳು ಅತಂತ್ರ ಸ್ಥಿತಿಗೆ ಒಳಗಾದವು. ಸಾಮಾಜಿಕವಾಗಿಯು ನಾಡಿನ ಸ್ಥಿತಿ ತೀರಾ ಶೋಚನೀಯವಾಗಿತ್ತು ವರ್ಣ ವ್ಯವಸ್ಥೆಯು ಜಾತಿ ಪದ್ಧತಿಗೆ ಕಾರಣವಾಗಿ ಜಾತಿ-ಜಾತಿಗಳ ನಡುವಿನ ಅಸಮಾನತೆ ಮೇರೆ ಮೀರಿತ್ತು. ಉಚ್ಚ-ನೀಚ, ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ, ಪವಿತ್ರ-ಅಪವಿತ್ರ ಎಂಬ ವ್ಯತ್ಯಾಸಗಳು ಶೋಷಣೆಗೆ ಮತ್ತು ಹಿಂಸಾಚಾರಕ್ಕೆ ಕಾರಣವಾಗಿದ್ದವು. ಜಾತಿವ್ಯವಸ್ಥೆಯಲ್ಲಿ ಉದ್ಯೋಗಗಳ ಆಯ್ಕೆಯಲ್ಲಿ, ವಿಧಿ-ನಿಷೇದಗಳು, ಶೈಕ್ಷಣಿಕ ಅವಕಾಶಗಳು ಉನ್ನತ ಜಾತಿಯವರಿಗೆ ಸೀಮಿತವಾಗಿದ್ದವು. ಹೀಗೆ ವೈಧಿಕ ಧರ್ಮದ ಕಟುವಾದ ದಬ್ಬಾಳಿಕೆ ಸಮಾಜಿಕ ಅಶಾಂತಿನ್ನುಂಟು ಮಾಡಿತು. ಆಗ ಅವತರಿಸಿದ ಬಸವಣ್ಣ, ಅಲ್ಲಮ ಪ್ರಭುವಿನಂತಹ ಹಲವಾರು ಸಮಾಜ ಸುಧಾರಕರ ಫಲವಾಗಿ ಶೈವ, ವೀರಶೈವ, ಬೌದ್ಧ, ಜೈನ, ಸಿಖ್ ಮುಂತಾದ ಮತಗಳು ಜನಿಸಿದವು. ಬಿಜ್ಜಳನ ಆಸ್ಥಾನದಲ್ಲಿದ್ದ ಬಸವಣ್ಣ ತನ್ನ ಪ್ರಭಾವದಿಂದಾಗಿ ಸಮಾಜದಲ್ಲಿದ್ದ ಅನೇಕ ಕೆಳ ವರ್ಗಗಳು ಅವನ ಅನುಯಾಯಿಗಳಾದರು. ಹೀಗೆ ಬಂದವರಲ್ಲಿ ಲಾಳಗೊಂಡ ಸಮುದಾಯವು ಒಂದು. According to sir Arthur miles "whatever legend say about Bsava the fact is pretty clear that he was the first Indian free thinker. He might be called the Martin Luther king of india" in the book of 'The land of Lingam'.

ಲಾಳಗೊಂಡ ಸಮುದಾಯವು ಬಸವಣ್ಣನ ಪ್ರಭಾವದಿಂದ ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆಯಿತು. ನಂತರ ಹೈದರಾಬಾದ್ ಕರ್ನಾಟಕದ ಅರಸರುಗಳಲ್ಲಿ ಗೌಡ್ಕಿಯನ್ನು ಪಡೆದು ಊರ ಯಜಮಾನಿಕೆಯನ್ನು ಪಡೆದುಕೊಂಡವು. ಗೌಡ, ನಾಡಗೌಡ, ಸರನಾಡಗೌಡರಾಗಿ ಕಾರ್ಯ ನಿರ್ವಹಿಸುತ್ತಿದ್ದರು ಎಂದು ಹೆಳವರು ಹೇಳುತ್ತಾರೆ. ಹೀಗಾಗಿ ಇವರುಗಳ ಮನೆತನಕ್ಕೆ ಈ ಹೆಸರು ಬಂದಿದೆ. ಈ ಕುರಿತು ಯಾವುದೇ ಲಿಖಿತ ದಾಖಲೆಗಳಿಲ್ಲ. ಭಾರತಕ್ಕೆ ಯುರೋಪಿಯನ್ನರ ಆಗಮನವು ಭಾರತದ ಚರಿತ್ರೆಯಲ್ಲಿ ಬಹುದೊಡ್ಡ ಮೈಲಿಗಲ್ಲು ಎಂದರೆ ತಪ್ಪಾಗಲಿಕ್ಕಿಲ್ಲ. ಕಾರಣ ವ್ಯಾಪಾರಕ್ಕಾಗಿ ಬಂದ ಇವರು ಇಲ್ಲಿನ ಅರಾಜಕತೆ ಮತ್ತು ಸಂಪತ್ತು ರಾಜಕೀಯವಾಗಿ ಹಿಡಿತ ಸಾಧಿಸುವಂತೆ

ಪ್ರೇರೇಪಿಸುತ್ತದೆ. ಇದರಿಂದಾಗಿ ಬಹು ಚಾಣಾಕ್ಷರಾದ ಬ್ರಿಟಿಷರು ಭಾರತೀಯ ರಾಜರ ಅಧಿಕಾರವನ್ನು ಕಸಿದುಕೊಳ್ಳುವಲ್ಲಿ ಯಶಸ್ವಿಯಾದರು. ಹೀಗೆ ರಾಜರು ತಮ್ಮ ಆಳ್ವಿಕೆಯನ್ನು ಕಳೆದುಕೊಂಡರು. ಬ್ರಿಟಿಷರು ತಮ್ಮ ಕಂದಾಯ ವಸೂಲಿಗೆ ಗ್ರಾಮಗಳ ನಿಯಂತ್ರಣದಲ್ಲಿಡಲು ಊರ ಗೌಡರನ್ನು ಬಳಸಿಕೊಂಡರು. ಆದರೆ ೧೭ ನೇ ಶತಮಾನದಲ್ಲಿ ಮೈಸೂರು ಪ್ರಾಂತದಲ್ಲಿ ಹಿಮ್ಮಡಿ ಕೃಷ್ಣರಾಜ ಒಡೆಯರ ಮರಣದ ನಂತರ ಹೈದರಾಲಿ ಮೈಸೂರಿನ ಮಹಾದಂಡನಾಯಕನಾಗಿದ್ದ ನಂತರ ಅವನ ಮಗ ಟಿಪ್ಪು ಸುಲ್ತಾನ್ ಮೈಸೂರನ್ನು ಆಡಳಿತಕ್ಕೆ ಒಳಪಡಿಸಿಕೊಂಡನು. ತನ್ನ ಮತಾಂದತೆಯ ಧೋರಣೆಯಿಂದಾಗಿ ಆಗಿನ ಕಾಲದ ಸಮುದಾಯಗಳಿಗೆ ಬಗೆಬಗೆಯ ಶಿಕ್ಷೆಗಳನ್ನು ಕೊಟ್ಟು ಜೀವ ತೆಗೆಯುತ್ತಿದ್ದನು ಎಂದು ಹೇಳಲಾಗಿದೆ. ಮತೀಯನಾಗಿದ್ದ ಟಿಪ್ಪು ಅನೇಕ ಊರಿನ ಹೆಸರುಗಳನ್ನು ಬದಲಿಸಿದ್ದಾನೆ ಹಾಗೂ ತನ್ನ ಆಸ್ತಾನದಲ್ಲಿದ್ದ ದಿವಾನ ಪೂರ್ಣಯ್ಯ ಒಬ್ಬನನ್ನು ಬಿಟ್ಟರೆ ಬೇರೆ ಸಮುದಾಯ(ಜಾತಿ)ದವರು ಹುದ್ದೆಯಲ್ಲಿ ಇರಲಿಲ್ಲ(ವಿಲಿಯಂ ಲೋಗನ್: ಮಲ್ಬಾರ್ ಮ್ಯಾನುಯಲ್). ಹೀಗಾಗಿ "ಟಿಪ್ಪುವಿನ ಆಡಳಿತದಲ್ಲಿ ಲಾಳಗೊಂಡರು ಗೌಡ, ನಾಡಗೌಡ ಸರನಾಡಗೌಡದಂತಹ ಹುದ್ದೆಗಳನ್ನು ಕಳೆದುಕೊಂಡರು"(ಕೆ ಎಮ್ ಮೇತ್ರಿ:೮೫). ಆದರೆ ಇವರ ಮನೆತನದ ಹೆಸರುಗಳು ಮಾತ್ರ ಇಂದಿಗೂ ಮುಂದುವರೆದುಕೊಂಡು ಬಂದಿವೆ. ಇದಕ್ಕೆ ಪುಷ್ಟಿಕರವಾಗುವಂತೆ ಕೆಳಗಿನ ರಾಜಮನೆತನಗಳ ಇತಿಹಾಸವನ್ನು ಹಿರೇಮಲ್ಲೂರು ಈಶ್ವರನ್ ರವರು ತಿಳಿಸಿದ್ದಾರೆ.

"ಸಾತವಾಹನರ ಆಳ್ವಿಕೆ(೧ರಿಂದ ೩ನೇಯ ಶತಮಾನ)ಯಿಂದ ಮೊದಲುಗೊಂಡು ಹೈದರಾಲಿ ಮತ್ತು ಟಿಪ್ಪು ಸುಲ್ತಾನನವರೆಗೂ ಕನ್ನಡನಾಡನ್ನು ಆಳಿದ ಎಲ್ಲಾ ರಾಜ ಮನೆತನಗಳು ಬೌದ್ಧ ಜೈನ ಹಾಗೂ ಬ್ರಾಹ್ಮಣ ಧರ್ಮಗಳಿಗೆ ಅವರ ಸಂಸ್ಕೃತಿಯ ಪ್ರಸಾರಕ್ಕೆ ನೇರವಾಗಿ ಅನುವು ಮಾಡಿಕೊಟ್ಟಿವೆ ಶಾತವಾಹನರು ಬೌದ್ಧ ಧರ್ಮಕ್ಕೆ, ಕದಂಬರು ಮತ್ತು ಗಂಗರು ಜೈನ ಧರ್ಮಕ್ಕೆ ಬನವಾಸಿ ಕದಂಬರು, ಬಾದಾಮಿಯ ಚಾಲುಕ್ಯರು(೬–೮ ನೇಯ ಶತಮಾನ), ಕಲ್ಯಾಣದ ಚಾಲುಕ್ಯರು(೧೦–೧೨ನೇಯ ಶತಮಾನ) ಮತ್ತು ಮೈಸೂರಿನ ಅರಸರು(೧೭–೧೮ ನೇ ಶತಮಾನ) ಬ್ರಾಹ್ಮಣ ಧರ್ಮ ಮತ್ತು ಸಂಸ್ಕೃತಿಯ ಪ್ರಸಾರಕ್ಕೆ ವಿಶೇಷವಾದ ಪೋಷಣೆಯನ್ನು ನೀಡಿದ್ದಾರೆ. ಆದರೆ ಅರಮನೆಯ ನೆರವನ್ನೆ ಕಾಣದ ಲಿಂಗಾಯತರು ಕಾಲಕಾಲಕ್ಕೆ ರಾಜಮನೆತನಗಳ ಹಿಂಸೆಗೆ ಹೀಡಾಗಿದ್ದಾರೆ. ಕಲುಚೂರಿಯ ಆಳ್ವಿಕೆಯ ಕೊನೆಯ ಅಧಿಪತಿಯಾದ ಬಿಜ್ಜಳನಿಂದ ಕ್ರಿ ಶ ೧೧೬೬ನೇಯ ಇಸವಿಯ ಸುಮಾರು ಬಸವಣ್ಣನ ಅಸಂಖ್ಯಾತ ಅನುಯಾಯಿಗಳು ಕೊಲೆಯಾದುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಆಳಿದ ಮೈಸೂರಿನ ಚಿಕ್ಕದೇವರಾಯರು(೧೬೭೮–೧೭೦೪) ವೈಷ್ಣವ ಧರ್ಮದ ಮತಾವಲಂಬಿಯಾಗಿದ್ದಂತೆ ಲಿಂಗಾಯುತ ಧರ್ಮದ ದ್ವೇಷಿಯು ಆಗಿದ್ದನೆಂದೂ, ಆತನಿಂದ ೪೦೦ ಜಂಗಮರ ಕೊಲೆ ಮತ್ತು ೭೦೦ ಲಿಂಗಾಯುತ ಮಠಗಳು ನೆಲಸಮವಾದವೆಂಬ ಬಗೆಗೆ ಉಲ್ಲೇಖವಿದೆ. ಲಿಂಗಾಯುತರಾಗಿದ್ದ ಕೆಳದಿಯ ನಾಯಕರು, ಪಾಳೇಗಾರರು(೧೫೦೦–೧೭೬೩) ಅವರ ಕಾಲದಲ್ಲಿ ಅಪವಾದಕ್ಕೆಂಬಂತೆ ಲಿಂಗಾಯುತ ಸಂಸ್ಕೃತಿಯ

ಪೋಷಣೆಗೆ ಅವಕಾಶ ದೊರೆಯಿತು"(ಹಿರೇಮಲ್ಲೂರು ಈಶ್ವರನ್:೧೯೯೭:೧೮) ಎಂದು ಉಲ್ಲೇಖಿಸಿದ್ದಾರೆ.

**೩.೨ ರಾಜಗೊಂಡ**

ಗೊಂಡ, ರಾಜಗೊಂಡರು ಗೊಂಡಾರಣ್ಯದ ಮೂಲಿಗರು ದ್ರಾವಿಡ ಮೂಲದ ಗೊಂಡಿ ಇವರ ಮಾತೃಭಾಷೆ. ರಾಜಪರಂಪರೆಯ ಇತಿಹಾಸವನ್ನು ಹೊಂದಿರುವುದರಿಂದ ಇವರಿಗೆ ರಾಜಗೊಂಡ ಎಂಬ ಹೆಸರು ಬಂದಿತು. ಪ್ರಕೃತಿಯ ಆರಾಧಕರು ಹಾಗೂ ನಿಸರ್ಗದ ನಿಗೂಢ ಜ್ಞಾನವನ್ನು ಹೊಂದಿರುವ ಇವರು ನಾಟಿ ವೈದ್ಯರಾಗಿ, ರಾಜವೈದ್ಯರಾದರು. ಮುಸ್ಲಿಮರ ಆಕ್ರಮಣದ ನಂತರ ರಾಜಸತ್ತೆಯನ್ನು ಕಳೆದುಕೊಂಡ ನಂತರ ವೈದ್ಯಕೀಯ ಸೇವೆಯಲ್ಲಿ ನಿರತರಾಗಿ ರಾಜ ವೈದ್ಯರಾದರು. "ರಾಜಗೊಂಡರು ಗೊಂಡರಿಂದ ಬಹುಹಿಂದೆಯೇ ಕವಲೊಡೆದ ಒಂದು ಬುಡಕಟ್ಟು. ಇದೂವರೆಗೆ ಮಧ್ಯಭಾರತದ ೫೨ ಗಢ(ಕೋಟೆ)ಗಳನ್ನು ಆಳಿದ ಇತಿಹಾಸವಿದೆ. ಕರ್ನಾಟಕದ ಬೀದರ್, ಹರಿಹರ ಹಾಗೂ ಬೆಂಗಳೂರಿನಲ್ಲಿ ಇತ್ತೀಚ್ಚೆಗೆ ನೆಲೆನಿಂತಿರುವ ಅಲೆಮಾರಿ ಆದಿವಾಸಿ ರಾಜವೈದ್ಯರು ತಮ್ಮನ್ನು ರಾಜಗೊಂಡರೆಂದು ಮತ್ತು ಕೊಯ್ತುರ್ ಗೊಂಡರೆಂದು ಹೇಳಿಕೊಳ್ಳುವರು. ಗೊಂಡ ಹಾಗೂ ರಜಪುತರ ಸಂಗಮವೇ ರಾಜಗೊಂಡರೆಂಬುದು ಇತಿಹಾಸದ ಪುಟಗಳಿಂದ ವೇದ್ಯವಾಗುವುದು. ರಾಜಗೊಂಡರಿಗೆ ವೈದ್ಯಕೀಯ ಉಪಚಾರ ನೀಡಲು ಮುಂದೆ ಬಂದ ಒಂದು ಅನುಭವೀ ಗೊಂಡರ ಗುಂಪೇ ಕಾಲಾಂತರದಲ್ಲಿ ರಾಜವೈದ್ಯರಾಗಿ ರಾಜಗೊಂಡರೆನಿಸಿಕೊಂಡಿರುವ ಸಾಧ್ಯತೆಗಳಿವೆ. ಮುಸ್ಲಿಂ ಅರಸರ ಆಕ್ರಮಣದಿಂದಾಗಿ ಇವರು ಅನಾಥರಾಗಿ ತಮ್ಮ ಉದರ ಪೋಷಣೆಗಾಗಿ ಆಯುರ್ವೇದದ ವ್ಯಾಪಾರದೊಂದಿಗೆ ತಮ್ಮ ಅಲೆಮಾರಿ ಜೀವನ ದೇಶಾಂತರಗೊಳಿಸಿದ್ದಾರೆ" (ಮೇತ್ರಿ ಕೆ ಎಂ:೨೦೦೮:೨೧).

ಭಾರತದ ಬುಡಕಟ್ಟುಗಳಲ್ಲಿ ಅತ್ಯಧಿಕ ಸಂಖ್ಯೆಯಲ್ಲಿರುವವರೇ ಗೊಂಡರು. ವಿಂಧ್ಯ ಸಾತ್ಪುರ ಪರ್ವತ ಶ್ರೇಣಿಯಿಂದ ಗೋದಾವರಿ ಜಲಾನಯನ ಭೂಪ್ರದೇಶದವರೆಗೆ, ಉತ್ತರಪ್ರದೇಶ ಮತ್ತು ಬಿಹಾರದಿಂದ ಆಂಧ್ರಪ್ರದೇಶ, ಕರ್ನಾಟಕದವರೆಗೆ ಮತ್ತು ಮಹರಾಷ್ಟ್ರದಿಂದ ಒರಿಸ್ಸಾದವರೆಗೆ ಇವರು ಪಸರಿಸಿಕೊಂಡಿದ್ದಾರೆ. ಇವರು ಆಳಿದ ೫೨ ಕೋಟೆಗಳು ಇತಿಹಾಸ ಸಾಕ್ಷಿಯಾಗಿರುವವು. ದ್ರಾವಿಡ ಮೂಲದ ಗೊಂಡೀ ಇವರ ಮಾತೃಭಾಷೆಯಾಗಿರುವುದು. ಅಲ್ಲದೆ ಹಿಂದಿ, ಮರಾಠಿ, ಕನ್ನಡ, ತೆಲುಗು ಇತ್ಯಾದಿ ಪ್ರಾದೇಶಿಕ ಭಾಷೆಗಳನ್ನು ಬಳಸುವರು. ಗೊಂಡವಾನ ಇವರ ಹೃದಯ ಸ್ಥಾನವಾಗಿರುವುದು ಇವರಲ್ಲಿ ೬೦ ಕ್ಕೂ ಹೆಚ್ಚಿನ ಒಳಪಂಗಡಗಳಿವೆ. ೧೯೯೧ರ ಜನಗಣತಿಯ ಪ್ರಕಾರ ಭಾರತದಲ್ಲಿಯ ಇವರ ಜನಸಂಖ್ಯೆ ೯೩,೧೯,೭೫೫. ಕರ್ನಾಟಕದಲ್ಲಿ ೨೦೦೧ ರ ಜನಗಣತಿಯ ಪ್ರಕಾರ ಇವರ ಜನಸಂಖ್ಯೆ ೧,೩೬,೭೦೦ ಇರುವುದಾಗಿ ದಾಖಲಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ ರ ಸಮೀಕ್ಷೆಯ ಪ್ರಕಾರ ೩೪೫ ಕುಟುಂಬಗಳಲ್ಲಿ ೧೨೬೨ ಜನಸಂಖ್ಯೆಯನ್ನು ಹೊಂದಿರುವ

ಕರ್ನಾಟಕದ ಅಲೆಮಾರಿ ರಾಜಗೊಂಡರು ಗೊಂಡರಲ್ಲಿಯೇ ಅಲ್ಪಸಂಖ್ಯಾತರು.

**೩.೩ ಗೊಂಡ**

ಗೊಂಡ ಪದದ ಒಳಾರ್ಥವನ್ನು ಒಡೆದು ನೋಡಿದಾಗ ಅದರ ಅರ್ಥ ಸ್ಪಷ್ಟವಾಗುವುದು. ಅದರ ಮೂಲ 'ಗೋ+ಅ' ಎಂಬೆರಡಕ್ಷರಗಳಿಂದ ಉಂಟಾಗಿರಬಹುದು. ಕನ್ನಡ ನಿಘಂಟುಗಳಲ್ಲಿ 'ಗೋ' ಎಂದರೆ ಗೋವು, ಭೂಮಿ, ಬೆಟ್ಟ ಮತ್ತು 'ಅ' ಎಂದರೆ ಆರ್ಯ ದ್ರಾವಿಡ ವರ್ಣಮಾಲೆಯ ಮೊದಲನೆ ಅಕ್ಷರ (ಆಡು), ಬ್ರಹ್ಮ, ವಿಷ್ಣು, ಶಿವ ಇತ್ಯಾದಿ ಅರ್ಥಗಳಿವೆ(ಪಂಡಿತ ಕವಲಿ:೧೯೮೯:೧). ಅಜ(ಆಡು ಅಥವಾ ಮೇಕೆ, ಮೇಷ ಅಥವಾ ಕುರಿ) ಎಂಬರ್ಥಗಳೂ ಇವೆ. ಗೋವು(ದನ)ಗಳ ಪಾಲಕರು ಗೋಪಾಲಕರು ಅಥವಾ ದನ ಗಾರರಾದರೆ, ಅಜ(ಕುರಿ)ಗಳ ಪಾಲಕರು ಅಜಪಾಲಕರು ಅಥವಾ ಕುರಿಗಾರರು ಆಗಿರುವರು, ಕುರಿಗಾರರು, ದ(ಧ)ನಗಾರರು ಬೇರೆಯಲ್ಲ. ಅವರು ಮೂಲತ: ಪಶುಪಾಲಕರೆಂದರ್ಥ. "ಗೋ" ಎಂದರೆ 'ಭೂಮಿ' ಅದರಂತೆ 'ಕುರು' ಎಂದರೂ ಭೂವಿಷೇಶ ಆದುದರಿಂದ ಗೋಪನೆಂದರೂ ಭೂಪತಿ ಕುರು(ಂ)ಬನೆಂದರೂ ಭೂಪ" (ಶಂಬಾ ಜೋಶಿ, ೧೯೬೬, ೩೧).

'ಗೋ' ಎಂದರೆ 'ಭೂಮಿ' ಅದು ಗೋಲಾಕಾರವಾಗಿದೆ 'ಅ' ಎಂದರೆ 'ಆಡು' ಅಥವಾ 'ಕುರಿ' ಅವುಗಳ ಹಿಕ್ಕಿಯು ಗೋಲ (ಅಂಡ) ಆಕಾರವಾಗಿದ್ದು ಭೂಮಿಯ ಪ್ರತಿ ರೂಪವಾಗಿದೆ. ಹೀಗೆ ಗೋ+ಅಂಡ>ಗೊಂಡ ಎಂದು, ವಿಕಸಿಸಿರಲು ಸಾಧ್ಯತೆಗಳಿವೆ.

'ಗೊಂಡಾರಣ್ಯ' ಈ ಪದದಲ್ಲಿ ಭಿನ್ನವಾಸಿಯ ಎರಡು ಶಬ್ಧಗಳಿವೆ. ಅವು ಗೊಂಡ ಮತ್ತು ಅರಣ್ಯ. ಒಂದು ದೇಶಿಯ ನುಡಿ ಇನ್ನೊಂದು ಸಂಸ್ಕೃತ ಪದ, "ಗೊಂಡಾರಣ್ಯ" ಎಂಬೀಬಗೆಯ ಪದ. ಪದ ಪ್ರಯೋಗವು ಇವೆರಡೂ ಜನ ಒಗ್ಗಿಕೊಂಡು ಒಡಗೂಡಿ ಬಾಳತೊಡಗಿದುದರ ಸಂಕೇತವಾಗಿದೆ.

ಗೊಂಡರು ಗೊಂಡಾರಣ್ಯದ ಮೂಲ ನಿವಾಸಿಗರು. ಪೃಥ್ವಿಯ ಐದು ಖಂಡಗಳಿಗೆ ಗೊಂಡವಾನ ಖಂಡಗಳೆಂದು ಪರಿಚಯಿಸುವರು. ಅವು ೧)ಏಷ್ಯಾ, ೨)ಆಫ್ರಿಕಾ, ೩) ದಕ್ಷಿಣಅಮೇರಿಕಾ, ೪)ಅಂಟಾರ್ಟಿಕ ಮತ್ತು ೫) ಆಸ್ಟ್ರೇಲಿಯಾ. ಗೊಂಡವಾನದ ಆದಿಜನಾಂಗವು ಗೊಂಡರು. ಇವರು ಬೇಟೆಗಾರಿಕೆ, ಪಶುಪಾಲನೆಯಿಂದ ನಿಧಾನವಾಗಿ ಕೃಷಿಯತ್ತ ಕೂಡಿಕೊಳ್ಳುತ್ತಿದ್ದಾರೆ.

ಒಂದು ಸಮುದಾಯವು ಇನ್ನೊಂದು ಸಮುದಾಯದಿಂದ ವಿಘಟನೆ ಹೊಂದಲು ಅಥವಾ ಹೊರಗುಳಿಯಲು ಸಾಂಸ್ಕೃತಿಕ ಮತ್ತು ರಾಜಕೀಯ ಕಾರಣಗಳು ಇರಲೇಬೇಕು. ಅವುಗಳನ್ನು ತಿಳಿಯುವಲ್ಲಿ ಲಾಳಗೊಂಡರ ವಲಸೆ ಮತ್ತು ಹಂಚಿಕೆ ನೆರವಾಗುತ್ತವೆ.

೩.೪ ಗೊಂಡ ಮತ್ತು ಲಾಳಗೊಂಡ ಸಮುದಾಯದ ಸಂಬಂಧದ ಕುರಿತು ವಿವಿಧ ಲೇಖಕರು ಗುರುತಿಸುವಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

೧. ಲಾಳಗೊಂಡ ಸಮುದಾಯದ ಮೂಲವೃತ್ತಿ ಪಶುಪಾಲನೆ ಹಾಗೂ ಕೃಷಿ, ಇವರು ದ್ರಾವಿಡ ಸಮುದಾಯಕ್ಕೆ ಸೇರಿದವರು. ಗೊಂಡರ ಮೂಲವೃತ್ತಿ ಪಶುಪಾಲನೆ ಹಾಗೂ ಇವರು ಸಹ ದ್ರಾವಿಡ ಸಮುದಾಯಕ್ಕೆ ಸೇರಿದವರು.

೨. ಲಾಣ ಎಂಬುದು ಪ್ರದೇಶ ಸೂಚಕವಾಗಿದ್ದು ಇಲ್ಲಿಂದ ವಲಸೆ ಬಂದವರೆ ಲಾಳಗೊಂಡರು.

೩. ಲಾಲ, ಲಾಳ, ಲಾಳಿ, ನಾಳಿ ಎಂಬುದು ಕುರುಬರ ಸಮುದಾಯದ ಬಳಿಗಳು.

೪. ಗೊಂಡರ ಮನೆತನದ ಹೆಸರುಗಳು ಲಾಳಗೊಂಡ, ರಾಜಗೊಂಡ, ಸಾಯಗೊಂಡ, ಎಳವಗೊಂಡ, ಮಾಳಗೊಂಡ, ಜಾಯಗೊಂಡ ಅಡ್ಡ ಹೆಸರುಗಳು ಕುಡುಒಕ್ಕಲಿಗರಲ್ಲೂ ಕಂಡುಬರುತ್ತವೆ. ಕುಡುಒಕ್ಕಲಿಗರು ಮತ್ತು ಲಾಳಗೊಂಡರು ಎಂಬ ಲೇಖನದಲ್ಲಿ ಗೊಂಡರು, ಕುಡುಒಕ್ಕಲಿಗರು, ಲಾಳಗೊಂಡರು ಇವರೆಲ್ಲರು ಒಂದೇ ಎಂದು ಹೇಳಿದ್ದಾರೆ. ಇವರು ತಿಳಿಸಿದಂತೆ ಲಾಳಗೊಂಡರು, ಗೊಂಡರು, ಕುಡುಒಕ್ಕಲಿಗರಲ್ಲಿ ನಡೆಯುವ ಆಚರಣೆಗಳಲ್ಲಿ ಸಾಮ್ಯತೆಯನ್ನು ಕಾಣುತ್ತೇವೆ. ಅಲ್ಲದೆ ಇವೆಲ್ಲವೂ ರೂಪಾಂತರಗೊಂಡಿವೆಯೆಂದು ಹೇಳಿದ್ದಾರೆ. ಲಾಳಗೊಂಡ ಎಂಬ ಹೆಸರು ಸೂಚಿಸುವಂತೆ ಗೊಂಡ, ರಾಜಗೊಂಡ, ಮಾಳಗೊಂಡ, ಸಾಯಗೊಂಡ, ಎಳವಗೊಂಡ ಇವೆಲ್ಲವೂ ಗೊಂಡ, ಲಾಳಗೊಂಡ ಹಾಗೂ ಕುಡುಒಕ್ಕಲಿಗರಿಗಿರುವ ಸಂಬಂಧವನ್ನು ಸೂಚಿಸುತ್ತವೆ. ಹಾಗೆಯೇ ಎಂ ವಿ ಹೋರಿ ಇವರು ಹೈದರಾಬಾದ್ ಕರ್ನಾಟಕದಲ್ಲಿ ಲಾಳಗೊಂಡರೆಂದು, ಉತ್ತರಕರ್ನಾಟಕ ಮಹರಾಷ್ಟ್ರದಲ್ಲಿ ಕುಡಿಒಕ್ಕಲಿಗರೆಂದು, ದಕ್ಷಿಣಕರ್ನಾಟಕ ಆಂಧ್ರ, ತಮಿಳುನಾಡಿನಲ್ಲಿ ನೊಳಂಬ(ನೊಣಬ) ಕುಡಿಯರೆಂದು ಕರೆಯುವರು. ಇವರು ವಿವರಿಸಿದಂತೆ ಇವರೆಲ್ಲರ ಆಚರಣೆಗಳು ಪದ್ಧತಿಗಳು ಒಂದೇ ತೆರನಾಗಿವೆ. ಆದರೆ ಪ್ರಾದೇಶಿಕ ಭಿನ್ನತೆಯಿಂದ ಕೆಲವೊಂದು ಆಚರಣೆಗಳು ಭಿನ್ನವಾಗಿವೆ.

೫. ಕುರುಬ ಸಮುದಾಯದ ೧೭ ಒಳಪಂಗಡಗಳಲ್ಲಿ ಲಾಳಗೊಂಡರು ಮತ್ತು ನೊಣಬರ ಹೆಸರುಗಳು ಉಲ್ಲೇಖವಾಗಿವೆ.

ಬಳ್ಳಾರಿ ಜಿಲ್ಲೆಯ ಕುರುಗೋಡು ಬಸವೇಶ್ವರನ ಕ್ರಿ.ಶ.೧೧೭೭ ರ ಶಾಸನದಲ್ಲಿ "ಕುಡಿಯೊಕ್ಕಲ ಮಕ್ಕಳನೂರ್ಗ್ಗಳೊಪ್ಪುಗು" ಎಂಬುವ ಉಲ್ಲೇಖವಿದೆ. ಪ್ರಾಚೀನ ಕಾಲದಿಂದ ಈಚೀನಕಾಲದಲ್ಲಿಯೂ ಗ್ರಾಮೀಣರು ಹೊಸಕಾರ್ಯ ಆರಂಭಿಸುವಾಗ ಕುರುಬರಿಂದಲೇ ಪೂಜೆನಡೆಸುವ ಒಂದು ಸಂಪ್ರದಾಯವಿದ್ದಿತು. ತಮಿಳುನಾಡಿನಲ್ಲಿ ಕುರುಬಗೌಡರು ದೊರಕುವರು. 'ಕುರಿಒಕ್ಕಲು' ಬರಬರತ್ತಾ 'ಕುಡಿಒಕ್ಕಲು' ಎಂದಾಗಿದೆ. ಈ ಕುಡಿಒಕ್ಕಲು ಕುರುಬರು ಲಿಂಗಧರ್ಮ ಸ್ವೀಕರಿಸಿದ್ದರು, ಅವರನ್ನು ಕುಡಿಒಕ್ಕಲಿಗರೆಂದೇ ಕರೆಯುವರು.

ಕುರುಬ ಸಮಾಜದ ಒಳಪಂಗಡಗಳನ್ನು ೧೭ ಎಂದು ಗುರುತಿಸಿ ಈ ಕೆಳಗೆ ವಿವರಿಸಿದ್ದಾರೆ.

೧. ಹಾಲು ಕುರುಬರು

೨. ಹಂಡೆ ಕುರುಬರು

೩. ಜೇನು ಕುರುಬರು

೪. ಗೊಂಡ ಕುರುಬರು

೫. ಅಲೆಮಾರಿ ಕುರುಬರು

೬. ಒಡೆಯರು

೭. ಜಂಡೆ ಕುರುಬರು

೮. ದಾಸ ಕುರುಬರು

೯. ಸಾದಾ ಕುರುಬರು

೧೦. ಕ್ರೈಸ್ತ ಕುರುಬರು

೧೧. ಹತ್ತಿ ಕಂಕಣ

೧೨. ಉಣ್ಣೆ ಕಂಕಣ

೧೩. ದನಗಾರರು

೧೪. ನೊಣಬರು (ಕುರುಬರು)

೧೫. ಕಾಡು ಕುರುಬರು

೧೬. ಲಾಳಗೊಂಡರು

೧೭. ಹೆಳವ ಕುರುಬರು

(ಸದಾಶಿವಪ್ಪ ಕುಂ ಬಾ, ೨೦೧೦, ೧೫೮-೧೫೯). ಈ ರೀತಿ ಕುರುಬರ ವಿಧಗಳನ್ನು ತಿಳಿಸುವಾಗ ಲಾಳಗೊಂಡರ (೧೬) ಕುರಿತು ಉಲ್ಲೇಖಿತವಾಗಿದೆ. ಅಂದರೆ ನೊಣಬರು, ಒಕ್ಕಲಿಗರು, ಲಾಳಗೊಂಡರು ಕುರುಬರ ಮೂಲದಿಂದ ಬಂದವುಗಳೆಂದು ಈ ಮೂಲಕ ತಿಳಿಯಬಹುದು. ಅಲ್ಲದೆ ಗಂಗಡಿಕಾರ ಒಕ್ಕಲಿಗರ ಒಳಪಂಗಡದಲ್ಲಿ ಲಾಳಗೊಂಡರ ಉಲ್ಲೇಖವನ್ನು ಕಾಣಬಹುದು(ಅನುಬಂಧ:೪, ಗಂಗಡಿಕಾರ ಒಕ್ಕಲಿಗರು). ಈ ಒಂದು ಆಧಾರವಲ್ಲದೆ ಅವರ ಆಚಾರ ವಿಚಾರದಲ್ಲಿಯೂ ಸಹ ಹೋಲಿಕೆಗಳಿವೆಯೆಂದು ಮಾದೇಗೌಡರು ಈ ಕೆಳಗಿನಂತೆ ಪುಷ್ಟೀಕರಿಸಿದ್ದಾರೆ.

ಡಾ ಮಾದೇಗೌಡರು ಪ್ರಖ್ಯಾತ ಇತಿಹಾಸಕಾರರು. ಅವರು ಕರ್ನಾಟಕದ ಸಾಮಾಜಿಕ, ರಾಜಕೀಯ, ಇತಿಹಾಸ ರಚನೆಯಲ್ಲಿ ವಿಶೇಷವಾದ ಪಾಂಡಿತ್ಯಗಳಿಸಿದ್ದಾರೆ. "ಹಾಲುಮತವು ಇತರೇ ಧರ್ಮಗಳಿಂದ ಸಂಪನ್ನಗೊಂಡಿದೆ. ಅದೇ ರೀತಿ ಹಾಲುಮತದಿಂದ ಇತರೇ ಧರ್ಮಗಳು ಬೌದ್ಧ, ಜೈನ, ವೀರಶೈವ,

ವೈಷ್ಣವ ಗಣನೀಯವಾಗಿ ಮೌಲ್ಯಗಳು, ಆರಾಧನ ಕ್ರಮಗಳು, ಜೀವನ ವಿಧಾನಗಳನ್ನು ಪಡೆದುಕೊಂಡಿದೆ ಹೀಗೆ ಹಾಲುಮತದ ಅಂತರ್ಗತ ಸತ್ವವೇ ಅದನ್ನು ಇನ್ನೂ ಸತ್ವವಾಗಿಸಿದೆ" (ಮಾದೇ ಗೌಡ, ೨೦೧೨, ೬೩-೬೪).

ಗೊಂಡರು ಶಿವನ ಆರಾಧಕರು ಹಾಗೂ ದ್ರಾವಿಡ ಸಂಸ್ಕೃತಿಯ ಮೂಲಿಗರು. ಇವರಲ್ಲಿ ಕುರಿಗಾಯಿಗಳು ಕುರುಬರಾದರೆ, ದನಗಾಹಿಗಳು ಕುಡಿಯರಾದರು. ಸಾಂಸ್ಕೃತಿಕವಾಗಿ ಇವರು ಬೇರೆಬೇರೆ ಬದುಕು ಕಂಡುಕೊಂಡು ಇತಿಹಾಸ ಪುಟ ಸೇರಿದ್ದಾರೆ. ದನಗಾಹಿಗಳಾದ ಈ ಕುಡಿಯರು ಪಶುಪಾಲನೆ ಮತ್ತು ಕೃಷಿಯನ್ನೆ ಪ್ರಧಾನ ಉದ್ಯೋಗ ಮಾಡಿಕೊಂಡು ಬಂದವರು ಶೈವ ಸಂಪ್ರದಾಯದಿಂದ ಬಂದ ಇವರು ಶಿವನ ಸಂತತಿಯೆಂದು ನಂಬಿದ್ದಾರೆ. ದಕ್ಷಿಣ ಭಾರತದಲ್ಲಿ ಹರಡಿರುವ ಇವರು ದಕ್ಷಿಣ ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ ನೊಳಂಬ ಕುಡಿಯರೆಂದು ಕರೆದರೆ, ಉತ್ತರ ಕರ್ನಾಟಕ, ಮಹರಾಷ್ಟ್ರ ರಾಜ್ಯಗಳಲ್ಲಿ ಕುಡಿಒಕ್ಕಲಿಗರೆಂದು ಕರೆಯುತ್ತಾರೆ. ಹೈದರಾಬಾದ್ ಕರ್ನಾಟಕದಲ್ಲಿ ಲಾಳಗೊಂಡರೆಂದು ಕರೆಯುತ್ತಾರೆ (ಎಂ ವಿ ಹೋರಿ, ೨೦೧೧, ೬೮-೬೯).

"ಹಾಲುಮತ ಕುರುಬ ಜನಾಂಗದ ಧಾರ್ಮಿಕ ಮತ್ತು ಸಾಮಾಜಿಕ ಜನ ಜೀವನವನ್ನು ವಿಶ್ಲೇಷಿಸಲೆತ್ನಿಸಲಾಗಿದೆ. ಪ್ರಸ್ತುತದ ವಿಶ್ಲೇಷಣೆಗೆ ಕರ್ನಾಟಕವೆ ಕೇಂದ್ರ ಬಿಂದು ಆದರೆ ಮಾಹಿತಿ ಲಭ್ಯವಿರುವಲ್ಲೆಲ್ಲ ಭಾರತದ ಇತರೆ ರಾಜ್ಯಗಳಲ್ಲಿನ ಕುರುಬ ಜನಾಂಗದ ಧಾರ್ಮಿಕ, ಸಾಮಾಜಿಕ, ಆಚಾರ ವಿಚಾರಗಳನ್ನು ತಿಳಿಸಲುಯತ್ನಿಸಲಾಗುವುದು. ಕುರುಬರು ಪ್ರಧಾನವಾಗಿ ಶೈವರು ಸ್ವಲ್ಪ ಮಟ್ಟಿಗೆ ಕುರುಬ ಜನಾಂಗದ ಮೇಲೆ ಶ್ರೀ ವೈಷ್ಣವ ಪಂತದ ಪ್ರಭಾವವು ಆಗಿದೆ. ಅಲ್ಲದೆ ಹಾಲುಮತ ಕುರುಬ ಜನಾಂಗದಿಂದ ಅಪಾರ ಪ್ರಮಾಣದಲ್ಲಿ ಬೌದ್ಧ, ಜೈನ ಮತ್ತು ವೀರಶೈವ ಧರ್ಮಗಳಿಗೆ ಮತಾಂತರಗೊಂಡಿರುವುದು ಉಂಟು" (ಒಡೆಯರ್ ಹೆಗ್ಗಡೆ, ೨೦೧೨, ೫೭) ಎಂದು ವಿವರಿಸಿದ್ದಾರೆ.

### ರೇವಣಸಿದ್ಧೇಶ್ವರ

ಕುರುಬ ಜನಾಂಗದ ಮಹಾನ್ ಪುರುಷರಲ್ಲಿ ಕಂಡುಬರುವ ವ್ಯಕ್ತಿತ್ವ ಎಂದರೆ ರೇವಣಸಿದ್ಧೇಶ್ವರರು. ರೇವಣಸಿದ್ಧೇಶ್ವರ ಕುರುಬ ಜನಾಂಗದವರು. ವೀರಶೈವಮತ ಕರ್ನಾಟಕ, ಆಂಧ್ರ, ತಮಿಳುನಾಡಿನಲ್ಲಿ ಹರಡಲು ಪ್ರಾಮಾಣಿಕ ಪ್ರಯತ್ನ ಮಾಡಿದ ಇವರು ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರು. ಇವರಿಗೆ ರೇವಣಸಿದ್ಧೇಶ್ವರ, ರೇಣುಕಾಚಾರ್ಯ, ಸಿದ್ಧೇಶ್ವರ, ಕರಿಸಿದ್ಧೇಶ್ವರ, ಚನ್ನಮಲ್ಲೇಶ, ಮಳೆಮಲ್ಲೇಶ, ದೊಡ್ಡಯ್ಯ, ಭೀಮೇಶ್ವರ ಎಂಬ ಹತ್ತಾರು ಹೆಸರುಗಳಿವೆ. ಇವರು ವೀರಶೈವರಾಗುವುದಕ್ಕೆ ಮೊದಲು ಅಂದರೆ ಶೈವರಾಗಿದ್ದಾಗ 'ಪಿಣ್ಣಾಕ' ಎಂಬ ಹೆಸರು ಸಹ ಇತ್ತು.

ಹಾಲುಮತದ ಮುದ್ದಗೊಂಡ ಮತ್ತು ಮುದ್ದವ್ವ ದಂಪತಿಗಳ ಮಗ ಪದ್ಮಗೊಂಡನ ನಾಲ್ಕನೇ ಮಗ ಶಾಂತಿಮಯ ಮತ್ತಯ್ಯ ಈ ಶಾಂತಿಮಯ ಮುತ್ತಯ್ಯನ ಮಗನೇ ಈ ರೇವಣಸಿದ್ಧೇಶ. ಇವರ ತಂದೆತಾಯಿ ಗುರುಭಕ್ತರಾಗಿದ್ದರಿಂದ ಸಮಾಜದ ಹಿತಕಾರ್ಯವನ್ನು ಮಾಡುತ್ತ ಶೈವಸಿದ್ಧರಾದರು

(ಶಿವಸ್ವಾಮಿ, ೨೦೦೭, ೩೨–೩೩). ರೇವಣಸಿದ್ದೇಶ್ವರರು (ರೇಣುಕಾಚಾರ್ಯ) ಸ್ವತಃ ಕುರುಬ ಜನಾಂಗ ಎನ್ನುವುದಕ್ಕೆ ದೊಡ್ಡಬಳ್ಳಾಪುರ ತಾಲೂಕಿನ ಕುರುಬರ ಹಳ್ಳಿ(ಕೊಡಿಗೇಹಳ್ಳಿ ಗ್ರಾಮ ಪಂಚಾಯತಿ). ಇಲ್ಲಿ ವಾಸಿಸುವ ಇಡೀ ಗ್ರಾಮವೇ ಒಂದು ಕಾಲದಲ್ಲಿ ಈ ರೇಣುಕಾಚಾರ್ಯರಿಂದಲೇ ಇಡೀ ಗ್ರಾಮ ಲಿಂಗದೀಕ್ಷೆ ಪಡೆದು ಲಿಂಗಾಯತರಾದ ಉದಾಹರಣೆಗೆ ಸಾಕ್ಷಿಯಾಗಿದೆ. ಈ ಗ್ರಾಮದ ಹೆಸರು ಸಹ ರೇಣುಕಾಪುರವಾಗಿದೆ ಇವರೆಲ್ಲರೂ ಲಾಳಗೊಂಡರು.

೬. ಲಾಳಗೊಂಡರ ಗುರುಗಳು ಲಿಂಗಧಾರಕ ಸನ್ಯಾಸಿಗಳು ಮೈಲಾರದಲ್ಲಿರುವರೆಂದು ಪ್ರಾನ್ಸಿಸ್ ಬುಖನಾನ್ ಹೇಳಿರುವರು. ಮೈಲಾರದಲ್ಲಿರುವ ಮೈಲಾರೇಶ್ವರ ಕುರುಬರ ಆರಾಧ್ಯ ದೈವ.

೭. ಲಾಳಗೊಂಡರು ಆಂಧ್ರಪ್ರದೇಶ ಮತ್ತು ಮಧ್ಯಪ್ರದೇಶದ ಗಡಿಭಾಗದಿಂದ ವಲಸೆ ಬಂದವರಾಗಿರುವರು ಇಲ್ಲಿನ ಮೂಲ ನಿವಾಸಿಗಳು ಗೊಂಡರು ಹಾಗೂ ಈ ಪ್ರದೇಶ ಗೊಂಡ ಅರಸರಿಂದ ಆಳ್ವಿಕೆಗೆ ಒಳಪಟ್ಟಿತ್ತು

೮. ಗೊಂಡರ ಆಚರಣೆಗೆ ನೊಣಬ, ಕುಡು ಒಕ್ಕಲಿಗ ಹಾಗೂ ಲಾಳಗೊಂಡರ ಆಚರಣೆಗಳು ಒಂದೇ ಆಗಿವೆ. ಕೆಲವೊಂದು ಪ್ರಾದೇಶಿಕ ಭಿನ್ನತೆಯಿಂದ ಬೇರೆಯಾಗಿವೆ.

೯. ೧೮೮೧ ರ ಇಂಪ್ಯಾರಿಕಲ್ ಜನಗಣತಿ ಪ್ರಕಾರ ಲಾಳಗೊಂಡರು ತಮಿಳುನಾಡು, ಆಂಧ್ರ ಪ್ರದೇಶದಲ್ಲಿ ಲಾಲ, ಲಾಲಿಗೊಂಡ ಬಲಿಜ ಎಂದು ದಾಖಲಾದರೆ ಕರ್ನಾಟಕದಲ್ಲಿ ಲಾಳಗೊಂಡ ಗೊಲ್ಲ, ಲಾಳಗೊಂಡ ಕಾಪು ಲಾಲಿಗೊಂಡ ಯಾಪ ಲಿಂಗದಾರಿ ಎಂದು ದಾಖಲಾಗಿದೆ. ಇಲ್ಲಿ ಗೊಲ್ಲ ಎಂದರೆ ಗೋಪಾಲಕ ಅಥವಾ, ಕಾಪು ಎಂದರೆ ಕೃಷಿ ಸಂಬಂಧಿ ಚಟುವಟಿಕೆ ಯಾಪ ಲಿಂಗಧಾರಿ ಎಂದರೆ ಲಿಂಗ ಧರಿಸಿದ ಲಿಂಗಾಯತರಾಗಿರುವರು.

**೧೮೮೧ ರ ಇಂಪ್ಯಾರಿಕಲ್ ಜನಗಣತಿ**

೧೮೮೧ ರ ಭಾರತೀಯ ಇಂಪ್ಯಾರಿಕಲ್ ಜನಗಣತಿಯ ಪ್ರಕಾರ ತಮಿಳುನಾಡು ಆಂಧ್ರಪ್ರದೇಶದಲ್ಲಿ ಲಾಳಗೊಂಡ ಎಂಬ ಸಮುದಾಯವಿದ್ದು ಅವರಿಗೆ ರಾಜ್ಯವಾರು ಪಟ್ಟಿಯಲ್ಲಿ ಸ್ಥಾನವಿರುವುದು ಧೃಡಪಡುತ್ತದೆ. ಆದರೆ ಕರ್ನಾಟಕದಲ್ಲಿ ಮಾತ್ರ ಲಾಳಗೊಂಡರು ವೀರಶೈವ ಲಿಂಗಾಯತದಲ್ಲಿ ನಮೂದಿಸಲಾಗಿದೆ. ಹೀಗಾಗಿ ಕರ್ನಾಟಕದಲ್ಲಿ ಲಾಳಗೊಂಡರ ಗುರುತಿಗೆ ಯಾವುದೇ ಆಧಾರವಿಲ್ಲವಾಗಿದೆ ಎನ್ನಬಹುದು.

ಗೊಂಡ, ರಾಜಗೊಂಡ, ಲಾಳಗೊಂಡ ಮುಂತಾದ ಗೊಂಡ ಮೂಲದ ಹೆಸರುಗಳು ಗೊಂಡ ಸಮುದಾಯದಿಂದ ಕವಲೊಡೆದು ಬಂದಿವೆಯೆಂದು ಈ ಹೆಸರಿನಿಂದಲೇ ತಿಳಿದು ಬರುತ್ತದೆ. ಆದರೂ ಸಹ ಅವುಗಳನ್ನು ಆಳವಾಗಿ ಅಧ್ಯಯನ ಮಾಡುವುದು ಅಷ್ಟೆ ಅಗತ್ಯವಾಗಿದೆ. ಯಾವುದೇ ಒಂದು ಸಮುದಾಯವನ್ನು ಅಧ್ಯಯನ ಮಾಡಬೇಕಾದರೆ ಆ ಸಮುದಾಯದ ಆಚಾರ, ವಿಚಾರ, ಸಂಪ್ರದಾಯಗಳನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ.

ಒಂದು ಸಂಸ್ಕೃತಿಯನ್ನು ಅರಿಯುವಾಗ ಆ ಸಮುದಾಯದಲ್ಲಿ ನೆಡೆಯುವ ಹುಟ್ಟಿನಿಂದ ಸಾಯುವವರೆಗೂ ಎಲ್ಲಾ ವಿಧಿ ಕ್ರಮಗಳನ್ನು ತಿಳಿದು ಹೋಲಿಕೆ ಮಾಡುವುದು ಅವಶ್ಯಕವಾಗಿದೆ. ಅದೇ ರೀತಿ ಆ ಸಮುದಾಯದ ಪೌರಾಣಿಕ ಹಿನ್ನೆಲೆಗಳನ್ನು ತಿಳಿಯುವುದು ಜನಪದರಗಳಲ್ಲಿ ಬಹುಮುಖ್ಯವಾಗಿದೆ. ಸಮುದಾಯವೊಂದರ ಇತಿಹಾಸವು ವ್ಯಕ್ತಿಯೋರ್ವನ ಸಾಮಾಜಿಕ ಸ್ಥಿತಿಗತಿಯನ್ನು ನಿರ್ದೇಶಿಸುತ್ತದೆ. ಭಾರತೀಯ ಸಮಾಜದ ಸಾಮಾಜಿಕ ರಚನೆ ಪ್ರಮುಖವಾಗಿ ಜಾತಿ ವ್ಯವಸ್ಥಿತ ಲಕ್ಷಣಗಳಿಂದ ಕೂಡಿದ್ದು, ಅದು ಸಮುದಾಯದ ಮತ್ತು ವ್ಯಕ್ತಿಯೋರ್ವನ ಅಂತಸ್ಥನ್ನು ಗೋಚರಿಸುತ್ತದೆ. ಸಮುದಾಯದ ಆಚಾರ-ವಿಚಾರ, ನಂಬಿಕೆ, ನಡವಳಿಕೆ, ಧಾರ್ಮಿಕ ಭಾವನೆ, ಸಂಸ್ಕೃತಿ, ಭಾಷೆ ಹಾಗೂ ಸಾಮಾಜಿಕ ಜೀವನವನ್ನು ತಿಳಿಯಬೇಕಾದರೆ ಐತಿಹಾಸಿಕ ಹಿನ್ನೆಲೆ ಮತ್ತು ಅದು ನಡೆದು ಬಂದ ದಾರಿಯನ್ನು ಅರಿಯುವುದು ಮಹತ್ವ

"ಸಂಸ್ಕೃತಿ, ನಾಗರಿಕತೆ ಎಂಬ ಮಾತುಗಳನ್ನು ಒಂದೇ ವ್ಯಕ್ತಿಯೇ ಒಂದಕ್ಕಿಂತ ಹೆಚ್ಚು ಅರ್ಥಗಳಲ್ಲಿ ಬಳಸುವುದು ಕಾಣುತ್ತದೆ. ಸಂಸ್ಕೃತಿ ಹಾಗೂ ನಾಗರಿಕತೆ ಇವೆರಡೂ ಪದಗಳನ್ನು ಸಮನಾರ್ಥದಲ್ಲಿ ಬಗೆದವರು ಇದ್ದಾರೆ ಆದರೆ ಅರ್ಥ ವ್ಯತ್ಯಾಸವಿಲ್ಲದೆ ಭಾಷೆಯಲ್ಲಿ ಯಾವ ಪದಗಳೂ ತಲೆಯೆತ್ತಲಾರವು. ಆಗಾಗ ತೊಡಗುವಲ್ಲಿ, ಆ ಎರಡರಲ್ಲಿ ಒಂದು ಉಳಿದು ಮತ್ತೊಂದು ಇತಿಹಾಸದ ವಿಷಯವಾಗುತ್ತದೆ. ನಗರಗಳು ತಲೆಯೆತ್ತುವ ಮೊದಲು 'ನಾಗರಿಕತೆಗಿಂತ', 'ಸಂಸ್ಕೃತಿ' ಎಂಬುದು ಪ್ರಾಚೀನ ಹಾಗೂ ಹೆಚ್ಚು ವ್ಯಾಪಕಾರ್ಥವುಳ್ಳದ್ದಾಗಿ ಕಾಣುತ್ತದೆ. (ಶಂ ಬಾ ಜೋಶಿ, ೧೯೯೯, ೨೧೫).

ಲಾಳಗೊಂಡ ಸಮುದಾಯದ ಕುರಿತು ಅಧ್ಯಯನಿಸಬೇಕಾದರೆ ಗೊಂಡರು, ರಾಜಗೊಂಡರ ಕುರಿತು ಅಧ್ಯಯನಿಸುವುದು ಅವಶ್ಯವಾಗಿದೆ. ಈ ಕುರಿತು ಅನೇಕ ಸಂಶೋಧಕರು ಸಂಶೋಧನೆ ಮಾಡಿದ್ದು ಅವುಗಳ ಕಿರು ಮಾಹಿತಿಯನ್ನು ಇಲ್ಲಿ ನಮೂದಿಸಲಾಗಿದೆ. ಕಾರಣ ಲಾಳಗೊಂಡ, ಗೊಂಡ, ರಾಜಗೊಂಡ ಇವುಗಳ ಹೋಲಿಕೆಯಿಂದ ಲಾಳಗೊಂಡರ ಹಿನ್ನಲೆ ತಿಳಿಯಬಹುದಾಗಿದೆ.

ಲಾಳಗೊಂಡರು ಸುಮಾರು ೩೦೦ ಕ್ಕೂ ಹೆಚ್ಚು ಗ್ರಾಮಗಳಲ್ಲಿ ಹಾಗೂ ನಗರಗಳಲ್ಲಿ ನೆಲೆಸಿರುವರು ಹೆಚ್ಚಾಗಿ ಇವರು ಉತ್ತರ ಕರ್ನಾಟಕದ ಬಳ್ಳಾರಿ, ಸಿರಗುಪ್ಪ, ರಾಯಚೂರು, ಬಾಗಲಕೋಟೆ, ರಾಣೇಬೆನ್ನೂರು, ಹಾವೇರಿ, ಕೊಪ್ಪಳ ಹಾಗೂ ದಕ್ಷಿಣ ಕರ್ನಾಟಕದ ದೊಡ್ಡ ಬಳ್ಳಾಪುರ ತಾಲೂಕಿನ ಸುತ್ತಲಿನಲ್ಲಿ ಇವರು ಕಾಣಸಿಗುವರು.

೧೦. ಎಲ್ ಜಿ ಹಾವನೂರು ಕಮಿಷನ್ ವರದಿ ತಿಳಿಸಿಸುವಂತೆ ಲಾಳಗೊಂಡ ಸಮುದಾಯದವರು ಯಾವ ಪಂಗಡಕ್ಕೆ ಸೇರಿದ್ದಾರೆಂದು ಖಚಿತವಾಗಿರುವುದಿಲ್ಲ ಇಂತಹ ಪರಿಸ್ಥಿತಿಯಲ್ಲಿರುವ ವಿವಿಧ ಸಮುದಾಯಗಳ ಪಟ್ಟಿಯಲ್ಲಿ ಲಾಳಗೊಂಡರು ಸೇರಿದ್ದಾರೆ. ಕ್ರಮ ಸಂಖ್ಯೆ ೨೨೬ ರಲ್ಲಿರುವರು (ಅನುಬಂಧ ನೋಡಿ).

೧೧. ಗೊಂಡ, ರಾಜಗೊಂಡ, ಲಾಳಗೊಂಡ ಇವುಗಳು ಗೊಂಡರ ಮೂಲದಿಂದ ವಿಘಟನೆ ಹೊಂದಿವೆ ಎಂದು ಕೆ ಎಂ ಮೇತ್ರಿ ಇವರು ತಮ್ಮ ಲೇಖನದಲ್ಲಿ ತಿಳಿಸಿರುವರು.

೧೨. ಲಾಳಗೊಂಡರು ವಿಷೇಶ ಸಂದರ್ಭದಲ್ಲಿ ಉಣ್ಣೆ ಹಾಸಿಗೆಯನ್ನು ಕಡ್ಡಾಯವಾಗಿ ಬಳಸುವರು ಉಣ್ಣೆ ಕುರುಬರ ಪ್ರತೀಕ.

೧೩. ಬಳ್ಳಾರಿ ಜಿಲ್ಲೆಯ ಕುರುಗೋಡು ಬಸವೇಶ್ವರನ ಶಾಸನದಲ್ಲಿ ಕುಡಿಒಕ್ಕಲಿಗರು ಕುರುಬರು ಲಿಂಗ ಧರ್ಮ ಸ್ವೀಕರಿಸಿದವರು ಎಂದು ಉಲ್ಲೇಖಿಸಲಾಗಿದೆ. ಅಂದರೆ ಕುರುಬರು ಲಿಂಗದೀಕ್ಷೆ ಪಡೆದಿರುವರು. ತಮಿಳುನಾಡಿನಲ್ಲಿ ಕುರುಬಗೌಡರು ದೊರಕುವರು ಕುರಿಒಕ್ಕಲು ಬರಬರುತ್ತಾ ಕುಡಿ ಒಕ್ಕಲಾಗಿರುವ ಸಾಧ್ಯತೆ ಇದೆ.

ಈ ಎಲ್ಲಾ ಆಧಾರಗಳು ಲಿಖಿತ ಸಾಕ್ಷಿಗಳಾಗಿವೆ. ಆದರೆ ಅವುಗಳಿಗೆ ಅಲಭ್ಯವಾಗಿರುವುದು ಸಂಶೋಧನೆಯ ಮಿತಿಯಾಗಿದೆ. ಇಂದು ಲಾಳಗೊಂಡರು ಈ ಎಲ್ಲಾ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯದೇ ಹಲವು ತಲೆಮಾರುಗಳನ್ನು ದಾಟಿ ಜೀವನ ನಡೆಸುತ್ತಿದ್ದಾರೆ.

**೩.೫ ಲಾಳಗೊಂಡ ಹಾಗೂ ಗೊಂಡ ಸಮುದಾಯದ ಸಂಬಂಧವನ್ನು ಮೌಖಿಕ ಹಾಗೂ ಪೌರಾಣಿಕ ಹಿನ್ನೆಲೆಯಿಂದ ನೋಡಿದಾಗ**

೧. ನಾಳಗೊಂಡೇಶ್ವರ ಪುರಾಣ ಕಾವ್ಯಂ ಇದು ಲಾಳಗೊಂಡ ಸಮುದಾಯದ ಪೌರಾಣಿಕ ಕತೆ ಈ ಪ್ರಕಾರ ಲಾಳಗೊಂಡರು ಮಧ್ಯಪ್ರದೇಶದ ಗೊಂಡ್ವಾನ ಭೂಪ್ರದೇಶದಲ್ಲಿ ವಾಸಿಸುತ್ತಿದ್ದು ಆರ್ಯರ ಆಕ್ರಮಣದಿಂದ ಅವರ ಗುರು ನಾಳಗೊಂಡೇಶ್ವರನ ಆದೇಶದಂತೆ ದಕ್ಷಿಣಭಾರತಕ್ಕೆ ಬಂದು ನೆಲೆಸಿದರು ಕೆಲವರು ಅಲ್ಲಿಯೇ ಉಳಿದರು ಹೀಗೆ ಬಂದವರೆ ಲಾಣ ಪ್ರದೇಶದ ಲಾಳಗೊಂಡರು. ಈ ಪುರಾಣವನ್ನು ಪ್ರಮಾಣಿಕರಿಸಿದಾಗ ಮಧ್ಯಭಾರತದಲ್ಲಿ ವಾಸಿಸುವ ಜನರು ಗೊಂಡಾರಣ್ಯದ ಮೂಲಿಗರು ಅವರು ನಾಳಗೊಂಡೇಶ್ವರನ ಆದೇಶದಂತೆ ಉತ್ತರಭಾರತವನ್ನು ಬಿಟ್ಟು ದಕ್ಷಿಣಭಾರತಕ್ಕೆ ವಲಸೆಬಂದು ನೆಲೆಸಿದರು ಈ ರೀತಿ ಬಂದ ಜನರು ಆಂಧ್ರದ ಗಢಿ ಭಾಗದಲ್ಲಿ ಈಗಿನ ಬಳ್ಳಾರಿ ಜಿಲ್ಲೆಯ ತುಂಗಭದ್ರ ನದಿದಂಡೆಗಳಲ್ಲಿ ಮತ್ತು ಆಂಧ್ರ, ತಮಿಳುನಾಡು ಭಾಗದಲ್ಲಿ ನೆಲೆಯೂರಿರುವರು. ಆದ್ದರಿಂದ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಲಾಳಗೊಂಡರಿರುವುದು ಕಂಡು ಬರುತ್ತದೆ. ಅಲ್ಲದೆ ಆಂಧ್ರ ಮತ್ತು ತಮಿಳು ಭಾಗದಲ್ಲಿ ಇವರನ್ನು ಗುರುತಿಸಬಹುದು. ಹೀಗೆ ಬಂದ ಇವರು ಗೌಡ, ನಾಡಗೌಡ ಹಾಗೂ ಸರನಾಡ ಗೌಡ್ಕಿ ಪಡೆದು ಊರ ಯಜಮಾನಿಕೆಯನ್ನು ಪಡೆದು ಆಳತೊಡಗಿದರು ಇದರ ಪ್ರತಿಬಿಂಬವಾಗಿಯೇ ಇವರ ಹೆಸರಿನ ಮುಂದೆ ಗೌಡ ಎಂದು ನಾಡಗೌಡ, ಸರನಾಡಗೌಡ ಪದ ಪ್ರಯೋಗವಾಗಿ ಪ್ರಚಲಿತದಲ್ಲಿದೆ. ಲಿಂಗಾಯತ ಎಂಬ ಪದಬಳಕೆಯಿಂದಾಗಿ ಅವರು ತಮ್ಮ ಲಾಳಗೊಂಡ ಎಂಬ ಪದವನ್ನು ಮರೆಮಾಚುತ್ತಾ ಬಂದಿದ್ದಾರೆ.

೨. ಗದುಗಿನ ಭಾರತದ ಸಭಾಪರ್ವದಲ್ಲಿ ತಿಳಿಸಿರುವಂತೆ ಯುದಿಷ್ಟ ರಾಜನಿಗೆ ಬೇರೆಬೇರೆ ದೇಶದ ಅರಸರು ಕಪ್ಪುಕಾಣಿಕೆಯನ್ನು ನೀಡುತ್ತಿದ್ದರು ಇದರಲ್ಲಿ ಲಾಲ, ಜೋನಗ, ಜೀನ, ಕುರು, ನೇಪಾಳ

ಮುಂತಾದವರು ಕಪ್ಪಕಾಣಿಕೆಯನ್ನು ನೀಡುತ್ತಿದ್ದರು. ಇಲ್ಲಿ ಲಾಲ, ಕುರು ಅರಸರು ಸಹ ಅಕ್ಕಪಕ್ಕದ ರಾಜರಿದ್ದರು ಎಂದು ತಿಳಿಯುತ್ತದೆ.

೩. ದೊಡ್ಡಬಳ್ಳಾಪುರದ ಕುರುಬರ ಹಳ್ಳಿಯಲ್ಲಿ ಲಾಳಗೊಂಡರಿರುವರು ಈ ಊರಲ್ಲಿ ಒಂದು ಕುರುಬರ ಮನೆತನಗಳಿಲ್ಲ ಆದರು ಈ ಊರಿಗೆ ಕುರುಬರ ಹಳ್ಳಿಯೆಂದು ಹೆಸರಿದೆ.

ಕುರುಬರಹಳ್ಳಿಗೆ ರೇಣುಕಾಪುರವೆಂದಾದ ನಾಮಫಲಕ, ಕುರುಬರಹಳ್ಳಿ

ಇದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಕೊಡಗೆಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಗೆ ಬರುವ ಒಂದು ಪುಟ್ಟ ಊರು ಈ ಹಿಂದೆ ಅಂದರೆ ಸುಮಾರು ೫೦ ವರ್ಷಗಳ ಹಿಂದೆ ಕೇವಲ ಸುಮಾರು ೧೦೦ ರಿಂದ ೧೫೦ ಮನೆಗಳಿರುವಂತಹ ಊರಾಗಿತ್ತು ಇಂದು ೩೩೦ ಕುಟುಂಬಗಳಿದ್ದು ಒಟ್ಟು ೧೯೫೪ ಜನಸಂಖ್ಯೆಯನ್ನು ಹೊಂದಿರುತ್ತದೆ. ಅದರಲ್ಲಿ ಒಟ್ಟು ೯೬೮ ಪುರುಷರು, ೯೬೬ ಸ್ತ್ರೀಯರು ಇರುವರು. ಒಟ್ಟು ಜನಸಂಖ್ಯೆಯ ೧೫೧೦ ಲಿಂಗಾಯತ (ಲಾಳಗೊಂಡ)ರು, ४४४ ಜನ ಪರಿಶಿಷ್ಟ ಪಂಗಡ, ೧೫ ಜನ ಪರಿಶಿಷ್ಟ ಜಾತಿಗೆ ಸೇರಿರುವರು ಒಟ್ಟು ಜನಸಂಖ್ಯೆಯಲ್ಲಿ ಶೇಖಡ ೬೫% ರಷ್ಟು ಶೈಕ್ಷಣಿಕ ಮಟ್ಟವನ್ನು ಹೊಂದಿದೆ. ಗ್ರಾಮದ ಒಟ್ಟು ವಿಸ್ತೀರ್ಣ ೭ ಎಕರೆಗಳಷ್ಟಿದೆ, ಗ್ರಾಮದ ಭೂ ವಿಸ್ತೀರ್ಣ ಇನ್ನೂರು ಎಕರೆಗಳಷ್ಟಿದೆ. ಒಟ್ಟು ೨೧೦ ರೈತಾಪಿ ಕುಟುಂಬಗಳು, ಒಟ್ಟು ೭೦ ನೇಕಾರಿಕೆ ಮತ್ತು ಜವಳಿ (ಕೈಮಗ್ಗ) ನಡೆಸುವ ಕುಟುಂಬಗಳು, ೫೦ ಕೂಲಿ ಕಾರ್ಮಿಕ ಕುಟುಂಬಗಳು ಇವೆ. ಈ ಗ್ರಾಮವು ೧ ಕೆರೆ, ೧೨ ತೆರೆದಭಾವಿಗಳು, ೮೦ ಕೊಳವೆಬಾವಿಗಳು, ೬ ದೇವಸ್ಥಾನಗಳ(ಬಸವಣ್ಣ, ಯಲ್ಲಮ್ಮ, ಭೋಮ್ಮಪ್ಪ, ಆಂಜನೇಯ, ಗಣೇಶ ಮತ್ತು ಮಾರಮ್ಮ)ನ್ನು ಹೊಂದಿದೆ. ಈ ಗ್ರಾಮದಲ್ಲಿನ ಹೆಚ್ಚಿನ ಜನರು ಅನಾದಿಕಾಲದಿಂದಲೂ ಕೃಷಿಯನ್ನೇ ನಂಬಿ ಬದುಕುತ್ತಿರುವ ಜನ ಮತ್ತು ಇಲ್ಲಿನ ಕೃಷಿ ಭೂಮಿಯು ಹೆಚ್ಚು ಖುಷ್ಕಿ ಕೃಷಿ ಭೂಮಿಯಾಗಿದ್ದು ವರ್ಷ ಪೂರ್ತಿ ಬೆಳೆ ಇರದೆ ಮಳೆ ಆಧಾರಿತ ಬೆಳೆಗಳೆ ಹೆಚ್ಚು. ಆದರೆ ಇತ್ತೀಚ್ಚಿನ ಅಕಾಲಿಕ ಮಳೆಯ ಕಾರಣ ಬೆಳೆನಾಶದಿಂದಾಗಿ ಹೆಚ್ಚಿನ ಕೃಷಿಕರು ಸಂಕಷ್ಟದಲ್ಲಿದ್ದಾರೆ. ಸ್ವಲ್ಪಮಟ್ಟಿನ ಸ್ಥಿತಿವಂತ ಕೃಷಿಕರು ಕೊಳವೆ ಬಾವಿಗಳ ನೀರಿನ ಸಹಾಯದ ಮೂಲಕ ಕೃಷಿಯನ್ನು ಮಾಡುತ್ತಿದ್ದಾರೆ. ಆದರೆ ಮಳೆಗಾಲದಲ್ಲಿ ಹೆಚ್ಚು ಮಳೆ ಬಾರದೇ ಇರುವ ಕಾರಣ ಕೊಳವೆ ಬಾವಿಗಳಲ್ಲಿನ ನೀರು ಸಹ ಬತ್ತಿ ಹೋಗುತ್ತಿವೆ. ಈ ಕಾರಣದಿಂದಾಗಿ ಕೆಲವರು ಸ್ವ ಉದ್ಯೋಗ ಕೈಮಗ್ಗ ಮತ್ತು ಜವಳಿ ವ್ಯಾಪಾರವನ್ನು ಅವಲಂಬಿಸಿದ್ದಾರೆ, ಇನ್ನೂ ಕೆಲವರು ದಿನಗೂಲಿ ಕಾರ್ಮಿಕ ಕೆಲಸಗಳನ್ನು ಅವಲಂಬಿಸಿದ್ದಾರೆ, ಯುವಕರು ಉದ್ಯೋಗಗಳನ್ನು ಅರಸಿ ಪಟ್ಟಣಗಳ ಕಡೆಗೆ ವಲಸೆ ಹೋಗುತ್ತಿದ್ದಾರೆ. ಮಹಿಳೆಯರು ಜವಳಿಯ ಕಸೂತಿಯಂತಹ ಕೆಲಸಗಳಲ್ಲಿ ಮತ್ತು ಸರ್ಕಾರದ ಉದ್ಯೋಗ ಖಾತ್ರಿ ಯೋಜನೆಯಂತಹ ಕೆಲಸಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ.

ಈ ಹಿಂದೆ ಇದ್ದ ಕುರುಬರಹಳ್ಳಿಗೂ ಈಗಿನ ಕುರುಬರಹಳ್ಳಿಗೂ ಬಹಳಷ್ಟು ವ್ಯತ್ಯಾಸವಿದೆ. ಇಂದು ಆಧುನಿಕತೆಯ ಬಹುಮಹಡಿ ಕಟ್ಟಡಗಳು, ಅಂಗನವಾಡಿ, ಶಾಲಾಕಾಲೇಜುಗಳು, ಆಸ್ಪತ್ರೆ,

ತೋಟಗಾರಿಕೆ, ರೇಷ್ಮೆಇಲಾಖೆ, ಗ್ರಾಮಪಂಚಾಯತಿ, ಸಣ್ಣ ಜವಳಿಉದ್ಯಮಗಳು, ಕಾರ್ಖಾನೆ, ಖಾಸಗಿ ವೈದ್ಯಕೀಯ ಕಾಲೇಜುಗಳು, ತರಭೇತಿ ಕೇಂದ್ರ, ವಿವಿಧ ಸಂಘಟನೆಗಳು ಮುಂತಾದ ಹತ್ತು ಹಲವು ಆಧುನಿಕ ಸೌಲಭ್ಯಗಳು ಈ ಗ್ರಾಮಕ್ಕೆ ಹೊಂದಿಕೊಂಡಿವೆ ಕಾರಣ ಈ ಗ್ರಾಮವು ದೊಡ್ಡಬಳ್ಳಾಪುರ ನಗರದಿಂದ ೧೦-೧೨ ಕಿ ಮೀ ದೂರದಲ್ಲಿದೆ, ನಗರ ಬೆಳೆದಂತೆ ಮುಂದೊಂದು ದಿನ ಕುರುಬರಹಳ್ಳಿ ಪಟ್ಟಣದಲ್ಲಿ ಸೇರಿ ಹೋಗುವ ಸಾಧ್ಯತೆಗಳು ಎದ್ದು ಕಾಣುತ್ತಿದೆ.

ಈ ಗ್ರಾಮದಲ್ಲಿ ವಾಸಿಸುವ ಮನೆಗಳಲ್ಲಿ ಹೆಚ್ಚು ಲಿಂಗಾಯತ ಮನೆತನಗಳಿದ್ದು, ಆದರೆ ಆ ಗ್ರಾಮದ ಹೆಸರು ಮಾತ್ರ ಕುರುಬರಹಳ್ಳಿ ಎಂದು ನಾಮಕರಣವಾಗಿದೆ. ಅಲ್ಲಿ ಯಾರೊಬ್ಬರು ಕುರುಬರ ಮನೆತನಗಳು ಕಂಡು ಬರುವುದಿಲ್ಲ. ಅದನ್ನು ಒಳ ಹೋಗಿ ನೋಡಿದಾಗ ಹಿಂದೆ ಆ ಗ್ರಾಮಕ್ಕೆ ಬಾಳೆಹೊನ್ನುರು ಪೀಠದ ಶ್ರೀ ರೇಣುಕಾನಂದ ಸ್ವಾಮಿಗಳು ಭೇಟಿ ನೀಡಿದ್ದರು ಆಗ ಅವರು ಆ ಗ್ರಾಮಕ್ಕೆ ರೇಣುಕಾಪುರ ಎಂದು ಮರು ನಾಮಕರಣ ಮಾಡಿದ್ದಾರೆ. ಆದರೂ ಸಹ ಈ ಗ್ರಾಮವನ್ನು ಕುರುಬರ ಹಳ್ಳಿಯೆಂದೇ ಕರೆಯಲಾಗುತ್ತಿದೆ ಹೊರತು ಯಾರೂ ರೇಣುಕಾಪುರ ಎಂದು ಕರೆಯುವುದಿಲ್ಲ. ವಾಸ್ತವ ವಾಗಿ ಹೊಳಹೊಕ್ಕು ನೋಡಿದರೆ ಆ ಗ್ರಾಮಕ್ಕೆ ಭೇಟಿ ನೀಡಿದ ಬಾಳೆಹೊನ್ನುರು ಪೀಠದ ಸ್ವಾಮಿಗಳು ಇಡೀ ಗ್ರಾಮಕ್ಕೆ ಲಿಂಗ ದೀಕ್ಷೆ ಮಾಡಿದ ನಂತರ ಗ್ರಾಮಸ್ಥರು ಲಿಂಗಾಯುತರಾಗಿರಬಹುದು ಎಂದು ತಿಳಿದು ಬರುತ್ತದೆ. ಅತೀ ಆಳಕ್ಕೆ ಹೊಕ್ಕಾಗ ಇವರುಗಳ ಮನೆದೇವರುಗಳು ಮೈಲಾರಲಿಂಗ, ಯಲ್ಲಮ್ಮ, ರೇಣುಕಾಂಬಗಳಾಗಿರುತ್ತವೆ.

ಡಾ ಎಂ ಎಂ ಕಲಬುರ್ಗಿ ಇವರು ತಮ್ಮ ಪುಸ್ತಕದಲ್ಲಿ ಕೆಲವೊಂದು ವಿಷಯಗಳನ್ನು ಚರ್ಚಿಸಿರುತ್ತಾರೆ. ಆದರೆ ವಾಸ್ತವವಾಗಿ ಇವರ ಚಲನೆ ನಿಜವಾದರು. ಅವರ ಸ್ಥಿತಿ ಮಾತ್ರ ಚಿಂತಾಜನಕವಾಗಿರುತ್ತದೆ. ಏಕೆಂದರೆ ಇವರು ಮೂಲ ವೃತ್ತಿ ಪಶುಸಂಗೋಪನೆ(ಕುರಿ ಸಾಕಾಣಿಕೆ, ದನಕರು) ವ್ಯವಸಾಯವನ್ನು ಮತ್ತು ಸಮುದಾಯವನ್ನು ಬಿಟ್ಟು ಹೊರ ಬಂದಿರುವುದರಿಂದ. ತಮ್ಮನ್ನು ಲಿಂಗಾಯುತರೆಂದು ಗುರುತಿಸಿ ಕೊಂಡಿರುವುದರಿಂದ ಹಿಂದೆ ಹೋಗಲು ಹಿಂಜರಿಯುತ್ತಿದ್ದಾರೆ. ಯಾವುದೇ ವೃತ್ತಿ ಭದ್ರತೆ ಇಲ್ಲ.

೪. ಬೆಂಗಳೂರು ಗ್ರಾಮಾಂತರ ವ್ಯಾಪ್ತಿಯಲ್ಲಿರುವ ದೇವನ ಹಳ್ಳಿ ತಾಲ್ಲೂಕಿನ ಲಾಲಗೊಂಡನ ಹಳ್ಳಿ ಹಿಂದೆ ಜೋಡಿ ಜಮೀನುದಾರರು ಗೌಡ್ಕಿಯನ್ನು ಮಾಡುತ್ತಿದ್ದರು. ಕಾಲಾಂತರದಲ್ಲಿ ಅವರು ಊರನ್ನು ಬಿಟ್ಟು ಪಕ್ಕದ ಊರಾದ ಕೋಡಿಮಂಚೇನಹಳ್ಳಿಗೆ ಹೋಗಿ ನೆಲೆಸಿದರು ಇಲ್ಲಿರುವ ಎಲ್ಲರೂ ಲಾಳಗೊಂಡರು ಹಾಗೂ ಇವರು ಮನೆ ದೇವರು ಮೈಲಾರ ಈ ಊರಲ್ಲಿ ಅವರು ಮೈಲಾರ ದೇವರ ದೇವಸ್ಥಾನವನ್ನು ನಿರ್ಮಿಸಿದ್ದಾರೆ. ಈ ಕುರಿತಂತೆ ಅನುಬಂಧದ ಚಿತ್ರದಲ್ಲಿ ದಾಖಲಿಸಲಾಗಿದೆ.

**ಲಾಲಗೊಂಡನಹಳ್ಳಿ, ಬೆಂಗಳೂರು**

ದೊಡ್ಡಬಳ್ಳಾಪುರ ತಾಲೂಕು ಆವುತಿ ಗ್ರಾಮ ಪಂಚಾಯತಿಯ ಅಧೀನಕ್ಕೆ ಒಳಪಡುವ ಲಾಲಗೊಂಡನ ಹಳ್ಳಿಗೆ ಭೇಟಿ ನೀಡಲಾಯಿತು. ಈ ಹಳ್ಳಿಯು ದೇವನಹಳ್ಳಿಯಿಂದ ಸಮಾರು ೩ ಕಿ

ಮೀ.ಗಳ ದೂರದಲ್ಲಿದೆ. ಈ ಹಳ್ಳಿಯು ಸುಮಾರು ವರ್ಷಗಳಿಂದ ಇರುತ್ತದೆ. ಈ ಹಳ್ಳಿಯಲ್ಲಿ ಸುಮಾರು ೨೫೦ ರಿಂದ ೩೦೦ ಕುಟುಂಬಗಳು ವಾಸಮಾಡಿತ್ತಿದ್ದು ಹಚ್ಚಾಗಿ ವ್ಯವಸಾಯವನ್ನೇ ಅವಲಂಬಿಸಿರುವ ಜನರಿದ್ದಾರೆ. ಈ ಹಳ್ಳಿಯು ಗುಂಪಾಗಿ ಇರದೇ ಚದುರಿದ ಮನೆಗಳಿಂದ ಕೂಡಿದೆ. ತೋಟ, ಹೊಲ ಗದ್ದೆಗಳ ಮಧ್ಯ ಅಲ್ಲಲ್ಲಿ ಹರಡಿಕೊಂಡಿದೆ ಇಲ್ಲಿನ ಮನೆಗಳು ಆಧುನಿಕತೆಯ ಮೆರುಗಿನಿಂದ ಕೂಡಿದ್ದು ಹೊಸದಾಗಿ ಕಟ್ಟಿದ ಮತ್ತು ಕಟ್ಟುತ್ತಿರುವ ಮನೆಗಳೇ ಹೆಚ್ಚು. ಇಲ್ಲಿ ವಿವಿದ ಸಮುದಾಯಕ್ಕೆ ಸೇರಿದ ಜನಾಂಗದವರು ವಾಸವಾಗಿದ್ದಾರೆ, ಕುರುಬರು, ತಿಗುಳರು, ಅಗಸರು, ರೆಡ್ಡಿಲಿಂಗಾಯತರು, ನೆಲೆಸಿರುತ್ತಾರೆ. ಈ ಹಳ್ಳಿಯ ಹೊಳ ಹೊಕ್ಕು ಅನ್ವೇಷಣೆ ಮಾಡಿ ನೋಡಿದಾಗ ಇಲ್ಲಿನ ಜನರ ಕಸುಬು ಪಶುಸಂಗೋಪನೆ, ವ್ಯವಸಾಯ, ಹೈನುಗಾರಿಕೆ ಹೂ ಬೆಳೆಯುವುದು. ಇಲ್ಲಿನ ಸುಮಾರು ಮನೆಗಳಿಗೆ ಭೇಟಿ ನೀಡಿ ವಿಚಾರಿಸಿದಾಗ ಲಿಂಗಾಯುತ ಸಮುದಾಯಕ್ಕೆ ಸೇರಿದ ಯಾವ ಜನಾಂಗವು ಇಲ್ಲಿ ನೆಲೆಸಿರುವುದಿಲ್ಲ. ಆದರೂ ಈ ಹಳ್ಳಿಗೆ ಲಾಲಗೊಂಡನಹಳ್ಳಿ ಎಂಬ ಹೆಸರು ಬಂದಿದೆ. ಲಾಲಾ ಅಥವಾ ಲಾಳಗೊಂಡರು ಲಿಂಗಾಯುತ ಸಮುದಾಯದ ಒಳಪಂಗಡವೆಂದು ಸಹ ಇವರಿಗೆ ಗೊತ್ತಿಲ್ಲ. ಅಲ್ಲದೇ ಹಚ್ಚಾಗಿ ಇಲ್ಲಿಗೆ ದೇವನಹಳ್ಳಿಯಿಂದ ಬಂದವರೇ ಹೆಚ್ಚು. ತಮ್ಮ ತಮ್ಮ ಜಮೀನುಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದಾರೆ. ಬೇರೆ ರಾಜ್ಯ ಆಂಧ್ರದಿಂದ ವಲಸೆ ಬಂದವರು ಸಹ ಇಲ್ಲಿ ನೆಲೆಸಿದ್ದಾರೆ. ತೆಲುಗುಭಾಷೆಯನ್ನು ಮಾತನಾಡುವ ಜನರು ಇದ್ದಾರೆ.

ಕ್ಷೇತ್ರಭೇಟಿ ನೀಡಿದ ಸಂದರ್ಭದಲ್ಲಿ ಇಲ್ಲಿನ ಹಿರಿಯರು ಹೇಳುವ ಪ್ರಕಾರ ಈ ಹಳ್ಳಿಗೆ ಜೋಡಿಜಮೀನುದಾರರು ಬಂದು ನೆಲೆಸಿ ಒಕ್ಕಲುತನವನ್ನು ಮಾಡುತ್ತಿದ್ದರು. ಕಾಲಾಂತರದಲ್ಲಿ ಅವರುಗಳು ಜಮೀನುಗಳನ್ನು ಮಾರಾಟಮಾಡಿ ಬೇರೆಬೇರೆ ಊರುಗಳಿಗೆ ವಲಸೆ ಹೋದರು, ಅದರಲ್ಲಿ ಕೆಲವು ಜನರು ಕೋಡಿಮಂಚೇನಹಳ್ಳಿಯಲ್ಲಿ ವಾಸವಾಗಿದ್ದಾರೆ. ಅವರೆಲ್ಲ ರೈತರು ವ್ಯವಸಾಯವನ್ನೇ ಮಾಡುತ್ತಿದ್ದಾರೆ. ಸುಮಾರು ವರ್ಷಗಳ ಹಿಂದಿನ ಮಾತಿದು ಎಂದು ಅಲ್ಲಿ ಸ್ಥಳಿಯರು ತಿಳಿಸಿದರು. ಈ ವಿಷಯವನ್ನು ಹುಡುಕಿ ಕೋಡಿಮಂಚೆನಹಳ್ಳಿಗೆ ಭೇಟಿ ನೀಡಿದಾಗ ಅಲ್ಲಿ ವಾಸಿಸುವ ಸಮುದಾಯವೆಲ್ಲಾ ಲಾಳಗೊಂಡರು. ಅವರು ಸಹ ಅಲ್ಲಿಂದ ವಲಸೆ ಬಂದಿರುವುದಾಗಿ ತಿಳಿಸಿದರು.

೫. ಬಾಣಸುರನ ಮಗಳಾದ ಉಷಾದೇವಿ ಓಖಿಮಠದಲ್ಲಿ ಲಾ(ನಾ)ಳಗೊಂಡೇಶ್ವರನ ಸಮಾದಿ ಕಟ್ಟಿಸಲಾಗಿದೆ. ಉಷಾದೇವಿ ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಮಡದಿ.

೬. ಕುರುಗೋಡು ನೀಲಮ್ಮ ನಾಳಗೊಂಡ ವಂಶದ ಮಹಿಳೆಯಾಗಿದ್ದು ಇವಳು ಪವಾಡದಿಂದ ಪ್ರಸಿದ್ಧಿ ಹೊಂದಿ ಈ ವಂಶಸ್ಥರಿಗೆ ದಾವಣಿಗೆರೆಂದು ಹೆಸರು ಬಂದಿತು.

೭. ಲಾಳ ಎಂದರೆ ನಾಳ, ಲಾಳಿ ಎಂದರೆ ನೇಯುವವ ದೊಡ್ಡಬಳ್ಳಾಪುರದ ಕುರುಬರಹಳ್ಳಿ ಲಾಳಗೊಂಡ ಕುಟುಂಬಗಳು ನೇಯ್ಗೆಯ ಕಾಯಕದಲ್ಲಿವೆ. ಈ ಎಲ್ಲಾ ಅಧ್ಯಯನಕಾರರ ಮತ್ತು ವಕ್ತೃಗಳ ತಿಳುವಳಿಕೆಯಿಂದ ದೃಢಪಟ್ಟ ಮೇಲೆ ಇನ್ನೂ ಸೂಕ್ಷ್ಮವಾಗಿ ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಜ್ಞರ ನೆಲೆಯಲ್ಲಿ ಅಧ್ಯಯನ ಮಾಡಬೇಕಾಗದ ಅಗತ್ಯತೆ ಇದೆ.

ಬುಖನಾನ್ ಪ್ರಾನ್ಸಿಸ್‌ರವರು ತಮ್ಮ ಪ್ರಯಾಣದಲ್ಲಿ ಬಿಡುವು ಮಾಡಿಕೊಂಡು ಲಾಳಗೊಂಡರ ಕುರಿತು ಒಂದು ಟಿಪ್ಪಣಿಯನ್ನು ರಚಿಸಿದ್ದಾರೆ. ಈ ಒಂದು ಟಿಪ್ಪಣಿ ಮಾತ್ರ ಲಾಳಗೊಂಡರ ಕುರಿತು ಇರುವ ಹಳೆಯ ಪ್ರತೀತಿ. ಇವರು ವಿವರಿಸಿದಂತೆ They are a tribe of Karnataka descent. They are farmers, bullock-hirers, gardeners, builders of mud walls and treders in straw and others small merchandize: but they never take service as batigaru or hinds. They have a hereditary chiefs called Ijyamanas: Who as usual with the assistant of a council, settle disputes, punish and transgressions against the rules of caste by mulcting the offender in an entertainment are by a temporary excommunication.

ಲಾಳಗೊಂಡರು ಕರ್ನಾಟಕದ ಬುಡಕಟ್ಟಿನ ಮೂಲದವರು. ಒಕ್ಕಲುತನ, ಎತ್ತುಗಳ ಬಾಡಿಗೆ, ಕೆಸರಿನಗೋಡೆ ನಿರ್ಮಾಣ ಕಾರ್ಯ, ಒಣ ಹುಲ್ಲು ಹಾಗೂ ಸಣ್ಣ ವ್ಯಾಪಾರ ಮಾಡುವರು ಅಲ್ಲದೆ ಕೃಷಿ ಮತ್ತು ನೇಯ್ಗೆಯಲ್ಲಿ ತೊಡಗಿರುವರು ಎಂದು ಬುಖನಾನ್ ರವರು ವಿವರಿಸಿದ್ದಾರೆ. ಈ ಅಂಶಗಳು ಲಾಳಗೊಂಡರಿಗೆ ಸಮೀಪದಲ್ಲಿವೆ ದೊಡ್ಡಬಳ್ಳಾಪುರ ವ್ಯಾಪ್ತಿಯಲ್ಲಿ ಬರುವ ಲಾಳಗೊಂಡರು ಇಂದಿಗೂ ನೇಯ್ಗೆಯ ಕಾಯಕದಲ್ಲಿರುವರು ಕೃಷಿ ಇವರ ಪ್ರಧಾನ ಕಾರ್ಯವಾಗಿದೆ. ಇವರ ಗುರುಗಳು ಲಿಂಗಧಾರಕ ಸನ್ಯಾಸಿಗಳು ಮೈಲಾರದಲ್ಲಿರುವರೆಂದು ಹೇಳಿದ್ದಾರೆ. ಮೈಲಾರದಲ್ಲಿರುವ ಮೈಲಾರೇಶ್ವರ ಕುರುಬರ ಆರಾಧ್ಯ ದೈವವಾಗಿದೆ. ಬುಖನಾನ್‌ರವರು ವಿವರಿಸಿದ ಹಾಗೆ ಲಾಳಗೊಂಡರು ಶಕ್ತಿದೈವಗಳಿಗೆ ಬಲಿಗಳನ್ನು ಅರ್ಪಿಸುವರು ಆದರೆ ಮಧ್ಯಮಾಂಸ ಸೇವಿಸುವುದಿಲ್ಲ ಇವರ ವಿವರಣೆಯಂತೆ ಭಾರತದ ಎಲ್ಲಾ ಬುಡಕಟ್ಟುಗಳಲ್ಲಿ ಬಲಿಪದ್ಧತಿ ರೂಢಿಯಲ್ಲಿದೆ. ಇದು ಸಹ ಲಾಳಗೊಂಡರ ಬುಡಕಟ್ಟಿನ ಮೂಲದವರು ಎನ್ನುವುದಕ್ಕೆ ಒಂದು ಪ್ರತೀತಿ. ಆದರೆ ಈಗಿನ ಲಾಳಗೊಂಡರಲ್ಲಿ ಈ ಪದ್ಧತಿ ಇಲ್ಲ. ಕಾರಣ ಲಾಳಗೊಂಡರು ಹಲವು ತಲೆಮಾರುಗಳನ್ನು ದಾಟಿ ನೆಲೆನಿಂತ ಸಮುದಾಯವಾಗಿದೆ. ಈ ಸಮುದಾಯ ಲಿಂಗಬಣಜಿಗರ ಮನೆಯಲ್ಲಿ ಆಹಾರ ಸೇವಿಸುವುದಾಗಲಿ ಹಾಗೂ ಅವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದಾಗಲಿ ಮಾಡುವುದಿಲ್ಲ. ಇಂದಿಗೂ ಸಹ ಲಾಳಗೊಂಡರು ಲಿಂಗ ಬಣಜಿಗರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುವುದಿಲ್ಲ. ಆದರೆ ಊಟಉಪಚಾರವನ್ನು ಮಾಡುವರು.

ಬುಖನಾನ್‌ರವರ ಹೇಳಿಕೆಯಲ್ಲಿ ಹಲವು ಅಂಶಗಳನ್ನು ಲಾಳಗೊಂಡರಲ್ಲಿ ಕಾಣಬಹುದು. ಕೆಲವೊಂದು ಅಂಶಗಳು ಇಂದು ಬಿಟ್ಟುಹೋಗಿವೆ. ಏಕೆಂದರೆ ಲಾಳಗೊಂಡರು ಇಂದು ತಾವು ಲಾಳಗೊಂಡರೆಂದು ಹೇಳಿಕೊಳ್ಳಲು ಹಿಂಜರಿಯುವರು. ಅಧ್ಯಯನಕಾರರ ಮತ್ತು ವಕ್ತೃಗಳ ತಿಳುವಳಿಕೆಯಿಂದ ದೃಢಪಟ್ಟ ಮೇಲೆ ಇನ್ನೂ ಸೂಕ್ಷ್ಮವಾಗಿ ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಜ್ಞರ ನೆಲೆಯಲ್ಲಿ ಅಧ್ಯಯನ ಮಾಡಬೇಕಾಗದ ಅಗತ್ಯತೆ ಇದೆ.

ರೆಸೆಲ್ ಮತ್ತು ಹೀರಾಲಾಲ್‌ರವರು ಹೇಳಿರುವಂತೆ 'ಲಾಣ' ಎಂಬುದು ಮಧ್ಯಪ್ರದೇಶದ ಮತ್ತು ಆಂಧ್ರಪ್ರದೇಶದ ಗಡಿಭಾಗದ ಒಂದು ಪ್ರಾಂತ ಈ ಪ್ರಾಂತವು ಗೊಂಡರಿಂದ ಆಳಲ್ಪಟ್ಟಿರುವುದು ಎಂದು ಪ್ರಸ್ತಾಪಿಸಿದ್ದಾರೆ. ಇವರ ಹೇಳಿಕೆಗೆ ಸ್ಪಷ್ಟತೆ ನೀಡುವಂತೆ ಲಾಳಗೊಂಡರು ಆಂಧ್ರ ಮತ್ತು ಮಧ್ಯಪ್ರದೇಶದಿಂದ ವಲಸೆ ಬಂದಿರುವರು. ಇಲ್ಲಿ ಪ್ರಮುಖವಾಗಿ ಗಮನಿಸಬಹುದಾದ ಅಂಶವೆಂದರೆ ಅವರ ವಂಶವೃಕ್ಷ, ಅವರ ಮೂಲ, ಅವರ ದೈವಾರಾಧನೆ ಅವರ ಪೀಠಗಳು ಸಹ ಆಂಧ್ರದಿಂದ ಬಂದವರೆಂದು ತಿಳಿಸುತ್ತವೆ. ಇವರ ವಂಶವೃಕ್ಷವನ್ನು ಗಮನಿಸಿದಾಗ ಲಾಳಗೊಂಡರು ಆಂಧ್ರದಿಂದ ವಲಸೆ ಬಂದಿದ್ದು ಕಂಡುಬರುತ್ತದೆ. ಅಲ್ಲದೆ ಇವರು ಬೆಟ್ಟದ ಮೂಲದವರು ಎಂದು ತಿಳಿದುಬರುತ್ತದೆ. ಹಾಗೆಯೇ ಲಾಣ ಎಂಬ ಪ್ರದೇಶ ಸೂಚಕವು ಅವರೊಂದಿಗೆ ಸಮುದಾಯವಾಚಕವಾಗಿ (ಲಾಣ>ಲಾಳ) ಮಾರ್ಪಾಟಾಗಿ ಮುಂದುವರೆದು ಅಲ್ಲಿರುವ ಜನರು ಲಾಳಗೊಂಡರಾಗಿರಬಹುದು ಎಂಬುದನ್ನು ಪ್ರತಿನಿಧಿಸುತ್ತದೆ. ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ತಿಳಿಸಿರುವಂತೆ ಇವರಲ್ಲಿ ಶ್ರೀಶೈಲ ಪೀಠದವರೇ ಹೆಚ್ಚು ಕಂಡುಬರುವರು.

ಗೊಂಡ್ವಾನ್ ಸಂಸ್ಕೃತಿ ಅರ್ಥಾತ್ ಸಿಂಧೂಸಂಸ್ಕೃತಿ ಎಂಬ ಸಂಪಾದಿತ ಕೃತಿಯಲ್ಲಿ ಪಂಪನಗೌಡ ಎಂ ಆರ್ ಇವರು ಬಹಳಷ್ಟು ಲೇಖನ ಮತ್ತು ಕೃತಿಗಳನ್ನು ಸಂಗ್ರಹಿಸಿ ಲಾಳಗೊಂಡರ ಇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ. ಹರಪ್ಪ ಮತ್ತು ಸಿಂಧೂನಾಗರಿಕತೆಯ ಇತಿಹಾಸದಿಂದ ಸಮುದಾಯದ ಬೆಳವಣಿಗೆಯ ಕುರಿತು ವಿವರಿಸಿರುವರು. ಲಾಳಗೊಂಡರು ಮಧ್ಯಪ್ರದೇಶ ರಾಜ್ಯದ ಬಾಲ್ಘಾಟ್ ಜಿಲ್ಲೆಯ ಲಾಣ ಎಂಬ ಪ್ರದೇಶದಿಂದ ಬಂದವರೆಂದು ತಿಳಿದು ಬರುತ್ತದೆ. ಇವರ ಹೇಳಿಕೆ ನಾಳಗೊಂಡೇಶ್ವರ ಪುರಾಣ ಕಾವ್ಯಂ ನಲ್ಲಿ ತಿಳಿಸಿರುವಂತೆ ಲಾಳಗೊಂಡರು ಉತ್ತರಭಾರತದಿಂದ ಬಂದವರೆಂಬ ಹೇಳಿಕೆಗೆ ಸಮರ್ಥನೀಯವಾಗಿದೆ. ಈ ಕೃತಿಯಲ್ಲಿ ಅವರು ಗೋತ್ರ ಪ್ರಾಣಿ, ಗೋತ್ರಗಳು, ಗಣಗಳು(ಅಮರಗಣಗಳು) ಕುರಿತು ವಿವರಿಸುವರು ಇವುಗಳು ಲಾಳಗೊಂಡರಿಗಿರುವ ಆಧಾರವನ್ನು ಸೂಚಿಸುತ್ತವೆ.

**೩.೬ ಧಾರ್ಮಿಕ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಆಧಾರಗಳು, ಪುರಾಣಗಳು ಮತ್ತು ಐತಿಹ್ಯಗಳು**

ಪ್ರತಿಯೊಂದು ಸಮುದಾಯದ ಹುಟ್ಟಿನಿಂದ ಆಯಾ ಸಮುದಾಯದ ಮೂಲ ಸಂಪ್ರದಾಯ ಆಚರಣೆಗಳನ್ನು ಬಲವಾಗಿ ನಂಬಿಕೊಂಡು ಬಂದಿರುತ್ತಾರೆ. ಅದೇ ರೀತಿ ಆ ಸಂಪ್ರದಾಯಕ್ಕೆ ಒಂದು ಕಥೆಯನ್ನು ಸಹ ಹೊಂದಿರುತ್ತವೆ. ಈ ಕಥೆಯನ್ನೆ ನಾವು ಪುರಾಣಗಳು ಐತಿಹ್ಯಗಳೆಂದು ವಿವರಿಸಿ ಅದಕ್ಕೆ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಸಮರ್ಥನೆ ನೀಡುತ್ತೇವೆ. ಪುರಾಣ ಎನ್ನುವುದು ದೇವತೆಗಳಿಗೆ, ಉಪದೇವತೆಗಳಿಗೆ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದ ಕಥೆ, ವಿಶ್ವದ ಸೃಷ್ಟಿ ಅದರ ವ್ಯವಸ್ಥೀಕರಣ, ಒಂದು ದೇಶದ, ಒಂದು ಸಮುದಾಯದ, ಒಂದು ಬುಡಕಟ್ಟಿನ ಮೂಲ ಅಥವಾ ಒಂದು ಸಂಸ್ಕೃತಿಯ ಮೂಲ ಇವುಗಳನ್ನು ಕುರಿತ ಹೇಳಿಕೆ ಅಥವಾ ಕಥೆಯನ್ನು ಪುರಾಣಗಳೆಂದೇ ಕರೆಯಲಾಗುತ್ತದೆ.

ಆದರೆ ವ್ಯಕ್ತಿಗಳಿಗೆ, ಸ್ಥಳಗಳಿಗೆ ಮತ್ತು ಘಟನೆಗಳಿಗೆ ಸಂಬಂಧಿಸಿದ ಸತ್ಯವಾದ ಅಥವಾ

ಕಾಲ್ಪನಿಕವಾದ ಹೇಳಿಕೆಗಳನ್ನು ಒಳಗೊಂಡ ಕಥನಗಳನ್ನು ಐತಿಹ್ಯಗಳೆಂದು ಕರೆಯಲಾಗುತ್ತದೆ. "narratives about persons, places or facts including real or pretended belief are called legends "(Kenneth and mary Clarke 1963:24)

ಐತಿಹ್ಯ ಮತ್ತು ಇತಿಹಾಸ ಎರಡಕ್ಕೂ ವ್ಯತ್ಯಾಸವಿದೆ. ಐತಿಹ್ಯ ಪರಂಪರಾಗತವಾಗಿ ಬಂದಿರುವ ಕಥಾನಕ, ಇದರಲ್ಲಿ ಬರುವ ಘಟನೆಗಳು ಕಾಲ್ಪನಿಕವಾಗಿರಬಹುದು, ಇಲ್ಲವೇ ನಿಜವಾಗಿ ನಡೆದಿರಬಹುದು. ಅಂದರೆ ಇಲ್ಲಿನ ಘಟನೆಗಳು ಹೀಗೆಯೇ ನಡೆದಿರುವುದೆಂದು ಹೇಳಲು ಸಾಧ್ಯವಿಲ್ಲ, ಇದೇ ಮಾತನ್ನು ವ್ಯಕ್ತಿಗಳಿಗೂ ಪ್ರದೇಶಗಳಿಗೂ ಅನ್ವಯಿಸಬಹುದು. ಆದರೆ ಇತಿಹಾಸ ಒಂದು ಘಟನೆ ಖಚಿತವಾಗಿ ನಡೆದಿದ್ದು ಎಂಬುವುದನ್ನು ಆಧಾರಗಳಿಂದ ಸ್ಪಷ್ಟವಾಗಿ ತಿಳಿಸುತ್ತದೆ. ಹಾಗೆಯೇ ವ್ಯಕ್ತಿಗಳಾಗಲಿ, ಪ್ರದೇಶಗಳಾಗಲಿ ಇದ್ದುದಕ್ಕೆ ಇತಿಹಾಸದಲ್ಲಿ ಆಧಾರಗಳು ದೊರೆಯುತ್ತವೆ. (ಅವರೇ,೧೯೬೩:೨೫).

ಗೊಂಡರ ಧಾರ್ಮಿಕ ಪೌರಾಣಿಕ ನಂಬಿಕೆಯ ಪ್ರಕಾರ ೮೮ ಸಂಭೋಶೇಖರರು ಹೋಗಿದ್ದು, ಅವರು ಗೊಂಡ್ವಾನ ಲ್ಯಾಂಡಿನ ಮೂಲಿಗರು ಹಾಗೂ ಅವರಿಂದ ನಿರ್ಮಾಣವಾದ ಗೋತ್ರ ಸೂತ್ರಗಳಿಂದ ಬಂದಿಸಲ್ಪಟ್ಟಿರುವವು ಈ ಪ್ರಕಾರ ೪೪ ನೇ ಸಂಭೋವಿನ ಶಿಷ್ಯನಾದ ಕುಪಾರೋಲಿಂಗೋನು, ಕಾಳಿಂಕಂಕಾಳಿ ಹಾಗೂ ಸುಖಾಶ್ರಯರು ೩೩ಕೋಟಿ(ಗರ್ಭಸ್ಥ)ಮಕ್ಕಳನ್ನು ಕೋಯ್ಲಿ ಕಛಾರಘಢ ಗುಹೆಯಿಂದ ಬಂದನದಲ್ಲಿದ್ದವರನ್ನು ಬಿಡಿಸಿ, ಲಾಂಜೀಕೋಟ್ನಲ್ಲಿ ಗೋತ್ರ, ದೇವತೆಗಳ ಗುಂಪುಗಳಾಗಿಸಿದನು. ೩೩ ಕೋಟಿ ಶಿಶುಗಳನ್ನು ಸೂರ್ಯಚಂದ್ರರ ಚಲನೆಯ ಆಧಾರದಲ್ಲಿ ೭೫೦ ಗೋತ್ರಗಳಲ್ಲಿ ವಿಂಗಡಿಸಿದನು. ಕೋಯ್ಲಿ ಕಛಾರಘಢ ಗುಹೆಯು ಮಹರಾಷ್ಟ್ರದ ಗೊಂಡಿಯಾ ಜಿಲ್ಲೆಯಲ್ಲಿದೆ. ಇಲ್ಲಿಂದ ಲಾಂಜಿಕೋಟ್ ಸುಮಾರು ೫೦-೬೦ ಕಿ ಮೀ ದೂರದಲ್ಲಿದ್ದು ಮಧ್ಯಪ್ರದೇಶದ 'ಬಾಲ್ಗಾಟ್ ಜಿಲ್ಲೆಯಲ್ಲಿದೆ. ಈ ಲಾಂಜಿಕೋಟ್ ನಲ್ಲಿ ಗೋತ್ರ ಸೂತ್ರಗಳನ್ನು ರಚಿಸಲಾಗಿದ್ದರಿಂದ ಈ ಲಾಂಜಿಕೋಟ್ ಅನ್ನು ಹಾಗೂ ೩೩ ಕೋಟಿ ಮಕ್ಕಳು ಬಂದಿಯಾಗಿದ್ದ ಕೋಯ್ಲಿ ಕಛಾರಘಢವನ್ನು ಗೊಂಡೀಧರ್ಮದಲ್ಲಿ ಬಹಳ ಗೌರವದಿಂದ ಕಾಣಲಾಗುತ್ತದೆ. ಈ ಘಟನೆಯನ್ನು ಕ್ರಿ ಪೂ ೧೭೬೫೬ ಎಂದು ಅಂದಾಜಿಸಲಾಗಿದೆ. ಇದಾದ ನಂತರ ದ್ರಾವಿಡಾರ್ಯ ಜನಾಂಗೀಯ ಸಂಸ್ಕೃತಿಯ ಸಂಕ್ರಮಣಕ್ಕೂ ಇದೇ ಗೊಂಡರ ೧೦ ನೇ ಸಂಭೋ ಕಾರಣನಾಗಿದ್ದರಿಂದ ಅವನನ್ನು ಸಂಭೋ ಶಂಕರನೆಂದು ಕರೆಯುತ್ತಾರಲ್ಲದೆ, ೪೪ ನೇ ಸಂಭೋವಿನ ೭೫೦ ಗೋತ್ರಗಳ ವ್ಯವಸ್ಥೆಗೆ ಪರ್ಯಾಯವಾಗಿ ೪ ವರ್ಣದಲ್ಲಿ ಆರ್ಯರು ೭೫೦ ಗೋತ್ರಗಳನ್ನು ಕರ್ಮ ಸಿದ್ಧಾಂತದ(ಶ್ರಮವಿಭಜನೆ) ಆಧಾರದ ಮೇಲೆ ಸೂರ್ಯ ಚಂದ್ರ ವಂಶಗಳೆಂದು ವಿಭಾಗಿಸಿದರು. ಈ ನಾಲ್ಕು ವರ್ಣಗಳಲ್ಲಿ ವೈಧಿಕರು ಅನುಸರಿಸುವ ೭ ಗೋತ್ರಗಳ ಮೂಲ ಪುರುಷರು ಸಹ ಹಿಂದೂಗಳ ಜಾತಿ ವ್ಯವಸ್ಥೆಯಲ್ಲಿ ನಿಮ್ನ ವರ್ಗದಿಂದ ಬಂದವರೇ ಹೆಚ್ಚು ಆಗಿದ್ದಾರೆ. ಈ ಗೋತ್ರ ವ್ಯವಸ್ಥೆಯ ಆರಂಭ ಕ್ರಿ ಪೂ ೫೧೧೪ಕಕ್ಕೂ ಮೊದಲು, ಅಂದರೆ ಶ್ರೀರಾಮಚಂದ್ರನ ಜನನಕ್ಕೂ ಸ್ವಲ್ಪ ಮುಂಚೆ ಆರಂಭವಾಗಿ,

ಮಹಾಭಾರತದ ಯುದ್ಧದ ಕಾಲಕ್ಕೆ ಅಂದರೆ ಕ್ರಿ ಪೂ ೩೧೦೨, ಫೆಬ್ರವರಿ ೧೭-೧೮ ಕ್ಕೆ ಮುಗಿದು ಹೋಗಿತ್ತು. ಏಕೆಂದರೆ ಭಗವದ್ಗೀತೆಯನ್ನು ಪಂಚಮ ವೇದವೆಂದು ಹಿಂದೂಗಳು ಕರೆಯುತ್ತಾರೆ ಹಾಗೂ ನಂಬುತ್ತಾರೆ.

ಗೊಂಡರ ೭೫೦ ಗೋತ್ರಗಳನ್ವಯ ಪ್ರತಿಯೊಂದು ಗೋತ್ರಕ್ಕೂ ತಾವು ಪಾಲನೆ, ಪೋಷಣೆ, ರಕ್ಷಣೆ ಮಾಡಬೇಕಾದ ಸಸ್ಯ, ಪ್ರಾಣಿ, ಪಕ್ಷಿಗಳನ್ನು ನಿರ್ಣಯಿಸಿ ಒಂದೊಂದು ಗೋತ್ರಕ್ಕೆ ೩ ಗಣ ಚಿಹ್ನೆಗಳನ್ನು ೪೪ನೇ ಸಂಭೋವಿನ ಶಿಷ್ಯ-ಕುಪಾರೋ ಲಿಂಗೋ ನಿರ್ಣಹಿಸಿರುತ್ತಾನೆ. ಈ ಗಣ ಚಿಹ್ನೆಗಳನ್ನು, ೩೩ ದೇವತೆಗಳ(ಒಟ್ಟು= ೭೫೦*೩=೨೨೫೦) ಸಮೂಹವನ್ನು ನಂತರ ಆರ್ಯರು ಸಂಕ್ಷಿಪ್ತಗೊಳಿಸಿ ೩ ದೇವತೆಗಳ ಗುಂಪಾಗಿ ವಿಂಗಡಿಸುತ್ತಾರೆ. ಅವಾವು ಎಂದರೆ೧) ಭೂಮಿಯ ದೇವತೆಗಳು ೨) ವಾಯುಮಂಡಲದ ದೇವತೆಗಳು ಮತ್ತು ೩) ಸ್ವರ್ಗದ ದೇವತೆಗಳು (ಪ್ರಸನ್ನ ಕುಮಾರ:೨೦೦೮;೫೦-೫೬). ಅಂದರೆ ಗೊಂಡರ (ದ್ರಾವಿಡರ) ಏಕ ವರ್ಣ ವ್ಯವಸ್ಥೆಯ, ೭೫೦*೩=೨೨೫೦ ಕುಲ ಚಿಹ್ನೆಗಳ ದೇವತೆಗಳನ್ನು ೩ ದೇವತೆಗಳ ಗುಂಪಾಗಿ ಮೇಲಿನಂತೆ ಆರ್ಯರು ಚತುರ್ವರ್ಣಗಳಲ್ಲಿ ವಿಂಗಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕನ್ನಡದ ಪ್ರಸಿದ್ಧ ಸಂಶೋಧಕರಾದ ಡಾ ಎಂ ಎಂ ಕಲಬುರ್ಗಿ ಇವರು ಒಂದು ಹಂತದಲ್ಲಿ ಕರ್ನಾಟಕದಲ್ಲಿ ಜಾತಿಗಳಷ್ಟೇ ಇದ್ದವು ಎನ್ನುತ್ತಾರೆ.(ಕನ್ನಡ ಪ್ರಭ, ೨೦೧೨ ಅಕ್ಟೋಬರ್ ೧೪ ಹುಬ್ಬಳ್ಳಿ ಆವೃತ್ತಿ). ೮೮ನೇ ಸಂಬೋಶೇಖರನ ಆಳ್ವಿಕೆ ಕ್ರಿ ಪೂ ೩೫೮೦ ರ ವೇಳೆಗೆ ಮುಗಿದಿರಬಹುದಾಗಿದ್ದು, ಆರ್ಯೀಕರಣ ಕ್ರಿ ಪೂ ೬೦೦೦ ದಲ್ಲಿ ಆರಂಭವಾಗಿ ಕ್ರಿ ಪೂ ೩೧೦೨ ರಲ್ಲಿ ಮುಗಿದಿದೆ. ಸುಮಾರು ೩೦೦೦ ವರ್ಷಗಳ ಹಂತರದಲ್ಲಿದೆ. ಇದನ್ನು ಲಾಳಗೊಂಡರು 'ನಾಳಗೊಂಡೇಶ್ವರಪುರಾಣಕಾವ್ಯಂ'ದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಬಹುದು. ನಾಳಗೊಂಡೇಶ್ವರನು ಕಲಿಯುಗದ ಆರಂಭದಲ್ಲಿದ್ದಾನೆಂದು ಅವನ ಸಮಾಧಿಯನ್ನು ಕೇದಾರದಲ್ಲಿ ಭಾಣಾಸುರನ ಮಗಳಾದ, ಶ್ರೀ ಕೃಷ್ಣನ ಮೊಮ್ಮಗ ಅನಿರುದ್ಧನ ಹೆಂಡತಿಯಾದ ಉಷಾದೇವಿಯು ಸ್ಥಾಪಿಸಿದಳೆಂದು ಹೇಳಲಾಗಿದೆ. ನಾಳಗೊಂಡೇಶನು ಕಲಿಯುಗ ಆರಂಭದಲ್ಲಿದ್ದು ತನ್ನ ಅನುಯಾಯಿಗಳಿಗೆ ದಕ್ಷಿಣಕ್ಕೆ ಹೋಗಲು ನಿರ್ದೇಶಿಸಿದನು ಶಾಂತಿಪ್ರಿಯರಾದ ನೀವು (ಗೊಂಡರು ದಕ್ಷಿಣಕ್ಕೆ ಹೋದರೆ ನಿಮಗೆ ಊರ, ನಾಡಿನ, ದೇಶದ ಯಜಮಾನ್ಯ ಸಿಗುತ್ತದೆ. ಇನ್ನು ಮುಂದೆ ದ್ರಾವಿಡ ಆರ್ಯ ಘರ್ಷಣೆ ಹೆಚ್ಚುತ್ತದೆ ಎಂಬ ಮಾತಿನ ಅನ್ವಯ, ಬಿಲ್ಲ, ಖೋತ, ಗೊಂಡ ಇತ್ಯಾದ ಬುಡಕಟ್ಟುಗಳು ದಕ್ಷಿಣಕ್ಕೆ ಚಲಿಸಿವೆ ಎನ್ನಬಹುದು. ಇದು ಗೆಜೆಟಿಯರ್ಸ್ ಗಳಲ್ಲಿ ಗೊಂಡರನ್ನು ರಾವಣ ವಂಶೀಯರೆಂದು, ಅದಕ್ಕೆಂದೇ ದಕ್ಷಿಣಕ್ಕೆ ತಳ್ಳಲಾಯಿತೆಂದು ಉಲ್ಲೇಖಿಸಿದ ಹಿನ್ನೆಲೆಗೆ ಪೂರಕವಾಗಿದೆ. ಮಹಾಭಾರತ ಯುದ್ಧ ಮುಗಿದು, ಕಲಿಯುಗ ಪ್ರವೇಶದ ನಂತರ (ಕಲಿಯುಗ ೫೧೧೪) ನಾಗವಂಶಜರು ಖಾಂಡವಾನನ ದಹನದ ನಂತರ ದಕ್ಷಿಣಕ್ಕೆ ಸ್ಥಾನಾಂತರವಾದರೆನ್ನಬಹುದು. ಏಕೆಂದರೆ ನಾಗವಂಶಜರು ಮಹಾಭಾರತ ಯುದ್ಧದಲ್ಲಿ ಯಾರ ಪರ-ವಿರೋಧವನ್ನು ವಹಿಸಿರಲಿಲ್ಲವೆಂದು ತಿಳಿದುಬರುತ್ತದೆ. ಇವರು ಹಸ್ತಿನಾವತಿಯ ಹತ್ತಿರ ಕೇಂದ್ರೀಕೃತವಾಗಿರುವುದು ಆಗಿನ ರಾಜವ್ಯವಸ್ಥೆಯಲ್ಲಿ ಶ್ರೀ ಕೃಷ್ಣನಿಗಾಗಲಿ

ಯುದ್ಧದಲ್ಲಿ ಗೆದ್ದ ಪಾಂಡವರಿಗಾಗಲಿ ಬೇಕಾಗಿರಲಿಲ್ಲ. ಆದ್ದರಿಂದಲೇ 'ಅಶ್ವಮೇಧ'ಯಾಗದ ನೆಪದಲ್ಲಿ ನಾಗಾಲೋಕವನ್ನು ಆಕ್ರಮಿಸಲು ಹೋದಾಗ ಬಬ್ರುವಾಹನನಿಂದ ಪಾಂಡವರ ಅರ್ಜುನನಿಗೆ ಮುಖಭಂಗವಾಗಿದ್ದು. ನಾಗಮಣಿಯಿಂದಲೇ ನಂತರ ಪಾಂಡವರ ನಾಯಕನಾದ ಅರ್ಜುನನ ಪುನರ್ಜನ್ಮವಾಗಿದ್ದು. ಆ ನಾಗ ವಂಶಜರು ಪ್ರಾಬಲ್ಯವಿದ್ದ ನಾಡೇ ನಾಗರಖಂಡ, ನಾಗಾಲೋಕ ಎಂಬ ಹೆಸರುಗಳಿಂದ ನಂತರ ಪ್ರಾಯಶಃ ಪ್ರಸಿದ್ಧವಾಗಿದೆ ಇಂದಿಗೂ ಗೊಂಡರು ಸಂಭೋವನ್ನು ನಾಗವಂಶಜನೆಂದು ಕರೆಯುತ್ತಾರೆ. ಅಂದರೆ ಅವನ ಟೋಟೆಮ್ ನಾಗಾ ಅಂದರೆ ಸರ್ಪ ಅಥವಾ ಹಾವು. ಈ ನಾಗಪೂಜೆ, ನಾಗಮಂಡಲ, ಸಪ್ತನಾಗದೇವತೆಯ ದೇವಸ್ಥಾನಗಳು ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ವಿಶೇಷವಾಗಿವೆ ಹಾಗೂ ಹಿಂದೂಗಳ ದೇವತೆಯಾದ ಶಿವನು ಯಾವಾಗಲೂ ನಾಗದಾರಿಯಾಗಿಯೇ ಕಾಣಿಸಿಕೊಳ್ಳುತ್ತಾನೆ  ಹಾಗೂ ಪೂಜೆಗೊಳ್ಳುತ್ತಿದ್ದಾನೆ.

ಡಾ ಬಿ ಆರ್ ಅಂಬೇಡ್ಕರ್ ರವರು ಚೇರರ ಕುರಿತು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ "ಚೇರ ಸಾಮ್ರಾಜ್ಯದ ಸಂಸ್ಥಾಪಕರು ನಾಗವಂಶೀಯ ಕುಡಿಗಳು. ಏಷ್ಯಾ ಖಂಡದ ಉತ್ತರ-ಪಶ್ಚಿಮ (ವಾಯುವ್ಯ ದಿಕ್ಕಿನ) ಭಾಗದಿಂದ ದಕ್ಷಿಣದತ್ತ ಚಲನೆಗೊಂಡು, ನಂತರ ಗೊಂಡರೆಂದು ಕರೆಯಲ್ಪಟ್ಟರು. ಗೊಂಡರು ದಖ್ಖನಿ ವಿಭಾಗದಲ್ಲಿ ಗೊಂಡವಾನ್ ಸಾಮ್ರಾಜ್ಯವನ್ನು ಸ್ಥಾಪಿಸಿದರು. ದಖ್ಖನ್ ವಿಭಾಗವು ಆಹಾರ ಸಂಗ್ರಹಣೆ ಮತ್ತು ಬೇಸಾಯಕ್ಕೆ ಪ್ರಾಶಸ್ತವಾದ ಪ್ರದೇಶ. ತರುವಾಯ ಗೊಂಡರಲ್ಲಿ ಒಂದು ಗುಂಪು ಭಾರತದ ಕರಾವಳಿಗೆ ಚಲಿಸಿ ಅರಬ್ಬೀಸಮುದ್ರದ ತೀರದ ಪಶ್ಚಿಮಘಟ್ಟ ಪ್ರದೇಶದಲ್ಲಿ ನೆಲೆಗೊಂಡಿರುವುದು". ಕೇರಳದ ಚೇರರು, ವೈನಾಡಿನ ಕುರುಂಬರು ಮತ್ತು ಕರ್ನಾಟಕದ ಗೊಂಡ ಆದಿವಾಸಿಗಳು ಕಳ್ಳು-ಬಳ್ಳಿಗಳೆಂದು ಈ ಚಾರಿತ್ರಿಕ ಮಾಹಿತಿಯಿಂದ ಅಲ್ಲದೆ ಇವರು ನಾಗವಂಶಿಗಳೆಂದು ಸ್ಪಷ್ಟವಾಗುತ್ತದೆ. ಈ ನಾಗ ವಂಶಿಗಳ ಮೂಲ ದ್ರಾವಿಡರು ದಕ್ಷಿಣ ಭಾರತದ ಬಹುಸಂಖ್ಯಾತ ರಾಜವಂಶಜರು ತಾವು ನಾಗವಂಶಜರೆಂದು, ಫಣೀಂದ್ರ ವಂಶಜರೆಂದು ಹೇಳಿಕೊಳ್ಳುತ್ತಾರೆ. ನಂತರ ತಮ್ಮ ಮೂಲವನ್ನು ಕಾಳಂಜಪುರಕ್ಕೆ, ಅಹಿಚ್ಛತ್ರಪುರಕ್ಕೆ ಜೋಡಿಸಿಕೊಳ್ಳುತ್ತಾರೆ. ಈ ಅಹಿಚ್ಛತ್ರಪುರವು ಹಸ್ತಿನಾವತಿಯ ಹತ್ತಿರದ ಉತ್ತರ ಪ್ರದೇಶದ ಬರೇಲಿ ಜಿಲ್ಲೆಯಲ್ಲಿದೆ. ಪ್ರಾಯಶಃ ೭೫೦/೭೭೦ ಗೋತ್ರಧಾರಿಗಳು ಮೂಲತಃ ವಿವಿಧ ಪ್ರದೇಶಗಳಲ್ಲಿದ್ದು ಪ್ರತ್ಯೇಕ ರಾಜ ವ್ಯವಸ್ಥೆ ಹೊಂದಿರಬಹುದಾಗಿದ್ದು, ನಂತರ ಗಢ, ಗಣ ರಾಜ್ಯಗಳಾಗಿ ರೂಪುಗೊಂಡಿರಬಹುದು.

ಇಂದಿಗೂ ಗೊಂಡರಲ್ಲಿ ೭೫೦ ಗೋತ್ರಗಳ ಗಟ್ಟಿಮುಟ್ಟಾದ ವ್ಯವಸ್ಥೆಯಿದ್ದು, ವಿದ್ವಾಂಸರು ದ್ರಾವಿಡಾರ್ಯರ ಸಂಕ್ರಮಣ ಸಂಸ್ಕೃತಿಯ ಅಭ್ಯಾಸಕ್ಕೆ ಸೂಕ್ತ ಒತ್ತು ನೀಡಬೇಕು. ಈ ವೈವಾಹಿಕ ಸಂಬಂಧಗಳನ್ನು ದ್ರಾವಿಡರ 'ಖಿಣಜಟಞಟ' ಮೂಲಕ ಟಿ ಬಸವರಾಜ್ ತೂಲ ಹಳ್ಳಿಯವರು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ(ಟಿ ಬಸವರಾಜು:೨೦೦೪;೧-೧೪). ಆದ್ದರಿಂದ ಸಿಂಧೂನದಿ ಬಯಲಿನ ಸಂಸ್ಕೃತಿಯೇ ಹಿಂದೂಗಳಲ್ಲಿರುವ ಎಲ್ಲಾ ದೇವತೆಗಳ ಉಗಮಕ್ಕೆ, ಮೂಲಕ್ಕೆ ಕಾರಣವೆನ್ನಬಹುದು.

ಗೊಂಡಿ ಭಾಷಾ ಹಾಗೂ ಸಿಂಧೂ(ಹಿಂದೂ) ಪೌರಾಣಿಕ ಕಲ್ಪನೆಯಂತೆ ಜಗತ್ತಿನ ಮುಖ್ಯ ಘಟನೆಗಳ ಪುನರ್ ಕಲ್ಪಿತ ನಿರ್ಮಾಣ

ಈ ಘಟನಾವಳಿಗಳನ್ನು ಮರು ಸೃಷ್ಟಿಸಲು ಮುಖ್ಯವಾಗಿ ಬಳಸಿಕೊಂಡಿದ್ದು

೧. ಗೊಂಡರ ಸಂಭೂಶೇಖರನ ೮೮ ಪೀಳಿಗೆಗಳು ಭೂಮಿಯನ್ನು ಆಳಿದರೆಂಬ ಪೌರಾಣಿಕ ಐತಿಹ್ಯ ಹಾಗೂ ಅವರೆಲ್ಲರೂ ಎಲ್ಲಾ ಗಣ ಪ್ರಮುಖರಿಂದ ಆಯ್ಕೆಯಾದವರೆಂಬ ಗೊಂಡ್ವಾನ್ ಇತಿಹಾಸ ತಜ್ಞರ ಅಭಿಪ್ರಾಯ.

೨. ಕಚ್ಛ್ ಗುಜರಾತನ ಮಹಾರಾಜನು ತಾನು ಪಾರ್ವತಿ-ಪರಮೇಶ್ವರನ ೧೮೨ ನೇ ಪೀಳಿಗೆಯವನು ಎಂಬ ದಿನಾಂಕ:೦೯/೦೩/೨೦೦೫; kutch-22 is ex-king, shivas descen-dantದ ಪತ್ರಿಕಾ ಹೇಳಿಕೆ, ಗೊಂಡರ ಪೌರಾಣಿಕ ಮಾನ್ಯತೆಯ ಪ್ರಕಾರ ಪಾರ್ವತಿ ಪರಮೇಶ್ವರರ ಜೋಡಿಯು ಕೊನೆಯ ಸಂಭೂಶೇಖರನ ಜೋಡಿ.

೩. ಭಾರತವು ಗೊಂಡ್ವಾನಾ ಲ್ಯಾಂಡಿನ ಒಂದು ಭಾಗ ಎಂಬ ಸಿದ್ಧಾಂತವನ್ನು ವೈಜ್ಞಾನಿಕವಾಗಿ ಖಂಡಾಂತರ ಚಲನಾ ಸಿದ್ಧಾಂತದನ್ವಯ ಒಪ್ಪಿಕೊಂಡ ಪತ್ರಿಕಾ ವರದಿ (ಟೈಮ್ಸ್ ಆಫ್ ಇಂಡಿಯಾ-ಅಕ್ಟೋಬರ್ ३೦, ೨೦೦೮).

೪) ಶ್ರೀ ಕೃಷ್ಣನು ಈಗಿನ ಸಂಭೂ ಶೇಖರನಿಂದ (೧೮೨ ನೇ ಪೀಳಿಗೆಯಿಂದ) ೫೪ ನೇ ಪೀಳಿಗೆ ಹಿಂದೆ ಜನಿಸಿದನೆಂಬ, ಅಂದರೆ ಕೊನೆಯ ಸಂಭೋ ಶೇಖರನಿಂದ ೧೨೮ ನೇ ಪೀಳಿಗೆಯಲ್ಲಿ ಜನಿಸಿದನೆಂಬ ಐತಿಹ್ಯ. (೦೯/೦೩/೨೦೦೫ kutch-22 is ex-king,shivas descen-dant).

೫. ನಾಳಗೊಂಡೇಶ್ವರ ಪುರಾಣ ಕಾವ್ಯಂ ನಲ್ಲಿ ಹೇಳಿರುವಂತೆ ಬಾಣಾಸುರನ ಮಗಳು ಉಷಾದೇವಿ ಓಖಿಮಠದಲ್ಲಿ ಲಾ(ನಾ)ಳಗೊಂಡೇಶ್ವರನಿಗೆ ಸಮಾಧಿ ಕಟ್ಟಿದ್ದು, ಉಷಾದೇವಿಯು ಶ್ರೀ ಕೃಷ್ಣನ ಮೊಮ್ಮಗನಾದ ಅನಿರುದ್ಧನ ಮಡದಿ. ನಾಳಗೊಂಡೇಶ್ವರನೇ ಕಲಿಯುಗದ ಆರಂಭದಲ್ಲಿ ತನ್ನ ಅನುಯಾಯಿಗಳಿಗೆ, ಕುಲ ಬಾಂಧವರಿಗೆ ದಕ್ಷಿಣಕ್ಕೆ ಹೋಗಲು ಆದೇಶಿಸಿದ್ದು ಹಾಗೂ ಅವರಿಗೆ ಅಲ್ಲಿ ಹೋದ ನಂತರ ರಾಜ ಸತ್ತೆ, ಗ್ರಾಮಸತ್ತೆ ದೊರೆಯುತ್ತವೆಂದು ಆಶೀರ್ವದಿಸಿದ್ದು (ನಾಳಗೊಂಡೇಶ್ವರ ಪುರಾಣ ಕಾವ್ಯಂ ಪು, ಸಂ ೯)

೬. ದಕ್ಷಿಣಭಾರತದ ಅನೇಕ ರಾಜವಂಶಗಳು ತಾವು ಹೊರಡಿಸುತ್ತಿದ್ದ ನಾಣ್ಯಗಳಲ್ಲಿ 'ಗೊಂಡ' (ದಿನಾಂಕ:೨೫/೩/೨೦೧೧-೨೮/೩/೨೦೦೮ ರಂದು ಬೀದರ್ ಜಿಲ್ಲೆ ಮೈಲಾರದಲ್ಲಿ ನಡೆದ ಅಖಿಲ ಭಾರತ ಗೊಂಡೀ ಭಾಷಾ ಸಾಹಿತ್ಯ ಸಮ್ಮೇಳನದಲ್ಲಿ ಡಾ ಎಂ ಸಿ ಕಂಗಾಲಿಯವರು ಮಾಡಿದ ಉದ್ಘಾಟನಾ ಭಾಷಣ) ಪದವನ್ನು ಸನ್ಮಾನ ಪೂರ್ವಕವಾಗಿ ಬಳಸಿದ್ದು.

೭. ಹಂಪಿ-ವಿಜಯನಗರದ ಹತ್ತಿರ ದರೋಜಿ ಬೆಟ್ಟದ ಮೇಲೆ (ಪ್ರಜಾವಾಣಿ ವರದಿ ದಿನಾಂಕ: ೭/೧೦/೨೦೦೭). ಒಂದು ಇತಿಹಾಸ ಪೂರ್ವ ಕೋಟೆಯಲ್ಲಿ ಗೊಂಡ್ವಾನ ರಾಜ ಲಾಂಛನ ದೊರೆತಿದ್ದು

ಅದು ಲಾಕುಳೀಶ ಪಾಶುಪತದ ಮೂಲಿಗರದ್ದೆಂದು ಭಾವಿಸಲಾಗಿದೆ. ಇದೇ ಲಾಕುಳೀಶ ಪಾಶುಪತವು ದಕ್ಷಿಣಭಾರತದ ಅನೇಕ ರಾಜವಂಶಗಳ ಹಿಂದೆ ಇದ್ದ 'ಕತೃಶಕ್ತಿ'. ಲಕುಲೀಶ ಪಾಶುಪತವು ಲಾಂಜೀಗಡದಲ್ಲಿ ಆರಂಭವಾಗಿದೆಯೆಂದು ಭಾವಿಸಲಾಗಿದೆ. ಲಾಕುಳ ಶಬ್ದವು ಲಾಣಕುಣ, ಲಾಳಕುಳ ಶಬ್ದದಿಂದ ಬಂದಿದ್ದು 'ಕುಳ' ಶಬ್ದದಿಂದ ವಾಸ, ಸ್ಥಳ ಎಂದು ಅರ್ಥೈಸಲಾಗುತ್ತದೆ.

ಲಾಲ ಎಂದರೆ ರಾಜ ವೈಭವ ಹಿಂದಿರುವುದರ ಅರ್ಥ ಲಾಳಗೊಂಡರಲ್ಲಿಯೂ ಗೌಡ, ಸರನಾಡಗೌಡರೆಂದಾಗುವುದು ಲಾಲಾ ಎಂದರೆ ಅಸುರ ಎಂಬುವುದಕ್ಕೆ ದ್ರಾವಿಡ ಲಾಳಗೊಂಡರೆಂದಾಗುವುದು.

೮. ಈ ಲಾಕುಲೀಶ ಪಾಶುಪತದ ಲಾಂಛನವೇ ಎಲ್ಲಾ ಜೋತಿರ್ಲಿಂಗಗಳಲ್ಲಿ, ಭಾರತದ ಪ್ರಸಿದ್ಧ ದೇವಸ್ಥಾನದ ಬಿತ್ತಿ ಚಿತ್ರಗಳಲ್ಲಿ, ತೇರುಗಳಲ್ಲಿ, ದೇವಸ್ಥಾನದ ಕಂಬಗಳಲ್ಲಿ ಕೆತ್ತಲ್ಪಟ್ಟಿದ್ದು, ಇದು ಲಾಂಜೀಗಢದ ಮೂಲಿಗರದ್ದೆಂದು ಭಾವಿಸಲಾಗಿದೆ. ಮಧ್ಯಪ್ರದೇಶದಲ್ಲಿ ಭಾಲ್ಘಾಟ್ ಜಿಲ್ಲೆಯಲ್ಲಿರುವ ಲಾಣ ತಹಸಿಲ್ ಗ್ರಾಮದಲ್ಲಿರುವ ಕೋಟೆಯಿಂದ ವಲಸೆ ಬಂದವರೇ ಲಾಣ, ಲಾಳಗೊಂಡರೆಂದು ಅವರ ಗೋತ್ರ ಪ್ರಾಣಿ ಆಮೆಯಾಗಿದ್ದು ಅವರ ರಾಜಲಾಂಛನವು ಗಢಾ–ಕಟಾಂಗಾ, ಮಂಡ್ಲಗಢ, ಚಾಂದಾಗಢ, ಲಾಂಜಿಗಢ, ಬೋರವುದೇವಗಢ, ವುಹೂರಗಢ, ಜುನ್ನಾರಗಢ, ಭಾಗಾಪುರ(ದೇವಗಢ)ದ ಕೋಟೆಯಲ್ಲಿ, ಮಂದಿರಗಳಲ್ಲಿ ಇದೆ. ಇದು ಮದೋನ್ಮತ್ತ ಆನೆಯು ಸಿಂಹವನ್ನು ಪಳಗಿಸುವ ಚಿತ್ರ. ಇದನ್ನೆ ಕರ್ನಾಟಕದ ಬೀದರ್ ಜಿಲ್ಲೆಯ ಮೈಲಾರದಲ್ಲಿ ನಡೆದ ೧೩ ನೇ ಅಖಿಲ ಭಾರತ ಗೊಂಡೀ ಸಾಹಿತ್ಯ ಸಮ್ಮೇಳನದ ಲೋಗೋ ಹಾಗಿ ಸ್ವೀಕರಿಸಲಾಗಿತ್ತು .

೯. ಕೇವಲ ಗೊಂಡೀ ಭಾಷೆಯಲ್ಲಿ ಭಾರತದ ಪ್ರಾಚೀನ ರಾಜವಂಶಗಳಾದ ಮೋರಿಯ (ಮೌರ್ಯ) –ಬಾತುಕೋಳಿ ಗುಪೇತ್ (ಗುಪ್ತ) ಹಾಗೂ ಯಾದಿಂಗ>ಯಾದವ (ಆಕಳು) ಇತ್ಯಾದಿಗಳ ಅರ್ಥವಿದ್ದು, ಇವು ಗೊಂಡರ ಭಾಷೆಯಲ್ಲಿ ಇವರ ಗೋತ್ರ ಪ್ರಾಣಿ, ಪಶು, ಪಕ್ಷಿ ಹಾಗೂ ವೃಕ್ಷಗಳ ಹೆಸರುಗಳಾಗಿವೆ.

೧೦. ಕುರುಗೋಡು ನೀಲಮ್ಮನ ಕರ್ಮಸ್ಥಾನ ಕುರುಗೋಡು ಕುರು ಎಂದರೆ ಬೆಟ್ಟ, ಗೊಂಡ ಎಂದರೂ ಬೆಟ್ಟವೇ, ಕುರುವುಗೊಂಡ ಎಂಬ ಪದದಿಂದಲೇ ಕುರುಗೋಡು ಪದವಾಗಿರಬೇಕೆಂದು ಹೇಳಲಾಗುತ್ತದೆ (ಚನ್ನಮಲ್ಲಿಕಾರ್ಜುನ, ೧೯೫೮–೩೨೧). ಕುರುವುಗೊಂಡ>ಕುರುಗೋಡಾಗಿರುವುದು, ಗೊಂಡರು ಅಲ್ಲಿಯ ಮೂಲ ನಿವಾಸಿಗಳು. ಅಲ್ಲಿಯ ಮೂಲಿಗರಿಗೆ ಕುರುವುಗೊಂಡ>ಕುರುಬಗೊಂಡ ಎಂದು ಕರೆಯಲಾಗಿ, ಕಾಲಾಂತರದಲ್ಲಿ ಕುರುಗುಒಡು ಎಂದು ಕರೆದಂತಿದೆ, ಕಾಲಾಂತರದಲ್ಲಿ ಅದು ಕುರುಗೋಡಾಗಿದೆ.

೧೧. ಲಾಲ ಮತ್ತು ಲಾಳ ಪದಗಳು ದೇಶವಾಚಕ, ಸ್ಥಳ ವಾಚಕ ಮತ್ತು ಜನವಾಚಕವಾಗಿರುವವು. ಗದುಗಿನ ನಾರಾಣಪ್ಪ ಕವಿಯು ತನ್ನ ಗದುಗಿನ ಭಾರತದ ಸಭಾ ಪರ್ವದ ಅಧ್ಯಾಯ ೭:೨ ರಲ್ಲಿ

ಯುದಿಷ್ಠರ ಮಹಾ ರಾಜನಿಗೆ ಯಾವಯಾವ ದೇಶದ ಅರಸರು ಕಪ್ಪ ಕಾಣಿಕೆ ಕೊಟ್ಟಿದ್ದರೆಂಬ ಮಾಹಿತಿ ಹೀಗೆ ಲಭ್ಯವಾಗುತ್ತದೆ.

ಚೋಳ ಸಿಂಹಳ ಪಾಂಡ್ಯ ಕೇರಳ
ಮಾಳವಾಂದ್ರ ಕರೂಷ ಬರ್ಬರ
ಗೌಳ ಕೋಸಲ ಮಗಧ ಕೇಕಯ ಹೂಣ
ಸೌವಿರ
ಲಾಳ ಜೋನಗ ಜೀನ ಕುರು ನೇಪಾಳ
ಶಿಖಿ ಕಾಶ್ಮೀರ ಭೋಟ ವರಾಳ ವರ
ದೇಶಾಧಿಪತಿಗಳು ಬಂದರೊಗ್ಗಿನಲಿ.

ಲಾಲಾ ಎಂಬ ದೇಶದ ಉಲ್ಲೇಖವು ಬಳ್ಳಿಗಾವಿಯ ಶಾಸನದಲ್ಲಿಯೂ ಹೀಗೆ ಉಲ್ಲೇಖ ಗೊಂಡಿದೆ. ಮೂಲಿಗ ಈ ಶೆಟ್ಟಿಗಳು ದೂರದ ನೇಪಾಳ ಕುರುಂಬ, ಕಾಂಬೋಜ, ಗೊಲ್ಲ, ಲಾಲ, ಬರ್ಬರ ದೇಶಗಳಿಗೆ ವ್ಯಾಪಾರಕ್ಕೆ ಹೋಗುತ್ತಿದ್ದರು. ಈಗಾಗಿ ಲಾಲಾ ಅಥವಾ ಲಾಳ ಅಥವಾ ಲಾಣ ದೇಶದಿಂದ ಬಂದ ಗೊಂಡರಿಗೆ ಲಾಳಗೊಂಡರೆಂದು ಕರೆದಂತಿದೆ.ಇದು ಸಮುದಾಯವಾಚಕವಾಗಿಯು, ಕುರುಬ ಸಮುದಾಯದ ಬಳಿ ವಾಚಕವಾಗಿಯು ಬಳಕೆಯಾಗಿರುವುದು. ಲಾಲ, ಲಾಳ, ಲಾಳಿ, ನಾಳಿ ಬಳಿಗಳು ಕುರುಬ ಸಮುದಾಯದ ಬಳಿಗಳು. ಇವು ಲಾಳಗೊಂಡರನ್ನು ಪ್ರತಿನಿದಿಸುತ್ತವೆ (ಮೇತ್ರಿ ಕೆ ಎಂ ೨೦೦೮, ೦೪).

೧೨. ಲಾಳ ಎಂದರೆ ನಾಲ, ಲಾಳಿ ಎಂದರೆ ನೇಯುವವ, ಕಿಟೆಲ್ ರವರು ಲಾಳಿ ಎಂಬ ಪದಕ್ಕೆ ನೇಯ್ಗೆಯವನು ಎಂದರ್ಥ ನೀಡಲಾಗಿದೆ. ಈಗಲೂ ಸಹ ದೊಡ್ಡಬಳ್ಳಾಪುರ ಪರಿಸರದ ಕುರುಬರಹಳ್ಳಿ ಲಾಳಗೊಂಡರ ಕುಟುಂಬಗಳು ನೇಯ್ಗೆಯ ಕಾಯಕದಲ್ಲಿ ನಿರತವಾಗಿವೆ.

೧೩. ಶಿವನ ನಾಳದಿಂದ ಜನಿಸಿದವರು ಎಂಬ ಅರ್ಥ ಲಾಳಗೊಂಡ ಸಮುದಾಯಕ್ಕಿದೆ. ಸಮುದ್ರಮಥನ ಸಮಯದಲ್ಲಿ ವಿಷಕಂಠನಾದ ಶಿವನಿಂದ ಜನಿಸಿದವರು ಎಂಬ ಪೌರಾಣಿಕ ಹಿನ್ನೆಲೆ ಇದೆ. ಗೊಂಡರ ಪುರಾಣದಲ್ಲಿ ಲಾಂಜಿಕೋಟ್‌ಗೆ ವಿಶೇಷವಾದ ಸ್ಥಾನವಿದ್ದು ಅದು ಜಲಪ್ರಳಯದ ಸಮಯದಲ್ಲಿ ಮನುಕುಲದ ಹೆಣ್ಣು/ಗಂಡನ್ನು ಆಮೆಯು ತನ್ನ ಬೆನ್ನ ಮೇಲೆ ಕೂರಿಸಿಕೊಂಡು ಕಾಗೆಯ ನಿರ್ದೇಶನದಂತೆ ಭೂಮಿಯನ್ನು ಸುತ್ತುತ್ತಾ ಲಾಂಜಿಕೋಟ್ ದಲ್ಲಿ ತಲುಪಿದೆ ಎಂಬ ಪೌರಾಣಿಕ ಕಥೆಯಿದೆ. ಇದನ್ನು ಗೊಂಡರು ಪೃಥ್ವಿಯ ನಾಭಿ ಎಂದು ಕರೆಯುತ್ತಾರೆ(ನಾಭಿ ಎಂದರೆ ನಾಳ>ಲಾಳ).

### ೩.೭ ಗೊಂಡರು ಮತ್ತು ಲಾಳಗೊಂಡರ ನಡುವಿನ ಸಾಮ್ಯತೆಗಳು

ಲಾಳಗೊಂಡರಿಗೂ ಹಾಗೂ ಗೊಂಡರಿಗೂ ಸಂಬಂಧವಿದೆಯಾ? ಎಂದು ತಿಳಿಯುವ ಪ್ರಯತ್ನ ಮಾಡಿದಾಗ ಕುತೂಹಲಕಾರಿ ಅಂಶಗಳು ಕಂಡುಬಂದವು ಗೊಂಡ ಎಂಬ ಹೆಸರು ಈಗಾಗಲೇ

ಕರ್ನಾಟಕದ ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ಕ್ರಮಸಂಖ್ಯೆ ೦೯ ರಲ್ಲಿ ಗುರುತಿಸಲ್ಪಟ್ಟಿದೆ. ಗೊಂಡ ಸಮುದಾಯದ ಕುರಿತು ಭಾರತದಲ್ಲಿ ಹಲವು ಅಧ್ಯಯನಗಳು ನಡೆದಿವೆ. ಗೊಂಡ ಸಮುದಾಯವು ಆದಿದ್ರಾವಿಡ ಸಮುದಾಯವಾಗಿದ್ದು, ಗೊಂಡ ಶಬ್ದವು ತೆಲುಗು ಭಾಷೆಯ ಕೊಂಡ ಪದದಿಂದ ಬಂದಿದೆ. ಕೊಂಡ ಎಂದರೆ ತೆಲುಗು ಭಾಷೆಯಲ್ಲಿ ಗುಡ್ಡ ಅಥವಾ ಬೆಟ್ಟ(ಪರ್ವತ) ಎಂದರ್ಥ ಕಾಲಕ್ರಮೇಣ 'ಕ' ಕಾರ ಘೋಷ ಧ್ವನಿಯಾಗಿ 'ಗ' ಕಾರ ವಾಗಿ ಗೊಂಡ ಎಂದು ರೂಪಾಂತರ ಹೊಂದಿರಬಹುದು.

**ಲಾಳಗೊಂಡರಿಗೂ ಹಾಗೂ ಗೊಂಡರಿಗೂ ಇರುವ ಸಾಮ್ಯತೆಯನ್ನು ಅವುಗಳ ಪರಾಮರ್ಶನ ಈ ಕೆಳಗಿನಂತಿವೆ.**

೧. ಬೀದರ್ ಜಿಲ್ಲೆಯ ಗೊಂಡರ ಆದಿದೈವ ಮೈಲಾರ, ಬೀರಪ್ಪ, ಯಲ್ಲಮ್ಮ. ದೊಡ್ಡಬಳ್ಳಾಪುರದ ದೇವನ ಹಳ್ಳಿ ವ್ಯಾಪ್ತಿಯ ಲಾಳಗೊಂಡರ ಮನೆ ದೇವರು ಸಹ ಮೈಲಾರ ಹಾಗೂ ಕುರುಬರ ಹಳ್ಳಿಯಲ್ಲಿ ಹೆಚ್ಚಿನ ಮನೆಗಳು ಯಲ್ಲಮ್ಮ ದೇವರನ್ನು ಪೂಜಿಸುತ್ತವೆ. ಕೋಡಿಮಂಚೇನಹಳ್ಳಿಯಲ್ಲಿ ಮೈಲಾರದ ದೇವಸ್ಥಾನವಿದೆ. ಲಾಳಗೊಂಡರು ಲಿಂಗದೀಕ್ಷೆಯಿಂದಾಗಿ ದೇವರನ್ನು ಲಿಂಗಾಯುತ ಮಾದರಿಯಲ್ಲಿ ಪೂಜಿಸುತ್ತಾರೆ.

೨. ಗೊಂಡರು ಕಂಬಳಿ ಮತ್ತು ಕಂಕಣವನ್ನು ವಿವಾಹದ ಸಂದರ್ಭದಲ್ಲಿ ಬಳಸುವರು ಅದೇ ರೀತಿ ಲಾಳಗೊಂಡರು ಸಹ ಉಣ್ಣೆಕಂಬಳಿಯನ್ನು ಉಪಯೋಗಿಸುವರು. ಉಣ್ಣೆ ಕಂಕಣ ಮಾತ್ರ ಕಾಲಾಂತರದಲ್ಲಿ ಬದಲಾಗಿದೆ ಎನ್ನಬಹುದು

೩. ಗೊಂಡರು ಭಂಡಾರ ಬಳಸುವಂತೆ ಬೆಂಗಳೂರು ಗ್ರಾಮಾಂತರ ಲಾಳಗೊಂಡರು ಭಂಡಾರ ಮತ್ತು ವಿಭೂತಿಯನ್ನು ಬಳಸುವರು. ಆದರೆ ಉತ್ತರಕರ್ನಾಟಕದ ಲಾಳಗೊಂಡರು ಸಾಮಾಜಿಕ ಪ್ರತಿಷ್ಠೆ ಫಲವಾಗಿ ವಿಭೂತಿಯನ್ನು ಬಳಸುವರು

೪. ಲಾಳಗೊಂಡರು ಲಿಂಗ ದೀಕ್ಷೆಯಿಂದಾಗಿ ಜಂಗಮರಿಗೆ ವಿಶೇಷ ಸ್ಥಾನ ನೀಡಿದ್ದಾರೆ. ಈ ಮುಂಚೆ ಗೊರವ, ದಾಸ, ಒಡೆಯರಿಗೆ ಮಾನ್ಯತೆಯನ್ನು ನೀಡುತ್ತಿದ್ದರು ಎಂದು ಬೆಂಗಳೂರು ಗ್ರಾಮಾಂತರದ ವಕ್ತೃಗಳು ತಿಳಿಸಿದ್ದಾರೆ.

೫. ಈ ಮುಂಚೆ ಲಾಳಗೊಂಡರು ಭಾನುವಾರಕ್ಕೆ ವಿಶೇಷ ಸ್ಥಾನ ನೀಡುತ್ತಿದ್ದರು ಎಂದು ವಕ್ತೃಗಳಿಂದ ತಿಳಿದು ಬರುತ್ತದೆ. ಕಾರಣ ಭಾನುವಾರ ಮೈಲಾರನ ವಾರವಾಗಿತ್ತು ಎನ್ನಬಹುದು. ಆದರೆ ಲಿಂಗ ದೀಕ್ಷೆ ಪಡೆದ ನಂತರ ಭಾನುವಾರದ ಸ್ಥಾನವನ್ನು ಬರಬರುತ್ತಾ ಸೋಮವಾರ ಪಡೆದಿದೆ.

೬. ಪಶುಪಾಲನೆಯನ್ನು ನೋಡಿದಾಗ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದ ಸಂಗತಿಯೆಂದರೆ ಅನೇಕ ಲಾಳಗೊಂಡರು ಮೇಕೆಯನ್ನು ತಾವು ಸಾಕದೇ ಇತರೆ ಸಮುದಾಯದ ಜನರಲ್ಲಿ ಅವುಗಳನ್ನು ಬಿಟ್ಟು ಸಾಕಿಸುವ ಪರಿಪಾಟವಿತ್ತು ಕಾಲಾಂತರದಲ್ಲಿ ಪ್ರತಿಷ್ಠೆಯ ಫಲವಾಗಿ ಅವುಗಳನ್ನು ತ್ಯಜಿಸಿದ್ದಾರೆ.

ಅಂದರೆ ಈ ಮುಂಚೆ ಅವುಗಳನ್ನು ಅವರೇ ಸಾಕುತ್ತಿದ್ದರು ಎಂಬುದು ಈ ಸಂಗತಿಯಿಂದ ತಿಳಿದು ಬರುತ್ತದೆ. ಪಶುಪಾಲನೆಯನ್ನು ಅಂದರೆ ಹಸು ಎತ್ತುಗಳ ಸಾಕುವಿಕೆಯನ್ನು ಮಾತ್ರ ಮುಂದುವರೆಸಿಕೊಂಡು ಬಂದಿದ್ದಾರೆ.

೭. ಗೊಂಡರು ಆಚರಿಸುವ ಮನಿಲಕ್ಷ್ಮಿಯಂತೆ ಲಾಳಗೊಂಡರು ಮನಿಲಕ್ಷ್ಮಿಯನ್ನು ಪೂಜಿಸುವರು.

೮. ಈಗಲೂ ಸಹ ಲಾಳಗೊಂಡ ಸಮುದಾಯದವರು ಮಣ್ ಮಲ್ಲಯ್ಯ, ಗುಡ್ಡದ ಮಲ್ಲಯ್ಯನನ್ನು ಆರಾಧಿಸುವರು. ಮಲ್ಲಯ್ಯ>ಬೆಟ್ಟದಮಲ್ಲಯ್ಯ >ಬೆಟ್ಟದ ಮೈಲಾರನ ರೂಪ. ಅದೇ ರೀತಿ ವೀರಭದ್ರ(ಈರಣ್ಣ)> ಬೀರಪ್ಪನ ರೂಪವೆಂದು ಎಂ ಎಂ ಕಲಬುರ್ಗಿ ಸೇರಿದಂತೆ ಅನೇಕ ಲೇಖಕರು ತಿಳಿಸಿದ್ದಾರೆ. ಈರಣ್ಣ/ವೀರಭದ್ರನನ್ನು ಅನೇಕ ಲಾಳಗೊಂಡರು ಪೂಜಿಸುವರು.

ಕೆ ಎಂ ಮೇತ್ರಿ ಇವರು ಬೀದರ್ ಜಿಲ್ಲೆಯ ಗೊಂಡರಿಗೆ ಮತ್ತು ಕರ್ನಾಟಕದ ಇತರೆ ಭಾಗಗಳಲ್ಲಿರುವ ಲಾಳಗೊಂಡರಿಗೆ ಹಲವಾರು ಸ್ತರಗಳಲ್ಲಿ ಸಾಮ್ಯತೆಗಳನ್ನು ಕಟ್ಟಿಕೊಟ್ಟಿದ್ದಾರೆ.

**ದೈವಗಳು**

ಗೊಂಡರ ಆದಿದೈವಗಳಾದ ಮೈಲಾರ, ಬೀರಪ್ಪ, ಯಲ್ಲಮ್ಮ ಇವು ಲಾಳಗೊಂಡರಲ್ಲಿಯೂ ಕಾಣಸಿಗುತ್ತವೆ. ಲಿಂಗ ದೀಕ್ಷೆಯಿಂದಾಗಿ ಈ ದೈವಗಳು ಲಿಂಗಾಯಿತರ ಮಾದರಿಯಲ್ಲಿ ಪೂಜೆಗೊಂಡ ಗೊಂಡರಲ್ಲಿ ಕುರುಬರ ಮಾದರಿಯಲ್ಲಿ ಪೂಜೆಗೊಳ್ಳುವವು.

ಲಾಳಗೊಂಡರಲ್ಲಿ ಕಂಬಳಿಗೆ ತುಂಬಾ ಮಹತ್ವವಿದ್ದು, ಕಂಬಳಿ ಇಲ್ಲದೆ ಯಾವುದೇ ಶುಭಕಾರ್ಯವನ್ನು ಅವರು ಮಾಡುವುದಿಲ್ಲ.

**ಮನಿಲಕ್ಷ್ಮಿ**

ಗೊಂಡರು ಆಚರಿಸುವ ರೀತಿಯಲ್ಲಿಯೇ ಲಾಳಗೊಂಡರು ಮನಿಲಕ್ಷ್ಮಿ ಆಚರಿಸುವರು ಆದರೆ ಗೊಂಡರು ಎರಡು ಜೀವದ ಕುರಿಯನ್ನು ಬಲಿಕೊಟ್ಟರೆ ಲಾಳಗೊಂಡರು ಅದರ ಬದಲಾಗಿ ಸಸ್ಯಹಾರದ ನೈವೇದ್ಯ ಅರ್ಪಿಸುವರು.

ದೇವರುಗಳ ಪೂಜೆಯಲ್ಲೂ ಸಹ ನಾವು ಭಿನ್ನತೆಯನ್ನು ಕಾಣುತ್ತೇವೆ. ದೊಡ್ಡಬಳ್ಳಾಪುರ ಪರಿಸರದ ಲಾಳಗೊಂಡರು ಯಲ್ಲಮ್ಮ, ಮೈಲಾರ ಬೀರಲಿಂಗೇಶ್ವರನ್ನು ಪೂಜಿಸುವರು ಆದರೆ ಉತ್ತರ ಕರ್ನಾಟಕದ ಲಾಳಗೊಂಡರು ಭಂಡಾರವನ್ನು ಬಳಸುವ ಯಾವುದೇ ದೇವರನ್ನು ಅವರು ಆರಾಧಿಸುವುದಿಲ್ಲ.

**ಕಂಬಳಿ, ಕಂಕಣ**

ಗೊಂಡರಲ್ಲಿರುವ ಕಂಬಳಿ ಮಹತ್ವ ಹಾಗೂ ವಿವಾಹ ಸಂದರ್ಭದಲ್ಲಿಯ ಕಂಕಣಗಳ ಬಳಕೆ ಲಾಳಗೊಂಡರಲ್ಲಿಯೂ ಇವೆ. ಹುಣ್ಣೆ ಹಾಗೂ ಹತ್ತಿಯ ಕಂಕಣಗಳೆರಡು ಚಾಲ್ತಿಯಲ್ಲಿವೆ. ಆದರೆ ಕಂಕಣಗಳಿಗೆ ಸಂಬಂಧಪಟ್ಟ ಪುರಾಣ ಕತೆಗಳು ಲಾಳಗೊಂಡರು ಮರೆತಂತಿದೆ.

ಲಾಳಗೊಂಡರಲ್ಲಿ ಕಂಬಳಿ ಇಲ್ಲದೆ ಯಾವುದೇ ಶುಭಕಾರ್ಯವನ್ನು ಮಾಡುವುದಿಲ್ಲ ಇಂದಿಗೂ ಕಂಬಳಿಗೆ ಪೂಜ್ಯನೀಯ ಸ್ಥಾನವಿದೆ. ಅದೇ ರೀತಿ ಹುಣ್ಣೆ ಹಾಗೂ ಹತ್ತಿಯ ಕಂಕಣಗಳೆರಡಕ್ಕೂ ಪೂಜ್ಯನೀಯ ಸ್ಥಾನವಿರುವುದು ಕಂಡು ಬರುವುದು.

**ಭಂಡಾರ>ವಿಭೂತಿ**

ಲಿಂಗಾಯುತ ಮತಕ್ಕೆ ಮತಾಂತರಗೊಂಡ ನಂತರ ಲಾಳಗೊಂಡರು ಕ್ರಮೇಣ ಭಂಡಾರದ ಬಳಕೆಯ ಬದಲಾಗಿ ವಿಭೂತಿಯ ಬಳಕೆ ಹೆಚ್ಚಿಸ ತೊಡಗಿರುವರು. ದಿನಬಳಕೆಗೆ ವಿಭೂತಿಯಾದರೆ ಶಿಷ್ಟಾಚಾರಕ್ಕೆ ಭಂಡಾರದ ಬಳಕೆ ಮಾತ್ರ ಸೀಮಿತಗೊಂಡಿರುವುದು.

ಈಗಲೂ ಸಹ ದೊಡ್ಡಬಳ್ಳಾಪುರದ ಲಾಳಗೊಂಡರು ಭಂಡಾರವನ್ನು ಬಳಸುತ್ತಾರೆ. ಅವರು ಭಂಡಾರ ಧರಿಸುವುದನ್ನು ಬಿಟ್ಟಿಲ್ಲ ಆದರೆ ಉತ್ತರಭಾರತದ ಲಾಳಗೊಂಡರು ಭಂಡಾರವನ್ನು ಖಡ್ಡಾಯವಾಗಿ ಧರಿಸುವುದಿಲ್ಲ. ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಕಾಲಾಂತರದಲ್ಲಿ ಅದು ನಿಂತು ಹೋಗಿರಬಹುದು ಅಥಾವ ಪ್ರತಿಷ್ಠೆಯ ದ್ಯೂತಕವು ಆಗಿರುವ ಸಾದ್ಯತೆ ಇರಬಹುದು.

**ಗೊರವ>ದಾಸ>ಒಡೆಯ>ಜಂಗಮ**

ಲಿಂಗಾಯಿತರಾದ ಲಾಳಗೊಂಡರು ತಮ್ಮ ಮೂಲ ದೈವಗಳ ಆರಾಧಕರಾದ ಗೊರವ, ದಾಸಯ್ಯ ಮತ್ತು ಒಡೆಯರಿಗೆ ಕ್ರಮೇಣ ದೂರ ಸರಿಸಿ ಜಂಗಮರಿಗೆ ವಿಶೇಷ ಮಹತ್ವ ನೀಡಲಾರಂಭಿಸಿರುತ್ತಾರೆ. ಶಿಷ್ಟಾಚಾರಕ್ಕೆ ಮಾತ್ರ ಗೊರವಯ್ಯ, ದಾಸಯ್ಯ ಹಾಗು ಒಡೆಯರನ್ನು ಕರೆಸುವರು. ಇವರ ಸ್ಥಾನ ಜಂಗಮರು ಆಕ್ರಮಿಸಿರುವರು.

**ವಾರ ಮತ್ತು ಬೆಸಸಂಖ್ಯೆಗಳು**

ಲಾಳಗೊಂಡರು ಲಿಂಗಾಯಿತರಾಗುವ ಮೊದಲು ಭಾನುವಾರ, ಶುಕ್ರವಾರಗಳನ್ನು ಪವಿತ್ರವೆಂದು ನೆಡೆದುಕೊಳ್ಳುತ್ತಿದ್ದವರು ಆ ನಂತರ ಸೋಮವಾರವನ್ನು ಪವಿತ್ರವೆಂದು ಪರಿಗಣಿಸಲಾಗುತ್ತಿದೆ. ಅದೇ ರೀತಿ ಬೆಸಸಂಖ್ಯೆಗಳನ್ನು ಅಂದರೆ ೧, ೫, ೭, ೯, ೧೧, ೨೧, ೫೧, ೧೦೧ ಇತ್ಯಾದಿ ಸಂಖ್ಯೆಗಳಿಗೆ ವಿಶೇಷ ಮಹತ್ವ ಕೊಡುವವರಾಗಿದ್ದರು. ಇಂದು ಜಂಗಮರ ನಿರ್ದೇಶನದಂತೆ ವಾರ ಮತ್ತು ಸಂಖ್ಯೆಗಳನ್ನು ಬದಲಾಯಿಸಲಾಗುತ್ತಿದೆ.

**ಪಶುಪಾಲನೆ> ಕೃಷಿ**

ಲಾಳಗೊಂಡರು ಮೂಲತಃ ಕುರಿ ಪಾಲಕರು ಎಂಬುದಕ್ಕೆ ಅವರ ಮೈಲಾರ ದೈವ, ಉಣ್ಣಿಕಂಕಣ, ಕಂಬಳಿಗೆ ವಿಶೇಷ ಮಹತ್ವ, ಬೆಸಸಂಖ್ಯೆ ಹಾಗೂ ಭಾನುವಾರದ ಪಾಲನೆಗಳೆ ಸಾಕ್ಷಿಯಾಗಿವೆ. ಆ ನಂತರ ದನಪಾಲಕರೆಂಬುದಕ್ಕೆ ಮೈಲಾರದ ಜೊತೆಗೆ ವಿಭಿನ್ನ ಬಸವಣ್ಣ (ನಂದಿ) ದೈವಗಳ ಆರಾಧನೆ ಸಾಕ್ಷಿಯಾಗಿ ನಿಲ್ಲುವವು. ಪಶುಪಾಲನೆಯಿಂದ ಕೃಷಿಗೆ ವಾಲಿದ ಲಾಳಗೊಂಡರು ಸ್ಥಾಯಿಯಾಗಿ

ನೆಲೆನಿಂತು ಗೌಡ, ನಾಡಗೌಡ, ಸರನಾಡಗೌಡ, ಮಾಂಸಹಾರಿಯಿಂದ ಸಸ್ಯಹಾರಿಯಾಗಿ ಲಿಂಗ ರಹಿತರಿಂದ ಲಿಂಗವಂತರಾಗಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಪರಿವರ್ತನೆ ಹೊಂದಿರುವರು. ಲಾಳಗೊಂಡರಲ್ಲಿ ಸಾಮಾನ್ಯವಾಗಿ ಗೌಡ, ಸರನಾಡಗೌಡ, ನಾಡಗೌಡ ಎಂಬ ಅಡ್ಡಹೆಸರಿನ ಮನೆತನಗಳು ಕಾಣಸಿಗುವವು ಟಿಪ್ಪುವಿನ ಕಾಲದಲ್ಲಿ ಈ ತರಹದ ಹುದ್ದೆಗಳು ಕಳೆದು ಹೋದವು ಆದರು ಮನೆತನದ ಹೆಸರುಗಳು ಹಾಗೆಯೇ ಮುಂದುವರೆದವು ಕೃಷಿ ಇವರ ಮುಖ್ಯ ಹೊರೆಯಾಗಿದೆ.

**೩.೮ ಸಾಮಾಜಿಕ ಸ್ಥಿತಿಗತಿ**

ಸಾಮಾಜಿಕವಾಗಿ ಈ ಸಮುದಾಯವನ್ನು ಅವಲೋಕಿಸಿದಾಗ, ಶುದ್ಧ ಸಸ್ಯಹಾರಿಗಳಾಗಿದ್ದಾರೆ. ಲಿಂಗಾಯತ ಲಾಳಗೊಂಡರು ಎಂಬುದು ತೀರ ವಿರಳವಾಗಿ ಪ್ರಯೋಗವಾಗುವ ರೂಪವಾಗಿದೆ. ಈ ನಿರ್ದಿಷ್ಟ ಸಮುದಾಯದವರೆ, ಈ ರೂಪವನ್ನು ಬಳಕೆ ಮಾಡುವುದು ತೀರ ವಿರಳ. ಈ ಜಾತಿಯವರಿಗೆ ಸ್ವಜಾತಿಯ ವಿಶೇಷಣ ರೂಪ ಹೇಳಲು, ಒಂದು ರೀತಿಯ ಕೀಳರಿಮೆ (ಈಗ ಬದಲಾಗಿದೆ) ಮುಜುಗರವೂ ಇದೆ. ಲಿಂಗಾಯತ ಲಾಳಗೊಂಡರನ್ನು ನೀವು ಯಾವ ಜನ? ಎಂದು ಪ್ರಶ್ನಿಸಿದರೆ ಲಿಂಗಾಯತರು ಅಥವಾ ವೀರಶೈವರೆಂದು ಹೇಳಿಕೊಳ್ಳುತ್ತಾರೆ. ಲಿಂಗಾಯತ/ವೀರಶೈವರಲ್ಲಿ ಯಾವ ಗುಂಪಿಗೆ ಸೇರಿದವರು ಎಂದರೆ, ಕೆಲವೊಂದು ಸಂದರ್ಭದಲ್ಲಿ ನನಗೆ ಅಷ್ಟಾಗಿ ಗೊತ್ತಿಲ್ಲ, ಲಿಂಗಾಯತರು/ವೀರಶೈವರು ಎಂಬುದು ಮಾತ್ರ ಗೊತ್ತು ಎಂದು ತೇಲಿಸಿ ಬಿಡುತ್ತಾರೆ. ಇನ್ನು ಕೆಲವರು ಪ್ರತಿಷ್ಠಿತವೆನಿಸಿದ ಯಾವುದಾದರೊಂದು ಲಿಂಗಾಯತ ಪಂಗಡದ ಹೆಸರು ಹೇಳಿಕೊಳ್ಳುವುದುಂಟು. ಈ ಸಮುದಾಯದಲ್ಲಿ ಇಂತಹ ಮನೋಭಾವ ಉಂಟಾಗುವುದಕ್ಕೆ ಕಾರಣ ಎರಡು ರೀತಿಯದಾಗಿದೆ. ಒಂದು, ಈ ಸಮುದಾಯದ ಸಂಖ್ಯೆಯು ಇತರೆ ಲಿಂಗಾಯತ ಪ್ರಭೇದದವರ ಸಂಖ್ಯೆಗಿಂತ ವಿರಳವಾಗಿರುವುದು. ಅಲ್ಲದೆ ಈ ಸಮುದಾಯದವರ ನಿರ್ದಿಷ್ಟ ಭೌಗೋಳಿಕ ಕ್ಷೇತ್ರದಲ್ಲಿ ಮಾತ್ರ ಗುಂಪುಗಳಂತೆ ಕೆಲವೇ ಊರುಗಳಲ್ಲಿರುವುದು ಆಗಿರಬೇಕು. ಇನ್ನೊಂದು ಸಾಮಾಜಿಕ ಸ್ತರಗಳ ಹಿನ್ನೆಲೆಯಲ್ಲಿ ಈ ಸಮುದಾಯದವರು ವೀರಶೈವ ಪ್ರಭೇದಗಳಾದ ಜಂಗಮ, ರೆಡ್ಡಿ, ಪಂಚಮಸಾಲಿ, ಸಾದು ಮುಂತಾದ ಸಮುದಾಯದವರಿಗಿಂತ ಕೆಳಸ್ತರದವರು ಎಂಬ ಪರಿಗಣನೆಯು ಇರಬಹುದು ಅಥವಾ ಕೆಲವು ಆಚರಣೆಗಳಲ್ಲಿ ಉಳಿದ ಲಿಂಗಾಯತರಗಿಂತ ಭಿನ್ನ ರೀತಿಯನ್ನು ಹೊಂದುವುದರಿಂದಲೂ ಇರಬಹುದು. ಲಿಂಗಾಯತ ಲಾಳಗೊಂಡ ಸಮುದಾಯದವರಲ್ಲಿ ವಿಧವಾ ವಿವಾಹ ಪ್ರಾಶಸ್ತ್ಯ ವಿರುವುದು ಕಾರಣವಿರಬಹುದು ಕೀಳರಿಮೆ ಒಂದೆಡೆ ಕಂಡುಬರುತ್ತಿದ್ದರು, ಇತ್ತೀಚ್ಚೆಗೆ ಅಲ್ಲಲ್ಲಿ ವಿರಳವಾಗಿ ಜಾತಿಯ ಸಂಘಟನೆಗಳು ನಡೆಯುತ್ತಿವೆ. ಕೆಲವರು ಸಂಘಟನೆಯೊಂದಿಗೆ ಗುರುತಿಸಿಕೊಳ್ಳಲು ಹಿಂಜರಿಯುತ್ತಾರೆ. ಸಾಂಪ್ರದಾಯಿಕ ಕುಟುಂಬದ ವ್ಯಕ್ತಿಗಳು ಮೇಲ್ವರ್ಗದ ಸಮುದಾಯಗಳೊಂದಿಗೆ ಊಟಕ್ಕೆ ಕೂಡಲು ಹಿಂಜರಿಯುತ್ತಾರೆ. ಪ್ರಸ್ತುತ ದಿನ ಮಾನಗಳಲ್ಲಿ ಈ ಸಮುದಾಯುದವರು ವಿರಳವಾಗಿ ಪ್ರಗತಿ ಮನೋಭಾವವೊಂದಿ ಇತರೆ ಲಿಂಗಾಯತ

ಸಮುದಾಯದವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುತ್ತಿದ್ದಾರೆ. ಅದು ಏಕಮುಖಿಯೇ ಆಗಿದೆ. ಅಂದರೆ ಆರ್ಥಿಕ ಭದ್ರತೆ ಹೊಂದಿದ ಲಿಂಗಾಯತ ಲಾಳಗೊಂಡ ಕುಟುಂಬಕ್ಕೆ ಮಾತ್ರ ಮೇಲಸ್ತರದವರು (ರೆಡ್ಡಿ, ಪಂಚಮಸಾಲಿ ಬಣಜಿಗ, ಸಿಂಪಿಗ, ಲಿಂಗಾಯತ). ಕನ್ಯೆ ಕೊಡುತ್ತಾರೆ ಹೊರತು ತೆಗೆದುಕೊಲ್ಲುವುದಿಲ್ಲ ಒಂದು ವೇಳೆ ಕನ್ಯೆ ತೆಗೆದುಕೊಳ್ಳುವುದು ನಡೆದಿದೆ ಎಂದರೂ ಕೈ ಬೆರಳೆಣೀಕೆಯ ಪ್ರಮಾಣದಲ್ಲಿ ಮಾತ್ರ

**ಆಧಾರ ಗ್ರಂಥಗಳು**


ಅನ್ನಪೂರ್ಣ ಎಂ ಜಾಲವಾದಿ, *ಶಂಕರದಾಸಿಮಯ್ಯ ಪುರಾಣ: ಒಂದು ಅಧ್ಯಯನ*, (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ:೧೯೯೯).

ಗುರುಮೂರ್ತಿ ಕೆ ಜಿ, *ಲಿಂಗಾಯುತ ಧಾರ್ಮಿಕ ಸಂಪ್ರದಾಯ ಮತ್ತು ಸಾಂಸ್ಕೃತೀಕರಣ*, (ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು:೨೦೦೯).

ಪಂಡಿತ್ ಚೆ ಎ ಕವಲಿ (ಸಂ), *ಸಚಿತ್ರ ಕನ್ನಡ-ಕನ್ನಡ ಕಸ್ತೂರಿ ಕೋಶ* (ರಾಮಾಶ್ರಯ ಬುಕ್ ಡಿಪೋ:೧೯೮೯).

ಮೇತ್ರಿ ಕೆ ಎಂ, *ಮಾಳಿಂಗರಾಯನ ಕಾವ್ಯ*, ಹಳ್ಳಿಕೇರಿ. ಎಫ್ ಟಿ, *ಹಾಲುಮತ ಅಧ್ಯಯನ* (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ ಹಂಪಿ, ಮಂಜುನಾಥ ಬೇವಿನಕಟ್ಟಿ: ೨೦೧೦).

ರವೀಂದ್ರನಾಥ ಕೆ, *ಜೈನ ಟೀಕಾಸಾಹಿತ್ಯ*, (ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ವಿದ್ಯಾರಣ್ಯ ಹಂಪಿ, ಮಂಜುನಾಥ ಬೇವಿನಕಟ್ಟಿ:೨೦೧೦).

ಜೋಶಿ ಶಂ ಬಾ, *ಶಂಬಾಕೃತಿ ಸಂಪುಟ: ಕರ್ಣಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ-೧*, (ಬೆಂ ಕನ್ನಡ ಪುಸ್ತಕ ಪ್ರಾಧಿಕಾರ:೧೯೯೯).

ಸದಾಶಿವಪ್ಪ ಕುಂ ಬಾ (ಲೇ), *ನೊಣಬರು*, ಹಳ್ಳಿಕೇರಿ ಎಫ್ ಟಿ (ಸಂ), *ಹಾಲುಮತ ವ್ಯಾಸಂಗ-೨*, (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ ಹಂಪಿ:೨೦೧೦)

ಹನುಮಂತಯ್ಯ ತಮ್ಮ ಭಾರತ ದೇಶದ ಕುರುಬರ ಚರಿತ್ರೆ

ಹಿರೇಮಲ್ಲೂರು ಈಶ್ವರನ್, *ಲಿಂಗಾಯುತ ಧರ್ಮ: ಒಂದು ಅಧ್ಯಯನ, ಭಾಗ ೧*, (ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು:೧೯೯೭).

ಅದೇ....ಹಿರೇಮಲ್ಲೂರು ಈಶ್ವರನ್, *ಲಿಂಗಾಯುತ ಧರ್ಮ: ಒಂದು ಅಧ್ಯಯನ, ಭಾಗ ೧*, (ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು:೧೯೯೭).

ಹಿರೇಮಲ್ಲೂರು ಈಶ್ವರನ್, *ಲಿಂಗಾಯುತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು: ಮತಗಳ ಒಂದು ತೌಲನಿಕ ಅಧ್ಯಯನ*, ಭಾಗ ೩ (ಸ್ನೇಹಾ ಪ್ರಕಾಶನ, ಬೆಂಗಳೂರು:೧೯೯೭).

ಹಿರೇಮಲ್ಲೂರು ಈಶ್ವರನ್, *ಬಸವಣ್ಣ ಹಾಗೂ ಲಿಂಗಾಯುತ ಧರ್ಮ*, ಭಾಗ ೨, (ಸ್ನೇಹಾ ಪ್ರಕಾಶನ, ಬೆಂಗಳೂರು:೧೯೯೭).

# ಅಧ್ಯಾಯ: ನಾಲ್ಕು

## ಲಾಳಗೊಂಡ ಸಮುದಾಯದ ಸಾಮಾಜಿಕ ಜೀವನ

೪.೫. ಲಾಳಗೊಂಡರ ಕೌಟುಂಬಿಕ ಹಿನ್ನೆಲೆ

೪.೬. ಜೀವನಾವರ್ತಕ ಆಚರಣೆಗಳು- ವೈವಾಹಿಕ ಜೀವನ, ಹುಟ್ಟು, ನಾಮಕರಣ, ಋತುಮತಿ, ಮದುವೆ, ಸಾವು ಇತ್ಯಾದಿ

೪.೭. ವಾರ್ಷಿಕಾವರ್ತನ ಆಚರಣೆಗಳು-ಲಾಳಗೊಂಡರ ದೇವರುಗಳು(ದೈವಗಳು), ಹಬ್ಬಗಳು

೪.೮. ಲಾಳಗೊಂಡರ ವಿಧಗಳು- ಹಿರೇಲಾಳಗೊಂಡರು ಮತ್ತು ಚಿಕ್ಕ ಲಾಳಗೊಂಡರು

# ಅಧ್ಯಾಯ: ನಾಲ್ಕು

## ಲಾಳಗೊಂಡ ಸಮುದಾಯದ ಸಾಮಾಜಿಕ ಜೀವನ

ಭಾರತವು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಿದ ನಾಡು. ಅನೇಕ ಜಾತಿ, ಪಂಥ, ಮತ ಧರ್ಮಗಳನ್ನೊಳಗೊಂಡಿದ್ದರೂ ವಿಭಿನ್ನ ಸಂಸ್ಕೃತಿ ಆಚರಣೆಗಳನ್ನು ಹೊಂದಿದ್ದಾರೆ. ಇಲ್ಲಿನ ಪ್ರತಿಯೊಂದು ಸಮುದಾಯದವರು ತಮ್ಮತಮ್ಮದೇ ಆದ ಆಚಾರ ನಡೆಗಳನ್ನು ಒಳಗೊಂಡು ಸಾಮಾಜಿಕ ಜೀವನದಲ್ಲಿ ಬೆರೆತುಹೋಗಿದ್ದಾರೆ. ಅಂತೆಯೇ ಲಾಳಗೊಂಡರು ಕೂಡ ತಾವು ವಾಸಿಸುವ ನೆಲೆಗನುಗುಣವಾಗಿ ತಮ್ಮ ಸಾಮಾಜಿಕ ಜೀವನದ ಶೈಲಿಯನ್ನು ಮೈಗೂಡಿಸಿಕೊಂಡಿದ್ದಾರೆ.

ಮಾನವ ತನ್ನ ಜೀವನದ ಆರಂಭಿಕ ಹಂತದಲ್ಲಿ ಆಹಾರಕ್ಕಾಗಿ ಅಲೆಮಾರಿ ಜೀವನ ಕ್ರಮವನ್ನು ಅನುಸರಿಸುತ್ತಾ ಸಾಗುತ್ತಿದ್ದ ಹಂತದಲ್ಲಿ ಅವನ ಜೀವನಕ್ರಮಕ್ಕೆ ಯಾವುದೇ ರೂಪರೇಷಗಳು ಇರಲಿಲ್ಲ. ಮುಂದೆ ಮಾನವ ತನ್ನ ವಿಚಾರಶಕ್ತಿ ಬೆಳೆದಂತೆ ಬೆಂಕಿ ಉಪಯೋಗ ಕಂಡುಕೊಂಡು ಬೇಟೆಯಾಡಿದ ಮಾಂಸವನ್ನು, ಗೆಡ್ಡೆ ಗೆಣಸುಗಳನ್ನು ಬೇಯಿಸಿ ತಿನ್ನುವುದನ್ನು ಅರಿತುಕೊಂಡ ಮತ್ತು ಕಾಡಿನ ದುಷ್ಟಪ್ರಾಣಿಗಳಿಂದ ಹಾಗೂ ನೈಸರ್ಗಿಕ ವಿಕೋಪಗಳಿಂದ ತನ್ನ ಸುರಕ್ಷತೆಗಾಗಿ ಮರದ ಪೊಟರೆ ಮತ್ತು ಗುಹೆಗಳಲ್ಲಿ ವಾಸಿಸತೊಡಗಿದ. ಮುಂದುವರೆದಂತೆ ಬೇಟೆ, ಸುರಕ್ಷತೆ, ಕೃಷಿ ಮತ್ತು ಮನರಂಜನೆಯ ಉದ್ದೇಶದಿಂದಾಗಿ ಮಾನವ ಒಂದೆಡೆ ನೆಲೆನಿಂತು ಸಮೂಹ ಜೀವನದ ಮಹತ್ವವನ್ನು ಅರಿತು ಜೀವನ ಪದ್ಧತಿಯ ಶೈಲಿಯನ್ನು ಮೈಗೂಡಿಸಿಕೊಳ್ಳುತ್ತಾ ಬಂದನು. ಸಮೂಹ ಜೀವನವು ಒಬ್ಬ ನಾಯಕನ ಮುಖಂಡತ್ವದಲ್ಲಿ ಮತ್ತು ಅವನ ಮಾರ್ಗದರ್ಶನದಲ್ಲಿ ಮುಂದುವರೆಯುತ್ತಾ ನಡೆದವು. ಅವನ ಹೇಳಿಕೆಗಳು ಸಮೂಹದ ವಿಧಿ-ವಿಧಾನ, ಆಚರಣೆ, ನಂಬಿಕೆ, ನಿಷೇಧಗಳಾಗಿ ಒಂದು ಚೌಕಟ್ಟಿನೊಳಗೆ ಸೇರಲ್ಪಟ್ಟವು. ಮುಂದುವರೆದು ಸಾಮಾಜ ವಿಕಾಸವಾದಂತೆ ಮಾನವ ಅನೇಕ ಸಮಾಜದ ಕಟ್ಟಳೆಗಳಲ್ಲಿ ಜೀವನ ಮಾಡಬೇಕಾಯಿತು. ಇದನ್ನು ನಾವು ಸಾಮಾಜಿಕ ವ್ಯವಸ್ಥೆ ಎಂದು ಹೇಳುಬಹುದು. ಸಮಾಜದ ಉಳುವಿಗೆ ಮತ್ತು ಮುಂದುವರಿಕೆಗೆ ರೂಪಿಸಲ್ಪಟ್ಟ ವಿಧಿ-ವಿಧಾನಗಳಗಳ ಚೌಕಟ್ಟು ಇದಾಗಿರುತ್ತದೆ. ಮನುಷ್ಯ ತಾನು ಸಾಮಾಜಿಕ ಜೀವಿಯಾಗಿ ಬಾಳಬೇಕೆಂದರೆ ಸಮಾಜದ ವಿಧಿನಿಷೇಧಗಳನ್ನು ಕ್ರಮಬದ್ಧವಾಗಿ ಪಾಲಿಸಬೇಕು. ಹೀಗೆ ಪುರಾತನದಿಂದ ಸಾಗಿಬಂದ ವಿಧಿ-ವಿಧಾನಗಳು ಸಮುದಾಯದಿಂದ ಸಮುದಾಯಕ್ಕೆ ವಿಭಿನ್ನವಾಗಿರುತ್ತವೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯಗಳು ತಮ್ಮದೇ ಆದ ಆಹಾರ ಪದ್ಧತಿ, ಕೌಟುಂಬಿಕ ವ್ಯವಸ್ಥೆ, ಬಂಧುತ್ವ

ಕುಲಕಸುಬು, ನ್ಯಾಯ-ಪಂಚಾಯ್ತಿ, ದೈವಗಳು ಮತ್ತು ಸಂಸ್ಕೃತಿ ಎಲ್ಲವನ್ನು ಒಳಗೊಂಡಿರುವುದು. ಈ ಸಾಮಾಜಿಕ ವ್ಯವಸ್ಥೆಯೊಳಗಿನ ಕ್ರಮಗಳು ಸಮುದಾಯಗಳ ಸನಾತನವು ಆಗಿರಬಹುದು ಮತ್ತೆ ಕೆಲವು ಸಂಸ್ಕೃತೀಕರಣದಿಂದಾಗಿ ಇತರರಿಂದ ಅನುಕರಿಸಲ್ಪಟ್ಟ ಮತ್ತು ಹೇರಲ್ಪಟ್ಟವುಗಳು ಆಗಿರುವ ಸಾಧ್ಯತೆಗಳಿವೆ.

ಭಾರತದ ಪ್ರತಿಯೊಂದು ಸಮುದಾಯವು ತನ್ನದೇ ಆದ ವೈವಿಧ್ಯತೆಯನ್ನು ಉಳಿಸಿಕೊಳ್ಳಲು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುತ್ತಾ ಬಂದಿವೆ. ಸಮುದಾಯಗಳು ತನ್ನ ವೈವಿಧ್ಯತೆಯನ್ನು ಉಳಿಸಿಕೊಂಡು ಬಂದಿವೆ ಎಂದು ತಿಳಿಯಲು ಅವರವರ ಸಾಮಾಜಿಕ ಬದುಕಿನ ವ್ಯವಸ್ಥೆ ಮತ್ತು ಕ್ರಮಗಳು ಸಹಕಾರಿಯಾಗಿವೆ ಮತ್ತು ಸಮುದಾಯಗಳು ಜೀವನ ಪದ್ಧತಿಗಳನ್ನು ತಮ್ಮ ಸಮಾಜದ ಮುಖ್ಯ ಅಂಗವಾಗಿ ಪಾಲಿಸಿಕೊಂಡು ವೈವಿದ್ಯತೆಯನ್ನು ಕಾಪಾಡಿಕೊಂಡು ಮುಂದುವರೆಸುತ್ತಾ ಬಂದಿರುತ್ತವೆ. ಬುಡಕಟ್ಟು ಸಮುದಾಯಗಳು ತಮ್ಮ ಬದುಕಿನ  ಕ್ರಮದಲ್ಲಿ ಸ್ವಾಂಗೀಕರಣಕ್ಕೆ ಆಸ್ಪದ ನೀಡುವುದಿಲ್ಲ. ಹಾಗೆಂದ ಮಾತ್ರಕ್ಕೆ ಭಾರತೀಯ ಸಮುದಾಯಗಳು ಸಾಮಾಜಿಕ ಬದಲಾವಣೆಗೆ ಒಳಪಟ್ಟಿಲ್ಲವೆಂದರ್ಥವಲ್ಲ. ಭಾರತೀಯ ಪ್ರತಿಯೊಂದು ಸಮುದಾಯಗಳು ಸಾಮಾಜಿಕ ಚಲನೆಗೆ ಒಳಪಟ್ಟು ತಮ್ಮ ಸಂಸ್ಕೃತಿಯಲ್ಲಿ ತಮಗೆ ಅರಿವಿಲ್ಲದಂತೆ ಹೊಸದಾದ ಸಂಸ್ಕೃತಿಗಳನ್ನು ರೂಡಿಸಿಕೊಂಡು ಸಾಮಾಜಿಕ ಚಲನೆಗೆ ಒಳಪಟ್ಟಿವೆ ಕಾರಣ ಯುರೋಪಿಯನ್ನರ ಆಗಮನದಿಂದ ರಾಜಸತ್ತೆ ನಾಶವೊಂದಿ ಬದುಕಿನ ಶೈಲಿಗಳು ಹೊಸ ರೂಪವನ್ನು ಪಡೆದವು ಹೀಗೆ ಸಾಮಾಜಿಕ ಚಲನೆ ಮಂದಗತಿಯಲ್ಲಿ ಬದಲಾವಣೆ ರೂಪವನ್ನು ಪಡೆಯಿತು.

ಭಾರತೀಯ ಸಮುದಾಯಗಳು ತಮ್ಮದೇ ಆದ ಸಂಸ್ಕೃತಿಯನ್ನು ಒಳಗೊಂಡಿರುವಂತೆ, ಲಾಳಗೊಂಡ ಸಮುದಾಯವು ಸಹ ತನ್ನದೇ ಆದ ವಿಶಿಷ್ಟ ಸಂಸ್ಕೃತಿ, ಆಚರಣೆಗಳನ್ನು ಒಳಗೊಂಡಿರುವುದನ್ನು ನಾವು ನೋಡಬಹುದು. ಈ ಸಮುದಾಯದ ಸಂಸ್ಕೃತಿಯನ್ನು ಅರಿಯಲು ಅವರ ಜೀವನಾವರ್ತನ ಆಚರಣೆಗಳನ್ನು ಅರಿಯುವುದು ಅಷ್ಟೆ ಮಹತ್ವದ್ದು. ಅವುಗಳನ್ನು ಈ ಕೆಳಗಿನಂತೆ ಕಾಣಬಹುದು.

### ೪.೧ ಜೀವನಾವರ್ತಕ ಆಚರಣೆಗಳ ಹಿನ್ನೆಲೆ

ಮಾನವ ಜಗತ್ತಿನಲ್ಲಿರುವ ಸಕಲ ಸಮಾಜ, ಸಂಸ್ಕೃತಿ ಮತ್ತು ನಾಗರಿಕತೆಗಳ ಸೃಷ್ಟಿಕರ್ತ ಯಾವಾಗ ಮಾನವ ಗುಂಪು ಅಥವಾ ಸಮೂಹ ಜೀವನವನ್ನು ಪ್ರಾರಂಭಿಸಿದನೋ ಅಂದಿನಿಂದ ಆಚರಣೆಗಳು ಹುಟ್ಟಿ ಸಂಸ್ಕೃತಿಯ ರೂಪವನ್ನು ಪಡೆದವು. ಅದರಲ್ಲೂ ಭಾರತೀಯ ಸಮಾಜದಲ್ಲಿ ಜಾತಿ ವ್ಯವಸ್ಥೆಯಲ್ಲಿ ಕಟ್ಟುನಿಟ್ಟಾದ ಆಚರಣಾ ವ್ಯವಸ್ಥೆಗಳು ರೂಡಿಯಲ್ಲಿವೆ. ಹೀಗೆ ಬೇರೆಬೇರೆ ಸಮುದಾಯದಲ್ಲಿ ಅವರದೇ ಆದ ಆಚರಣೆಗಳು ಬೆಳೆದು ಬಂದಿವೆ. ಇಂತಹ ವಿಶಿಷ್ಟ ಆಚರಣೆಗಳನ್ನು ಭಾರತದ ಜನತೆ ಇಂದಿಗೂ ಉಳಿಸಿಕೊಂಡು ಬಂದಿದೆ. ಜಗತ್ತಿನಲ್ಲಿಯೇ ಅತ್ಯಂತ ಪ್ರಾಚೀನವಾದ ಮತ್ತು ಎಂದೂ ಭಗ್ನಗೊಳ್ಳದೇ ನಿರಾತಂಕವಾಗಿ ಪ್ರವಹಿಸುತ್ತಿರುವ ಸಾಂಸ್ಕೃತಿಕ ಪರಂಪರೆಯನ್ನು ನಾವು ಭಾರತದಲ್ಲಿ ಮಾತ್ರ

ಕಾಣುತ್ತೇವೆಂದು ಇರಾವತಿ ಕರ್ವೆಯವರು ಅಭಿಪ್ರಾಯ ಪಟ್ಟಿದ್ದಾರೆ. ಇದು ಭಾರತದ ಎಲ್ಲಾ ರೀತಿಯ ಸಮುದಾಯಗಳಲ್ಲಿ ಸಾಂಸ್ಕೃತಿಕ ವಿಶೇಷತೆಗಳನ್ನು ವಿಶಿಷ್ಟವಾಗಿ ಆಚರಿಸುವುದನ್ನು ಕಾಣಬಹುದು.

ರಾಧಾಕುಮುದ್ ಮುಖರ್ಜಿ ಹೇಳುವಂತೆ "ಭಾರತವು ಹಲವು ರೂಢಿಗಳ, ಆರಾಧನಾ ಪದ್ಧತಿಗಳ, ಧಾರ್ಮಿಕ ಪಂತಗಳ, ಸಂಸ್ಕೃತಿಗಳ, ನಂಬಿಕೆಗಳ, ಭಾಷೆಗಳ ಜನಾಂಗೀಯ ಪ್ರಕಾರಗಳ ಮತ್ತು ಸಾಮಾಜಿಕ ವ್ಯವಸ್ಥೆಗಳ ವಸ್ತು ಸಂಗ್ರಹಾಲಯವಾಗಿದೆ. ಅದೇ ರೀತಿ ಸಮುದಾಯ ಯಾವುದೇ ಇರಲಿ ಮಾನವ ಹುಟ್ಟಿನಿಂದ ಸಾಯುವವರೆಗೂ ಎಲ್ಲಾ ಕ್ರಿಯಾ ವಿಧಿಗಳನ್ನು ಅನುಭವಿಸಿ ಸಾಮಾಜಿಕ ಸ್ಥಾನವನ್ನು ಪಡೆಯುವುದೇ ಜೀವನಾವರ್ತಕ ಆಚರಣೆ ಎಂದೆನಿಸುವುದು.

ಮಾನವನು ಸಮಾಜದಲ್ಲಿ ಒಬ್ಬ ಸದಸ್ಯನಾಗಿದ್ದಾನೆ. ಈ ಸದಸ್ಯನು ತನ್ನ ಹುಟ್ಟಿನಿಂದ ಅಂತ್ಯದವರೆಗೂ ಕುಟುಂಬ ಮತ್ತು ಸಮಾಜದಲ್ಲಿ ಆಚರಿಸುವ ಆಚರಣೆಗಳು ಅವನ್ನು ಹಿಂಬಾಲಿಸುತ್ತವೆ. ತಾಯಿಯ ಹೊಟ್ಟೆಯಲ್ಲಿ ಮಾಂಸದ ಮುದ್ದೆಯಂತಿರುವ ಒಂದು ಜೀವಿ ಆಕಾರ ಪಡೆದು ಲಿಂಗ ಗುರುತಿಸಿಕೊಂಡು ಹೊರಬಂದ ನಂತರ ಅವನು ಸಮಾಜೀಕರಣ ಹೊಂದುತ್ತಾ ಸಮಾಜದಿಂದ ದೂರ ಆಗುವವರೆಗೂ ಹುಟ್ಟು, ಬಾಣಂತಿತನ, ಋತುಮತಿ, ವಿವಾಹ, ಸಾವು ಹೀಗೆ ಹಲವು ಹಂತಗಳಲ್ಲಿ ವ್ಯಕ್ತಿಯ ಜೀವನಾವರ್ತನಾ ಆಚರಣೆಗಳು ನಡೆಯುತ್ತಿರುತ್ತವೆ. ಈ ಜೀವನಾವರ್ತನಾ ಆಚರಣೆಗಳು ವ್ಯಕ್ತಿ ಯಾವ ಸಮೂಹದಲ್ಲಿ ಜನಿಸುವನೋ ಅದರ ಆಧಾರದ ಮೇಲೆ ನಿಗದಿಯಾಗಿರುತ್ತವೆ.

ಮಾನವ ಸಂಕುಲಕ್ಕೂ, ಪ್ರಾಣಿಗಳ ಸಂಕುಲಕ್ಕೂ ಭಿನ್ನತೆಯನ್ನು ಕಾಣುತ್ತೇವೆ. ಮಾನವ ಬುದ್ಧಿವಂತ ಜೀವಿ ಸಮಾಜವನ್ನು ನಿರ್ಮಿಸಿಕೊಂಡು ತನ್ನದೇ ಆದ ಮೌಲ್ಯಗಳನ್ನು ರೂಢಿಸಿಕೊಂಡಿದ್ದಾನೆ. ಪ್ರತೀ ಸಮುದಾಯದಲ್ಲೂ ಅವರದೇ ಆದ ಆಚರಣೆಗಳಿದ್ದು ಮಡಿ ಮೈಲಿಗೆ ಅಡಿಯಲ್ಲಿ ಹುಟ್ಟು, ಋತುಮತಿ, ಸೂತಕಗಳನ್ನು ಮೈಲಿಗೆಯೆಂದು, ಮರಣ ಸಂದರ್ಭವನ್ನು ದುಃಖದ ಸೂತಕವಾಗಿ ಆಚರಿಸುತ್ತಾನೆ. ಇಂತಹ ಮಡಿ ಮೈಲಿಗೆಗಳು ಪ್ರತಿ ಸಮುದಾಯದಲ್ಲಿ ಒಂದೇ ಆದರೂ ಅವುಗಳ ಅಚರಣೆಯಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಲಾಳಗೊಂಡ ಸಮುದಾಯದ ಜೀವನಾವರ್ತನ ಆಚರಣೆಗಳನ್ನು ಈ ಕೆಳಗಿನಂತೆ ಕಾಣಬಹುದು.

ಉತ್ತರಕರ್ನಾಟಕದ ಜಿಲ್ಲೆಗಳ ಮತ್ತು ದಕ್ಷಿಣಕರ್ನಾಟಕದ ಕೆಲವು ಜಿಲ್ಲೆಗಳ ಲಾಳಗೊಂಡ ಸಮುದಾಯದವರು 'ನಗರ್ತಿರ ಕೈಯಲ್ಲಿ ನಾಯಿ ಸಹ ನೀರುಕುಡಿಯುವುದಿಲ್ಲ' ಎಂಬ ಮಾತಿದೆ. ಆದರೆ ಅಲ್ಲಿನ ಲಾಳಗೊಂಡರು ನಗರ್ತಿರಿಂದಲೂ ಅಸ್ಪೃಶ್ಯತೆಗೊಳಗಾಗಿದ್ದಾರೆ. ಅಲ್ಲಿರುವವರಲ್ಲಿ ಅಂದರೆ ದೊಡ್ಡಬಳ್ಳಾಪುರ ಹಾಗೂ ಚಿಕ್ಕಬಳ್ಳಾಪುರದ ಕೆಲವುಕಡೆಗಳಲ್ಲಿ ಈಗಲೂ ಕುರಿ ಸಾಕಾಣಿಕೆ, ನೇಯ್ಗೆ ಮುಂತಾದ ಚಟುವಟಿಕೆಗಳಿವೆ. ಆದರೆ ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಬಳ್ಳಾರಿ, ರಾಯಚೂರು ಮುಂತಾದವುಗಳಲ್ಲಿ ಈ ಮೊದಲೇ ಸಮಾಜದ ಮೇಲ್ಪಂಕ್ತಿಯ ಸ್ತರದಲ್ಲಿ

ಗುರುತಿಸಿಕೊಂಡಿರುವುದರಿಂದ ಈ ಆಚರಣೆಗಳು ಕಂಡುಬರುವುದಿಲ್ಲ. ಅಲ್ಲಿ ಇಂತಹ ಆಚರಣೆಗಳು ಇನ್ನೂ ಸುಧಾರಣೆಯಾಗಿಲ್ಲ ಎಂಬುದು ಕ್ಷೇತ್ರಭೇಟಿಯ ಸಂದರ್ಭದಲ್ಲಿ ತಿಳಿದುಬಂದಿತು.

**೪.೨ ಲಾಳಗೊಂಡರ ಕೌಟುಂಬಿಕ ಹಿನ್ನೆಲೆ**

ಮನುಷ್ಯ ಸಮಾಜ ಮತ್ತು ಪ್ರಾಣಿ ಸಮಾಜಗಳ ನಡುವೆ ಕೆಲವು ಸಾಮಾನ್ಯ ಅಂಶಗಳು ಇವೆಯಾದರು, ಸಂಸ್ಕೃತಿ ಮತ್ತು ಸಂಪ್ರದಾಯದ ವಿಷಯಕ್ಕೆ ಬಂದಾಗ ಎರಡು ಭಿನ್ನವಾಗುತ್ತವೆ. ಸಂಸ್ಕೃತಿ ಮತ್ತು ಸಂಪ್ರದಾಯಗಳು ಸಮಾಜದ ಅಂಗವಾದರು ಇವು ಪ್ರಾಣಿ ಸಮಾಜಕ್ಕೆ ಅನ್ವಯಿಸುವುದಿಲ್ಲ. ಸಂಸ್ಕಾರಗಳು ಭೌತಿಕತೆ ಮತ್ತು ಆಧ್ಯಾತ್ಮಿಕತೆಗಳ ನಡುವೆ ಸೇತುವೆಯಾಗಿ ಕಾರ್ಯ ನಿರ್ವಹಿಸುತ್ತವೆ. ಮಾನವಸಂಸ್ಕೃತಿ ಸಂಪ್ರದಾಯಗಳಲ್ಲಿ ವ್ಯಕ್ತಿಗಳ ಜೀವನ, ವಿಧಾನ ಮತ್ತು ಸಾಮಾಜಿಕ ನೆಲೆಗಳು ಒದಗಿಸಿಕೊಡುವ ವರ್ಗನೆಲೆ ಮುಖ್ಯವಾಗಿದ್ದು ಸಂಸ್ಕೃತಿ ಎನ್ನುವುದು ವ್ಯಕ್ತಿಗಿಂತ ಸಮಾಜದ ಭಾಗವಾಗಿ, ಘಟಕವಾಗಿ, ಕುಟುಂಬದ ಒಡನಾಟ ಮತ್ತು ಹೋರಾಟಗಳಲ್ಲಿ ಮಾನವ ತನ್ನ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾನೆ. ಸಂಪ್ರದಾಯಕ್ಕೆ ಮನುಷ್ಯ ಬಡವ ಅಥವಾ ಸಿರಿವಂತನೋ ಎಂಬ ಪರಿಕಲ್ಪನೆ ಅಥವಾ ತಾರತಮ್ಯವಿಲ್ಲ ಮಾನವ ಜೀವನ ವಿಧಾನ ಸಂಸ್ಕೃತಿ ಎಂದಾದ ಮೇಲೆ ಸಂಪ್ರದಾಯಗಳು ಅವರವರ ಇಚ್ಚೆಗೆ ಅನುಗುಣವಾಗಿರುತ್ತವೆ. ಸಂಸ್ಕೃತಿಯು ಹೇಗೆ ಒಂದು ಬಗೆಯಲ್ಲವೋ ಅದೇ ರೀತಿ ಸಂಪ್ರದಾಯಗಳು ಒಂದೇ ವಿನ್ಯಾಸ ಹೊಂದಿಲ್ಲ. ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ಸಂಪ್ರದಾಯಗಳು ವಿಭಿನ್ನವಾಗಿರುತ್ತವೆ. ಹಾಗೆಯೇ ಪ್ರಾಚೀನ ಪರಂಪರೆಯಿಂದ ಸಮುದಾಯಗಳು ರೂಪಗೊಂಡಿರುತ್ತವೆ.

ಪ್ರತಿಯೊಂದು ಸಮುದಾಯದ ಆಚಾರವಿಚಾರ, ನಡೆನುಡಿ, ಒಡನಾಟಗಳ ಸಾಂಸ್ಕೃತಿಕ ಆಚರಣೆಗಳನ್ನು ಅಧ್ಯಯನ ಮಾಡಿದಾಗ ಆ ಸಮುದಾಯದ ಹಿನ್ನೆಲೆ ಅರಿಯಲು ಸಾಧ್ಯವಾಗುತ್ತದೆ. ಆದರೆ ಇಂದಿನ ಪೀಳಿಗೆ ಅವುಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿಲ್ಲ. ಆದರೂ ಅವರವರ ವೈಯಕ್ತಿಕ ಪ್ರತಿಷ್ಠೆಗಾಗಿ ಅವುಗಳನ್ನು ಅನುಸರಿಸುತ್ತಿದ್ದಾರೆ.

ಪ್ರತಿಯೊಂದು ಸಮುದಾಯದ ಭೌತಿಕಸಂಸ್ಕೃತಿಯು ನಿರ್ಧಿಷ್ಟ ಪ್ರದೇಶ, ಸಮುದಾಯ, ಆಯಾ ಸಮುದಾಯದ ಲೋಕದೃಷ್ಟಿಯನ್ನು ಅನುಲಕ್ಷಿಸಿ ನಿರ್ಮಾಣಗೊಂಡಿರುತ್ತವೆ. ಇದರೊಂದಿಗೆ ಸಮುದಾಯದ ಆಚರಣೆ ಸಂಪ್ರದಾಯಗಳು ವಿಶಿಷ್ಟ ಮತ್ತು ವಿಭಿನ್ನವಾಗಿರುತ್ತವೆ. ಈ ವಿಶಿಷ್ಟತೆಯಿಂದಲೇ ಆಯಾ ಸಮುದಾಯದ ಅನನ್ಯತೆ ನಮಗೆ ಸ್ಪಷ್ಟವಾಗುತ್ತದೆ. ಸಮುದಾಯಗಳು ವಾಸಿಸುವ ಭೌಗೋಳಿಕ ಪರಿಸರ, ಪ್ರಾದೇಶಿಕತೆ, ಜೀವನವರ್ತನ ಆಚರಣೆಗಳು, ಸಂಪ್ರದಾಯಗಳು, ಕುಲಕಸುಬುಗಳು ಮತ್ತು ಕೃಷಿ ಉತ್ಪಾದನಾ ಸಂಬಂಧಗಳಿಗನುಗುಣವಾಗಿ ಸಮುದಾಯದ ಭೌತಿಕಸಂಸ್ಕೃತಿ ರಚನೆಗೊಂಡಿರುತ್ತದೆ.

ಹಾಗೆಯೇ ಲಾಳಗೊಂಡ ಸಮುದಾಯದ ಜೀವನಕ್ರಮ ಮತ್ತು ಆಚರಣೆಗಳನ್ನು ಅರಿಯಲು ಕೆಲವು ನಿರ್ಧಿಷ್ಟ ಸಂಶೋಧನಾ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ. ತಿಳುವಳಿಕೆದಾರರುಗಳ ವಿವರಣೆಯ ಮೂಲಕ ಮತ್ತು ಸಂಪ್ರದಾಯಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಸಮುದಾಯದ ಆಚರಣೆಗಳನ್ನು ಅಧ್ಯಯನ ಮಾಡಲಾಗಿದೆ.

ಸಾಮಾಜಿಕರಣ ಪ್ರಕ್ರಿಯೆಯಲ್ಲಿ ಕುಟುಂಬವು ಬಹುಮುಖ್ಯವಾದ ಒಂದು ಸಾಮಾಜಿಕ ಸಂಸ್ಥೆ. ಮಾನವ ಹುಟ್ಟಿನಿಂದ ಸಾಯುವವರೆಗೂ ಈ ಸಾಮಾಜಿಕರಣ ಪ್ರಕ್ರಿಯೆಗೆ ಒಳಗಾಗುತ್ತಾನೆ. ಮಾನವನ ವ್ಯಕ್ತಿತ್ವ, ನಡವಳಿಕೆ, ನೈತಿಕ ನಿಯಮ, ಸಮಾಜದ ಹಕ್ಕು ಮತ್ತು ಕರ್ತವ್ಯಗಳನ್ನು ಪ್ರತಿಬಿಂಬಿಸುವ ಮೂಲ ನೆಲೆಯಾಗಿರುತ್ತದೆ. ವೈವಿಧ್ಯತೆಯನ್ನು ಹೊಂದಿದಂತಹ ಭಾರತೀಯ ಸಮಾಜದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯು ಮುಂಚೂಣಿಯಲ್ಲಿತ್ತು. ಆದರೆ ಆಧುನಿಕತೆಯ ಪ್ರಭಾವದಿಂದ ಸಾಮಾಜಿಕ ಚಲನೆ ಹೊಂದುತ್ತಾ ವಿಭಕ್ತ ಕುಟುಂಬಗಳು ಹೆಚ್ಚುತ್ತಾ ಬಂದವು. ಇಂತಹ ಕುಟುಂಬ ವ್ಯವಸ್ಥೆಯ ಬದಲಾವಣೆಗಳಿಗೆ ಲಾಳಗೊಂಡ ಸಮುದಾಯವು ಹೊರತಾಗಿಲ್ಲ. ಮಾನವನನ್ನು ಸಾಮಾಜಿಕರಣಗೊಳಿಸುವಲ್ಲಿ ಈ ಅವಿಭಕ್ತ ಮತ್ತು ವಿಭಕ್ತ ಕುಟುಂಬ ವ್ಯವಸ್ಥೆಗಳು ಪ್ರಧಾನ ಕಾರ್ಯಗಳನ್ನು ಮಾಡುತ್ತಲೇ ಬಂದಿವೆ.

**೪.೩ ಜೀವನಾವರ್ತಕ ಆಚರಣೆಗಳು**

**ಅ. ಜನನ**

ಜನ್ಮ ನೀಡುವುದು ಮಾನವ ಸೇರಿದಂತೆ ಪ್ರತಿಯೊಂದು ಪ್ರಾಣಿ-ಪಕ್ಷಿ ಸಂಕುಲಗಳಲ್ಲಿ ವಿಶಿಷ್ಟ ಜೈವಿಕ ಕ್ರಿಯೆಯಾಗಿದೆ. ಅದರಲ್ಲೂ ಹೆಣ್ಣು ಪ್ರಾಣಿಗಳು ತಮ್ಮ ಜೀವಿತಾವದಿಯಲ್ಲಿ ತನ್ನಿಂದ ಜೀವವನ್ನು ಹೆರದಿದ್ದ ಪಕ್ಷದಲ್ಲಿ ಬೇರೊಂದು ಪ್ರಾಣಿಯ ದೃಷ್ಟಿಯಲ್ಲಿ ಅದನ್ನು ತಿರಸ್ಕರಿಸುವ ಅಥವಾ ದಿಕ್ಕರಿಸುವುದನ್ನು ನಾವು ವಿಭಿನ್ನ ಪ್ರಾಣಿ ಸಂಕುಲದಲ್ಲಿ ಕಾಣುತ್ತೇವೆ. ಆದರೆ ಮಾನವ ಕುಲದಲ್ಲಿ ಕ್ರಮವೇ ಭಿನ್ನ. ತಾಯಿಯು ಮಗುವಿಗೆ ಜನ್ಮ ನೀಡುವ ಮೊದಲು ಕೆಲವೊಂದು ಆಚರಣೆಗಳು ಮಹತ್ವಪೂರ್ಣವಾಗಿರುತ್ತವೆ.

ಮಾನವನ ಜೀವನವನ್ನು ಜನನ, ಹರೆಯ, ಮರಣ ಎಂಬ ಮೂರು ಆಯಾಮಗಳಿಂದ ನೋಡಿದಾಗ, ಹುಟ್ಟು ಮೊದಲನೆ ಸ್ಥಾನ ಪಡೆಯುತ್ತದೆ. ಜನನ ಸಮಾಜಕ್ಕೆ ನೂತನ ಸದಸ್ಯನನ್ನು ನೊಂದಾಯಿಸುತ್ತದೆ. ಇಂತಹ ಜನನ ಸಂದರ್ಭದಲ್ಲಿ ಗರ್ಭಧಾರಣೆಯಿಂದ ಮಾಂಸದ ಮುದ್ದೆಯಾಗಿರುವ ಜೀವ ಮಾನವನ ರೂಪ ಪಡೆದು ಜನ್ಮತಾಳುತ್ತದೆ. ಆ ಮೂಲಕ ಗರ್ಭದ ಸಂಕೋಲೆಯಿಂದ ಆಹಾರ, ಗಾಳಿ, ನೀರನ್ನು ಪರೋಕ್ಷವಾಗಿ ತಾಯಿಯ ಮೂಲಕ ಪಡೆಯುತ್ತಿರುತ್ತದೆ. ಗರ್ಭದಿಂದ ಹೊರಬಂದ ತರುವಾಯ ಪ್ರತ್ಯಕ್ಷವಾಗಿ ಮತ್ತು ಪ್ರಕೃತಿ ಸಹಜವಾಗಿ ಪಡೆಯುತ್ತದೆ. ಹೆರಿಗೆಯಾದ ನಂತರ ಮಗುವನ್ನು ಸಾಮಾಜೀಕರಣಗೊಳಿಸುವ ನಿಟ್ಟಿನಲ್ಲಿ ಆಚರಣೆ ಮತ್ತು ಸಂಪ್ರದಾಯಗಳು ಮಹತ್ವದ ಪಾತ್ರವಹಿಸುತ್ತವೆ. ಇವು ಸಹ ಸಮಾಜದ ಒಳಗಡೆ ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯಿಂದ ಕೂಡಿರುತ್ತವೆ. ಜನನ ಸಂದರ್ಭದ ಆಚರಣೆಗಳನ್ನು ಮುಖ್ಯವಾಗಿ ತಾಯಿ(ಬಾಣಂತಿ) ಮಗುವಿಗೆ ಸಂಬಂಧಿಸಿದ ಆಚರಣೆಗಳೆಂದು ವರ್ಗೀಕರಣ ಮಾಡಬಹುದಾಗಿದೆ. ಇಂತಹ ಆಚರಣೆಗಳು ತಾಯಿ ಮಗುವಿಗೆ ಅಲ್ಲದೆ ಕುಲ, ಬೆಡಗುಗಳನ್ನು ಆವರಿಸಿಕೊಂಡು ನಡೆಸಲ್ಪಡುತ್ತವೆ. ಈ ರೀತಿಯಾಗಿ ಮಗುವನ್ನು ಸಾಮಾಜೀಕರಣಗೊಳಿಸುವ ಮತ್ತು ತಾಯಿಯ

ಫಲವಂತಿಕೆಯನ್ನು ಪ್ರತಿನಿಧಿಸುತ್ತಾ ಕುಲದ ಅಥವಾ ಸೂತಕವನ್ನು ಈ ಜನನ ಸಂಬಂಧಿ ಆಚರಣೆಗಳಿಂದ ತಿಳಿಯಬಹುದಾಗಿರುತ್ತದೆ.

ಸಾಂಸ್ಕೃತಿಕ ವೈವಿಧ್ಯತೆ ಮತ್ತು ಸಾಮಾಜಿಕ ಸ್ತರವಿನ್ಯಾಸದಿಂದಾಗಿ ಆಚರಣೆಗಳು ತಲೆಮಾರಿನಿಂದ ತಲೆಮಾರಿಗೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯನ್ನು ಪಡೆದಿರುತ್ತವೆ. ಇಂತಹ ವಿಶೇಷ ಆಚರಣೆಗಳಿಗೆ ಲಾಳಗೊಂಡ ಸಮುದಾಯವು ಹೊರತಾಗಿಲ್ಲ.

ತಾಯಿಯು ಗರ್ಭಧರಿಸಿದ ನಾಲ್ಕನೇ ತಿಂಗಳಲ್ಲಿ ಬಯಕೆಬುತ್ತಿ(ಗರ್ಭಿಣಿಗೆ ಇಷ್ಟವಾದ ತಿನಿಸು)ಯನ್ನು ತಾಯಿಯ ಮನೆಯಿಂದ ತರಲಾಗುತ್ತದೆ. ನಂತರ ಐದನೇ ಅಥವಾ ಎಂಟನೇ ತಿಂಗಳಲ್ಲಿ ಸೀಮಂತ ಕಾರ್ಯಕ್ರಮವನ್ನು ಮಾಡುತ್ತಾರೆ. ತವರು ಮನೆಯಿಂದ ತಂದ ಹೊಸಬಟ್ಟೆಯನ್ನು ಧರಿಸಿ ಸಿಹಿ ಊಟಮಾಡಿಸಿ ಉಡಿತುಂಬಿಸುವುದರ ಮೂಲಕ ತವರುಮನೆ(ತಾಯಿಯಮನೆ)ಗೆ ಕರೆದುಕೊಂಡು ಹೋಗುತ್ತಾರೆ.

ಲಾಳಗೊಂಡ ಸಮುದಾಯದಲ್ಲಿ ವಿವಾಹದ ನಂತರ ಚೊಚ್ಚಲ ಹೆರಿಗೆಗೆಂದು ಗರ್ಭವತಿಯಾದ ಸ್ತ್ರೀಯನ್ನು ಗರ್ಭಧರಿಸಿದ ಎಂಟು ತಿಂಗಳಲ್ಲಿ ಕರೆತರುವರು. ಇಲ್ಲಿ ಮಹಿಳೆಯರ ಧೈರ್ಯವನ್ನು ಶ್ಲಾಘಿಸಲೇಬೇಕಾಗುತ್ತದೆ. ಯಾವುದೇ ಆಸ್ಪತ್ರೆ ಸೌಲಭ್ಯ ಇಲ್ಲದೆ ಮತ್ತು ಸೂಲಗಿತ್ತಿಯ ಸಹಾಯದಿಂದ ಹೆರಿಗೆ ಮಾಡಿಸಿಕೊಳ್ಳುತ್ತಿದ್ದರು. ಹೆರಿಗೆ ಸಮಯದಲ್ಲಿ ಮನೆ ದೇವರೆ ಕಾಪಾಡಬೇಕೆಂದು ಅಗೋಚರಶಕ್ತಿಯನ್ನು ನೆಚ್ಚಿಕೊಂಡು ಹರಕೆ ಹೊತ್ತುಕೊಳ್ಳುತ್ತಾ ಅದು ನಮ್ಮನ್ನು ಕಾಪಾಡುತ್ತದೆ ಎಂಬ ದೃಢವಾದ ನಂಬಿಕೆ ಇವರದಾಗಿತ್ತು. ಇದು ತಾಯಿ ಮತ್ತು ಮಗುವಿಗೆ ಗಂಡಾಂತರ ಕಾಲವದು, ಎಷ್ಟೋ ಸಂದರ್ಭದಲ್ಲಿ ತಾಯಿ, ಮಗು, ಮರಣ ಹೊಂದಿದ ಸಂದರ್ಭಗಳಿವೆ. ಮಗುವಿನ ಜನನದ ನಂತರ ಕುಟುಂಬದಲ್ಲಿ ಸೂತಕದ ಸಮಯವೆಂತಲು ಅದರ ನಿವಾರಣೆಗೆ ಧಾರ್ಮಿಕ ಕ್ರಿಯಾ ವಿಧಿ-ವಿಧಾನಗಳನ್ನು ಆಚರಿಸಬೇಕೆಂಬುದು ಸಂಪ್ರದಾಯ. ಈ ಸೂತಕದ ಸಮಯದಲ್ಲಿ ತಾಯಿಮಗುವನ್ನು ಮನೆಯ ಒಂದು ಪ್ರತ್ಯೇಕವಾದ, ಸ್ವಚ್ಚವಾದ ಕೋಣೆಯಲ್ಲಿ ಇರಿಸುತ್ತಾರೆ. ಸೂತಕ ತೆಗೆಯುವವರೆಗೂ ಮನೆಯ ಇತರೆ ಸದಸ್ಯರು, ಕುಟುಂಬದವರು, ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ.

ಮಗು ತಾಯಿಯ ಗರ್ಭದಿಂದ ಹೊರಬಂದ ನಂತರ ಕಾಲುಗಳನ್ನು ಹಿಡಿದು ತಲೆಕೆಳಗೆ ಮಾಡಿ ಮಗುವಿನ ಬೆನ್ನಿಗೆ ಸಣ್ಣಗೆ ಹೊಡೆಯುವರು. ಆಗ ಮಗು ಕಿರುಚುತ್ತದೆ. ಇದಕ್ಕಿಂತ ಮುಂಚಿತವಾಗಿ ಹೆರಿಗೆಯ ದಿನಗಳು ಸಮೀಪಿಸಿದಂತೆ ಬೇವಿನ ಅಥವಾ ಲಕ್ಕಲಿ ಗಿಡದ ರೆಂಬೆಯೊಂದನ್ನು ದೇವರ ಸಂಕೇತವೆಂದು ಮನೆಯಲ್ಲಿ ತಪ್ಪದೆ ಇರಿಸುವರು. ಹೆರಿಗೆಗೆ ಬೇಕಾದ ಹರಳೆಣ್ಣೆ, ಮೊರ, ಪೊರಕೆ, ಕತ್ತಿ, ಸೂಜಿ ಮೊದಲಾದ ಸಾಮಗ್ರಿಗಳನ್ನು ಸಿದ್ಧವಾಗಿಟ್ಟುಕೊಂಡಿರುತ್ತಾರೆ. ಹೆರಿಗೆ ನೋವು ಕಾಣಿಸಿದ ತಕ್ಷಣ ಹರಳೆಣ್ಣೆಯನ್ನು ಉಗುರು ಬೆಚ್ಚಗೆ ದೀಪದ ಶಾಖದಿಂದ ಕಾಯಿಸಿ ಕಿಬ್ಬೊಟ್ಟೆಗೆ; ಮುಖ್ಯವಾಗಿ ಮರ್ಮಸ್ಥಾನಕ್ಕೆ ಸವರುವರು. ಹೊಟ್ಟೆ ಮತ್ತು ಬೆನ್ನುಗಳಿಗೆ ಎಣ್ಣೆ ಹಚ್ಚಿ ಮೈಯನ್ನು ಮೃದುಗೊಳಿಸಲು ತೀಡುವರು. ಇದನ್ನು ಸುಳು ಮಾಡುವುದು ಎನ್ನುವರು. ಸರಿಯಾಗಿ ಸುಳುವಾಗದೆ ಹೆರಿಗೆ

ತ್ರಾಸದಾಯಕವಾದರೆ ಸೂಲಗಿತ್ತಿ ಹರಳೆಣ್ಣೆಯನ್ನು ತನ್ನ ಎರಡು ಕೈಗಳಿಗೆ ಹಚ್ಚಿಕೊಂಡು ಹೊರಬರುತ್ತಿರುವ ಮಗುವಿನ ತಲೆ ಅಥವಾ ಕಾಲುಗಳನ್ನು ಮೃದುವಾಗಿ ಹಿಡಿದು ಎಳೆಯುವಳು. ಪ್ರಸ್ತುತ ಸಂದರ್ಭದ ಆಸ್ಪತ್ರೆಯ ಹೆರಿಗೆಗಳಿಗೆ ಹೋಲಿಸಿದರೆ ಆರ್ಥಿಕವಾಗಿ ಶಕ್ತವಾಗಿಲ್ಲದ ಕೆಳವರ್ಗದ ಜನರ ಹೆರಿಗೆಗಳು ಇಷ್ಟು ಸರಳವೇ ಎಂದು ಆಶ್ಚರ್ಯಪಡಬೇಕಾಗಿದೆ. ಹೆರಿಗೆ ಬಹಳ ತಡವಾದಾಗ ಸೂಲಗಿತ್ತಿ ಗರ್ಭಕ್ಕೆ ಕೈ ಹಾಕಿ ಮಗುವನ್ನು ಹೊರತರುವ ಸಂದರ್ಭಗಳುಂಟು. ಇದಕ್ಕೆ ಪೂರ್ವದಲ್ಲಿ ಬಿಸಿ ನೀರಾಗಲಿ, ಕಾಫಿಯಾಗಲಿ ಕುಡಿಸಿ ಹೊಟ್ಟೆಯಲ್ಲಿ ಬಿಸಿ ದ್ರವಸೇರಿಸಿ ಹೆರಿಗೆ ಸುಲಭವಾಗುವಂತೆ ಮುಂಜಾಗ್ರತ ಕ್ರಮ ಕೈಗೊಳ್ಳುವರು. ಹೆರಿಗೆ ನಂತರ ತಾಯಿ ನೋವಿನಿಂದ ನರಳಾಡುತ್ತಿರುವಾಗ ಕತ್ತಿ ಅಥವಾ ಕುಡುಗೋಲಿನಿಂದ ಕರುಳ ಬಳ್ಳಿಯನ್ನು ಕತ್ತರಿಸಿ ಮಗುವನ್ನು ಬೇರ್ಪಡಿಸುವಳು. ಈ ಕರುಳಬಳ್ಳಿ ಕತ್ತರಿಸುವ ಕಾರ್ಯವನ್ನು ಸೂಲಗಿತ್ತಿ ಬಹಳ ಜಾಗರೂಕತೆಯಿಂದ ನಿರ್ವಹಿಸಬೇಕಾಗುತ್ತದೆ. ಸ್ವಲ್ಪ ಅಜಾಗರೂಕತೆ ಆದರೂ ಮಗುವಿನ ಜೀವನಕ್ಕೆ ಕುತ್ತು ಬರುತ್ತದೆ. ಸುಮಾರು ೪–೫ ಅಂಗುಲದಷ್ಟು ಕರುಳನ್ನು ಮಗುವಿನ ಕಡೆ ಉಳಿಸಿ ತಾಯಿ ಕರುಳನ್ನು ಭದ್ರವಾಗಿ ಹಿಡಿದುಕೊಂಡು ರಕ್ತಸ್ರಾವ ಆಗದಂತೆ ಕತ್ತರಿಸಲಾಗುತ್ತದೆ. ಕತ್ತರಿಸಲ್ಪಟ್ಟ ಕರುಳಿನ ತುದಿಗಳನ್ನು ಹೊಂಗೆ ಎಣ್ಣೆಯಿಂದ ಸುಟ್ಟು, ಸುಟ್ಟ ಬೂದಿಯನ್ನು ಕರುಳಿಗೆ ನಂಜಾಗಬಾರದೆಂದು ಹಚ್ಚುವರು. ಮಗುವಿಗೆ ೪–೫ ಅಂಗುಲದ ಕರುಳು ೫–೬ ದಿನಗಳಲ್ಲಿ ಹೊಕ್ಕಳಿನಿಂದ ಕಳಚಿಕೊಳ್ಳುತ್ತದೆ. ಅದನ್ನು ಬಟ್ಟೆಯಲ್ಲಿ ಕಟ್ಟಿ ಸೂತಕ ತೀರುವವರೆಗೆ ತೊಟ್ಟಿಲಿಗೆ ಕಟ್ಟುವರು. ಮಗುವಿಗೆ ಯಾವುದೇ ಪೀಡೆ ಪಿಶಾಚಿಗಳ ನೆರಳು ಬೀಳಬಾರದು ಎಂದು ಈ ರೀತಿ ಮಾಡುವರು. ಹೀಗೆ ಜನ್ಮ ಪಡೆದ ಮಗುವನ್ನು ಉಗುರು ಬೆಚ್ಚಗಿನ ಬಿಸಿ ನೀರಿನಲ್ಲಿ ತೊಳೆದು ಹಳೆಯ ಮೊರದ ಮೇಲೆ ಹಾಕುವರು. ಹೊಕ್ಕಳದ ಎರಡೂ ಬದಿಗೆ ಸೂಜಿ ಅಥವಾ ಸಣ್ಣ ಸಲಾಕೆಯಿಂದ ಚೌಕಾಕಾರವಾಗಿ ಬರೆ ಹಾಕುವರು. ಇದು ಮಗುವಿಗೆ ದಡಾರ, ಕಾಮಲೆ, ವಾಯುಸಂಬಂಧಿ ರೋಗಗಳು ಬರದಂತೆ ತಡೆಯುವ ಜ್ಞಾನವಾಗಿದೆ. ಗರ್ಭಕೋಶದಿಂದ ಕಸ(ಮಾಸ) ಹೊರಬಂದಾಗ ಅದನ್ನು ಒಂದು ಹೊಸ ಕುಂಭದಲ್ಲಿ ಹಾಕುವರು. ಆ ಕುಂಭದಲ್ಲಿ ಸ್ವಲ್ಪ ಜೋಳದ ಕಾಳು ಹಾಕಿ ಬಚ್ಚಲುಮನೆ ಪಕ್ಕದಲ್ಲಿ ಗುಂಡಿತೋಡಿ ಮುಚ್ಚಿ ಅದರ ಮೇಲೆ ಒಂದು ಕಲ್ಲು ಚಪ್ಪಡಿ ಹೇರುವರು. ಹೆರಿಗೆ ನಂತರ ಬಾಣಂತಿಗೆ ನೀರು ಹಾಕಿ ಶುಚಿಗೊಳಿಸುವರು.

ಹೆರಿಗೆ ಸಮಯದಲ್ಲಿ ಹೆಚ್ಚು ರಕ್ತಸ್ರಾವದಿಂದ ಬಳಲಿದ ಬಾಣಂತಿ ಶಕ್ತಿ ವರ್ಧಕವಾಗಲು ಉತ್ತುತ್ತಿ, ಒಣಕೊಬ್ಬರಿ, ಒಣದ್ರಾಕ್ಷಿ, ಗೋಡಂಬಿ ಇತ್ಯಾದಿಗಳಿಂದ ತಯಾರಿಸಿದ ಪದಾರ್ಥಗಳನ್ನು ಹೆಚ್ಚಾಗಿ ನೀಡುವರು. ಜೊತೆಗೆ ಭಜ್ಜಬೇರು ಕಟ್ಟುಮಾಡಿ ದಾರದಲ್ಲಿ ಪೋಣಿಸಿ ತಾಯಿ ಮತ್ತು ಮಗುವಿನ ಕೊರಳಿಗೆ ಅಥವಾ ಕೈಗೆ ಕಟ್ಟುವರು. ಮೂರು ದಿನಗಳ ನಂತರ ತಾಯಿಯು ಮೊಲೆಹಾಲು ಉಣಿಸುವಳು. ಹಾಲು ಬರದಿದ್ದಾಗ ಮೇಕೆ ಹಸುಗಳ ಹಾಲನ್ನು ಕುಡಿಸುವಳು. ಆದರೆ ಇಂದೂ ಹೆರಿಗೆಯಾದ ತಕ್ಷಣವೇ ಹಾಲು ಉಣಿಸುವರು.

ಹೆರಿಗೆಯಾದ ಮೂರನೆ ದಿನದಲ್ಲಿ ಬಚ್ಚಲು ಪೂಜೆ ಮಾಡುವರು. ಬಚ್ಚಲು ಪಕ್ಕದ ಕುಳಿಯಲ್ಲಿ ಹೂಳಿದ್ದ ಮಾಸದ ಕುಡಿಕೆಗೆ ಪೂಜೆಮಾಡುವರು. ಈ ದಿನದಂದು ಹೆರಿಗೆ ಮಾಡಿಸಿದ ಸೂಲಗಿತ್ತಿಗೆ

ಎಲೆ ಅಡಿಕೆ, ಕೊಬ್ಬರಿಬಟ್ಲು ಇಟ್ಟು ತಮ್ಮ ಕೈಲಾದಷ್ಟು ದಕ್ಷಿಣೆ ಕೊಡುವರು. ಮಗು ಹುಟ್ಟಿದ ಸಂದರ್ಭದಲ್ಲಿ ದೈವದವರನ್ನು ಕರೆದು ಊಟ ಹಾಕುವುದರಿಂದ ಹುಟ್ಟಿದ ಮಗುವಿಗೆ ಮುಂದೆ ಸಾಲ ಸೂಲ ಇನ್ನಿತರೆ ಯಾವುದೇ ತೊಂದರೆಗಳು ಬರುವುದಿಲ್ಲ ಎಂಬ ನಂಬಿಕೆ ಇವರದ್ದಾಗಿದೆ. ಹೀಗೆ ಮೂರು ದಿನದ ಕಾರ್ಯಮಾಡಿ ಸೂತಕವನ್ನು ಕಳೆದುಕೊಳ್ಳುವರು.

ಬಾಣಂತಿಗೆ ಮೂರು ದಿನಗಳವರೆಗೆ ಸಪ್ಪೆ ಅನ್ನ, ಗಂಜಿ(ಗೋದಿನುಚ್ಚಿನಿಂದ ತಯಾರಿಸಿ ಅದಕ್ಕೆ ಬೆಲ್ಲ ಮತ್ತು ತುಪ್ಪವನ್ನು ಹಾಕಿ ತಯಾರಿಸಿದ ಆಹಾರ) ಚಕೋರಿ, ಬಾರ್ಲಕ್ಕಿ ಗಂಜಿ, ತಂಬಿಟ್ಟು ನೀಡುವರು. ಬಾಣಂತಿಯು ಕನಿಷ್ಠ ೩ ತಿಂಗಳು ತಣ್ಣೀರು ಕುಡಿಯುವುದಾಗಲಿ ಅಥವಾ ಮುಟ್ಟುವುದಾಗಲಿ ಮಾಡಬಾರದು. ಇದನ್ನು ಬಾಣಂತಿ ಪತ್ತೇವು ಎನ್ನುವರು. ಈ ಮುಂಚೆ ಆಸ್ಪತ್ರೆ ಇಲ್ಲದಿದ್ದರಿಂದ ಆರೋಗ್ಯ ಕಾಪಾಡಿಕೊಳ್ಳಲು ಕರುಳಬಳ್ಳಿ ಕತ್ತರಿಸಿದ ಮೇಲೆ ನಂಜು ಆಗದಿರಲಿ ಮತ್ತು ಹೊಟ್ಟೆಯೊಳಗೆ ವಾಯುಗಂಟು ಸಂಚರಿಸಿದಾಗ ಆಗುವ ನೋವನ್ನು ತಡೆದುಕೊಳ್ಳಲು ಬೆಲ್ಲದಿಂದ ಮಾಡಿದ ತಿಳಿಯಾದ ಖಾದ್ಯವನ್ನು ಕುಡಿಸುವರು. ಬಾಣಂತಿಗೆ ಸ್ನಾನಕ್ಕೆ ಸಿದ್ಧಪಡಿಸಿದ ಬಿಸಿ ನೀರಿನಲ್ಲಿ ಲಕ್ಕಲಿ, ಬೇವು ನಿಂಬೆ, ಬಿಲ್ವಪತ್ರೆ, ಎಣ್ಣೆಯಲ್ಲಿ ಬೆರೆಸಿ ಕುದಿಸಿ ಸ್ನಾನ ಮಾಡಿಸುವರು.

**ಆ. ನಾಮಕರಣ**

ಮಗು ಜನಿಸಿದ ಐದು, ಒಂಭತ್ತು ಅಥವಾ ಹದಿನಾರನೇ ದಿನಗಳಲ್ಲಿ ಸೂತಕ ತೆಗೆದು ಮಗುವಿಗೆ ಲಿಂಗಧಾರಣೆ ಮಾಡುತ್ತಾರೆ. ಮನೆಯನ್ನೆಲ್ಲಾ ಸ್ವಚ್ಚಗೊಳಿಸಿ ಸುಣ್ಣಬಣ್ಣ ಮಾಡಿಸುತ್ತಾರೆ. ಮನೆಯ ಸದಸ್ಯರು ಅಂದು ಬಾಣಂತಿ ಮತ್ತು ಮಗುವನ್ನು ಸ್ನಾನಮಾಡಿಸಿದ ನಂತರ ಜಂಗಮರನ್ನು ಕರೆತಂದು ಪಾದಪೂಜೆಮಾಡಿ ಆ ಮನೆಗೆಲ್ಲಾ ಪಾದೋದಕ, ಗೋ ಮೂತ್ರವನ್ನು ಮನೆಗೆಲ್ಲಾ ಸಿಂಪಡಿಸುತ್ತಾರೆ ಈ ರೀತಿ ಮಾಡಿದರೆ ಸೂತಕ ನಿವಾರಣೆಯಾದಂತೆ ಎಂಬ ನಂಬಿಕೆ. ಇದೇ ಸಂದರ್ಭದಲ್ಲಿ ಮಡಿವಾಳರಿಗೆ, ಸೂಲಗಿತ್ತಿಯರಿಗೆ(ಹೆರಿಗೆ ಮಾಡಿಸುವವರಿಗೆ) ಉಡಿಅಕ್ಕಿ ಹಾಕುವರು. ಲಿಂಗಧಾರಣೆ ದಿನವೇ ಬಹುತೇಕರು ನಾಮಕರಣ ಮಾಡುತ್ತಾರೆ ಇನ್ನೂ ಕೆಲವರು ತಮ್ಮ ಆರ್ಥಿಕ ಸಾಮರ್ಥ್ಯಕ್ಕೆ ತಕ್ಕಂತೆ ಮೂರು ಅಥವಾ ಐದು ತಿಂಗಳಲ್ಲಿ ಅತ್ಯಂತ ವೈಭವವಾಗಿ ಆಚರಣೆ ಮಾಡುತ್ತಾರೆ.

ಹೆರಿಗೆಯಾಗಿ ಹದಿನಾರನೇ ದಿನದಂದು ಮಗುವಿಗೆ ನಾಮಕರಣ ಶಾಸ್ತ್ರವನ್ನು ಮಾಡುವರು. ಇದನ್ನು ತೊಟ್ಟಿಲಿಗೆ ಹಾಕೋಶಾಸ್ತ್ರ ಎನ್ನುವರು. ಆ ದಿನದಂದು ಐದರಿಂದ ಒಂಬತ್ತು ಅಥವಾ ಹನ್ನೊಂದು ಮುತ್ತೈದೆಯರನ್ನು, ನೆರೆಹೊರೆ ನೆಂಟರಿಷ್ಟರನ್ನು ಕರೆದು ತೊಟ್ಟಿಲಶಾಸ್ತ್ರ ಮಾಡುವರು. ನಾಮಕರಣ ದಿನದಂದು ಆರಂಭದಲ್ಲಿ ಬಾಣಂತಿಯ ಜೊತೆ ಕೆಲವು ಮುತ್ತೈದೆಯರು ಅಂದು ಮಾಡಿದ ನೈವೇದ್ಯ, ಪೂಜಾಸಾಮಗ್ರಿ, ಹಂಗುನೂಲು, ಬೇವಿನಎಲೆ, ಹತ್ತಿಯಕಾಳು ಇತ್ಯಾದಿಗಳೊಂದಿಗೆ ಬಾವಿಗೆ ಹೋಗಿ ಅದರ ದಡವನ್ನು ಶುಚಿಮಾಡಿ ಪೂಜಿಸುತ್ತಾರೆ ಇದಕ್ಕೆ ಗಂಗೆ ಪೂಜೆ ಎನ್ನುತ್ತಾರೆ. ಅಲ್ಲಿ ಐದು ಜನ ಮುತ್ತೈದೆಯರಿಗೆ ಹುಡಿ ತುಂಬುತ್ತಾರೆ. ನಂತರ ಆ ಬಾವಿಯಿಂದ ಒಂದು ಕೊಡ ನೀರನ್ನು ಬಾಣಂತಿ ಹೊತ್ತು ತರುತ್ತಾಳೆ. ತಂದ ಕೊಡವನ್ನು ತೊಟ್ಟಿಲಡಿಯಲ್ಲಿರಿಸಿ ಜೊತೆಗೆ ಬೀಸುವ ಕಲ್ಲು ಇಡುತ್ತಾರೆ. ಈ ಕಲ್ಲಿಗೆ, ಕೊಡಕ್ಕೆ ಹಾಗೂ ತೊಟ್ಟಿಲಿಗೆ ಪೂಜೆ ನೆರವೇರಿಸುತ್ತಾರೆ. ತೊಟ್ಟಿಲಿನ

ಆಚೆ–ಈಚೆ ಮುತ್ತೈದೆಯರು ನಿಂತು ಮೊದಲು ಬೀಸುವ ಕೈಕಲ್ಲನ್ನು ತೊಟ್ಟಿಲಿನ ಮೇಲಿನಿಂದ ಕೆಳಗೆ, ಕೆಳಗಿನಿಂದ ಮೇಲೆ ಸುತ್ತಿಸುತ್ತಾರೆ. ನಂತರ ಮಗುವನ್ನು ಸುತ್ತಿಸಿ ತೊಟ್ಟಿಲಲ್ಲಿ ಹಾಕುತ್ತಾರೆ. ಹೆಣ್ಣು ಮಗುವಾದರೆ ಮಗುವಿಗೆ ಕಾಲುಚೈನು, ಕಡಗ, ಬಂಗಾರದ ಓಲೆಗಳನ್ನು ಹಾಕುವರು. ಗಂಡು ಮಗುವಾದರೆ ಕಡಗ, ಬಂಗಾರದ ಓಲೆ, ಬೆಳ್ಳಿ ಉಡುದಾರ ತೊಡಿಸುವರು. ಆ ಮೇಲೆ ಮೊದಲು ಮನೆ ದೇವರ ಹೆಸರನ್ನು, ನಂತರ ಮಗುವಿಗಾಗಿ ನಿರ್ಣಹಿಸಿದ ಹೆಸರನ್ನು ಮಗುವಿನ ಕಿವಿಯಲ್ಲಿ ಹೇಳುತ್ತಾರೆ. ಆ ದಿನದ ಕಾರ್ಯದಲ್ಲಿ ಸೋದರ ಮಾವ/ಅತ್ತೆಯ ಪಾತ್ರ ಬಹುಮುಖ್ಯವಾಗಿರುತ್ತದೆ. ಆ ಮಗುವಿನ ನಾಮಕರಣಶಾಸ್ತ್ರದ ಎಲ್ಲಾ ಖರ್ಚು ವೆಚ್ಚದ ಹೊಣೆಗಾರಿಕೆ ತವರು ಮನೆಯವರ ಮೇಲಿರುತ್ತದೆ. ಜಂಗಮರು ಹೆಸರು ಕಟ್ಟಲು ಮಗು ಹುಟ್ಟಿದ ಗಳಿಗೆ, ನಕ್ಷತ್ರ, ಅಮವಾಸ್ಯೆ, ಹುಣ್ಣಿಮೆ, ಚುಕ್ಕಿ ಯಾವ ಕಡೆ ಮೂಡಿತ್ತು ಇತ್ಯಾದಿಗಳನ್ನು ಪರಿಶೀಲಿಸಿಕೊಂಡು ಆ ಮಗುವಿನ ಬಲಾಬಲ ನೋಡಿ ಹೆಸರನ್ನು ಸೂಚಿಸುವರು. ಹೆಸರನ್ನು ಸೋದರ ಮಾವ/ಅತ್ತೆಯವರು ಮೂರು ಬಾರಿ ಕಿವಿಯಲ್ಲಿ ಹೇಳುವುದರ ಮೂಲಕ ಹೆಸರು ಕಟ್ಟುವರು. ಗಂಡುಮಗು ಹುಟ್ಟಿದರೆ ಹೆಚ್ಚು ಖುಷಿ ಪಡುವರು. ಆ ದಿನ ಸಿಹಿ ಅಡುಗೆ ಮಾಡಿ ಎಲ್ಲರಿಗೂ ಬಡಿಸಿ ತೊಟ್ಟಿಲಿಗೆ ಮಗು ಹಾಕಿ ಕಾರ್ಯವನ್ನು ಮುಗಿಸುವರು. ಹೆಸರು ಕರೆಯುವಾಗ ಮೊದಲಿಗೆ ಗಂಡನ ಮನೆಯ ದೇವರ ಹೆಸರು ಕರೆದು ನಂತರ ಹೆಸರನ್ನು ಕರೆಯುವರು. ಹೆಸರಿಡುವ ಕಾರ್ಯ ಮುಗಿದು ಐದರಿಂದ ಒಂಬತ್ತು ತಿಂಗಳ ಒಳಗಡೆ ಗಂಡನ ಮನೆಗೆ ಕಳುಹಿಸಲಾಗುತ್ತದೆ. ಅಲ್ಲಿಯವರೆಗೂ ಮಗು ತೊಟ್ಟಿಲಿನಲ್ಲಿ ಬೆಳೆಯುತ್ತದೆ. ಗಂಡನ ಮನೆಗೆ ಕಳುಹಿಸುವಾಗ ಒಂಭತ್ತು ತಿಂಗಳು ತುಂಬುವುದರೊಳಗೆ ಕಿವಿಗೆ ಮುರ ಹಾಕುವನು. ಮಗು ಮತ್ತು ತಾಯಿಗೆ ಹೊಸಬಟ್ಟೆ ತಂದು ಕುಂಕುಮ, ಬಳೆ, ಒಡಲಕ್ಕಿ ಹಾಕಿ ತೊಟ್ಟಿಲು ಕಳುಹಿಸೋ ಶಾಸ್ತ್ರಮಾಡುವರು. ಲಿಂಗಧಾರಣೆ ಸಮಯದಲ್ಲಿ ಸೋದರಮಾವ ಅಥವಾ ಸೊದರತ್ತೆ ಅಂದರೆ ತಾಯಿಯ ತಮ್ಮ ಇಲ್ಲವೆ ತಂದೆಯ ತಂಗಿ ಯಾರಾದರೊಬ್ಬರು ಮುಂದೆ ನಿಂತು ಜಂಗಮರಿಂದ ಲಿಂಗಧಾರಣೆ ನೂಲು ಮತ್ತು ಮಗುವಿನ ಸೊಂಟಕ್ಕೆ ಹುಡುದಾರವನ್ನು ಕಟ್ಟಿ ಸೋದರ ಮಾವನಿಂದ ಮಗುವಿನ ಕಿವಿಯಲ್ಲಿ ಮಗುವಿನ ನಾಮದೇಯವನ್ನು ಮೂರು ಬಾರಿ ಹೇಳುತ್ತಾರೆ. ಹಾಗೆಯೇ ಸಿಹಿ ಭೋಜನವನ್ನು ಬಂಧುಬಾಂದವರಿಗೆ ಉಣಬಡಿಸುತ್ತಾರೆ. ಹೆಣ್ಣು ಮಗುವಾದರೆ ಸಾಂಕೇತಿಕವಾಗಿ ಕ್ರಿಯಾವಿಧಿಗಳನ್ನು ಮಾಡಿ ಮುಗಿಸುತ್ತಾರೆ. ಗಂಡು ಮಗುವಾದರೆ ಅತ್ಯಂತ ಸಂಭ್ರಮದಿಂದ ಆಚರಣೆಯನ್ನು ಮಾಡುತ್ತಾರೆ. ಗಂಡು ಮಗು ಹುಟ್ಟಿದರೆ ಸಿಹಿ ಹಂಚಿ ಸಂಭ್ರಮಪಡುತ್ತಾರೆ. ಕಾರಣ ವಂಶೋದ್ಧಾರಕ ಮತ್ತು ಮೂಲವೃತ್ತಿ ವ್ಯವಸಾಯವಾದ ಕಾರಣ ಕೃಷಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಾನೆ ಎಂಬ ಭಾವನೆ.

**ಇ. ಜವುಳ ತೆಗಿಸುವುದು**

ತಾಯಿಯು ಹೆರಿಗೆಯ ಸಂದರ್ಭದಲ್ಲಿ ಅಂದುಕೊಂಡ ಹರಕೆಯಲ್ಲಿ ಮಗುವಿನ ಜವುಳ ತೆಗೆಸೋದು ಒಂದಾಗಿದೆ. ಪರಂಪರಾಗತವಾಗಿ ಆಚರಿಸಿಕೊಂಡು ಬಂದಿರುವ ಜವುಳ ತೆಗೆಯುವ ಶಾಸ್ತ್ರವನ್ನು ಮಗು ಜನಿಸಿದ ಒಂಭತ್ತು, ಹನ್ನೊಂದು ತಿಂಗಳಲ್ಲಿ ನೆರವೇರಿಸಲಾಗುತ್ತದೆ. ಇದು ತಪ್ಪಿದರೆ ಮೂರು ವರ್ಷದೊಳಗೆ ನೆರವೇರಿಸುತ್ತಾರೆ. ಈ ಸಂದರ್ಭದಲ್ಲಿ ಮಗುವಿಗೆ ಹಾಗೂ ಮಗುವಿನ ತಂದೆತಾಯಿಯರಿಗೆ

ಹೊಸ ಬಟ್ಟೆಯನ್ನು ತಂದು ತಾಯಿಗೆ ಹುಡಿ ತುಂಬುತ್ತಾರೆ. ಬಂಧುಬಾಂದವರು ಸೇರಿಕೊಂಡು ಮನೆಯ ದೇವರು ಅಥವಾ ಇಷ್ಟ ದೇವರಿಗೆ ಜವುಳ ತೆಗೆಸುವ ಪದ್ಧತಿ ಮಾಡಲಾಗುತ್ತದೆ. ಈ ಪದ್ಧತಿಯನ್ನು ಮಗುವಿನ ಸೋದರಮಾವ ಎಲೆಕತ್ತರಿ(ಎಲೆಗತ್ತರಿ) ಶಾಸ್ತ್ರಮಾಡಿ ಕ್ಷೌರಿಕರನ್ನು ಕರೆಯಿಸಿ ಮುಡಿಕೊಡುವ ಪದ್ಧತಿ ಜಾರಿಯಲ್ಲಿದೆ. ಕ್ಷೌರಿಕನಿಗೆ ಹೊಸ ಮೊರದಲ್ಲಿ, ಬೆಲ್ಲ, ಅಕ್ಕಿ, ಬೇಳೆ, ಹೊಸವಸ್ತ್ರ ಮತ್ತು ವೀಳ್ಯದಜೊತೆಗೆ ಹಣವನ್ನು ಕೊಡುವ ಪದ್ಧತಿ ಜಾರಿಯಲ್ಲಿದೆ.

ಈ ರೀತಿಯಾಗಿ ಲಾಳಗೊಂಡ ಸಮುದಾಯದಲ್ಲಿ ಹೆರಿಗೆ, ಬಾಣಂತಿತನ, ಮಗುವಿನ ಹೆಸರಿಡುವುದು, ಜವುಳ ತೆಗೆಸೋದು ಎಂಬ ಪಾರಂಪರಿಕ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವುಗಳು ಮೌಢ್ಯತೆಗಿಂತ ಭಿನ್ನವಾಗಿ ವೈಜ್ಞಾನಿಕ ವಿಧಾನದ ಮೂಲಕ ಎರಡು ಜೀವಗಳ ರಕ್ಷಣಾ ಕ್ರಮಗಳಾಗಿವೆ ಎಂದರೂ ತಪ್ಪಾಗಲಿಕ್ಕಿಲ್ಲ. ಲಾಳಗೊಂಡ ಸಮುದಾಯದಲ್ಲಿ ಮಾತ್ರವಲ್ಲದೇ ಎಲ್ಲಾ ಸಮುದಾಯದಲ್ಲಿ ತಮ್ಮ ಪಾರಂಪರಿಕ ಜ್ಞಾನದ ಮೂಲಕ ಇಂತಹ ಸಂದರ್ಭಗಳಲ್ಲಿ ಜೀವ ರಕ್ಷಿಸಿಕೊಳ್ಳುವ ಕಲೆಯನ್ನು ಮೈಗೂಡಿಸಿಕೊಂಡಿರುತ್ತಾರೆ. ಆದರೆ ಆಧುನಿಕ ಸಮಾಜದ ಶೀಘ್ರ ಸ್ಥಿತ್ಯಂತರಗಳು ತಮ್ಮ ಪಾರಂಪರಿಕ ಆಚಾರ–ವಿಚಾರಗಳನ್ನು ಕಳೆದುಕೊಂಡು ಶಿಷ್ಟ ಸಂಸ್ಕಾರಗಳೆಡೆಗೆ ಸಾಗುತ್ತಿರುವುದು ವಿಪರ್ಯಾಸವೇ ಸರಿ. ಇವುಗಳನ್ನು ಪುನರ್ ರಚನೆಗೆ ಒಳಪಡಿಸಿ ಮುಂದುವರೆಯುವಂತೆ ನೋಡಿಕೊಳ್ಳುವ ಅಗತ್ಯತೆ ಇದೆ.

**ಈ. ನಾರಿದಟ್ಟಿ (ಸಣ್ಣ ಸೀರೆ)**

ಹೆಣ್ಣು ಮಗು ನಾಲ್ಕು ವರ್ಷವಿದ್ದಾಗ ದಟ್ಟಿಕಾರ್ಯ ನೆರವೇರಿಸುತ್ತಾರೆ. ಗಂಡು ಮಗುವಿಗೆ ಕಂಬಳಿ ಕೊಡುತ್ತಾರೆ. ದಟ್ಟಿಕಾರ್ಯದಲ್ಲಿ ತಾಯಿಯ ಮನೆಯವರು ತಂದ ಸೀರೆಯನ್ನು ಮಗುವಿಗೆ ತೊಡಿಸಿ, ಅಲಂಕರಿಸಿ ಆರತಿ ಮಾಡುತ್ತಾರೆ. ಎಲ್ಲರಿಗೂ ವಿಶೇಷ ಭೋಜನ ನೆರವೇರಿಸುತ್ತಾರೆ.

ಹೀಗೆ ಮಾಡಿದರೆ ಮಗುವಿಗೆ ವಿವಾಹ ನಿಶ್ಚಯವಾದಂತೆ ಎಂಬ ನಂಬಿಕೆಯಿತ್ತು. ಪ್ರಸ್ತುತ ದಿನಗಳಲ್ಲಿ ಈ ಕಾರ್ಯ ಅಷ್ಟೊಂದು ಕಡ್ಡಾಯವಾಗಿ ಆಚರಿಸುತ್ತಿಲ್ಲ. ರಾಯಚೂರು, ಬಳ್ಳಾರಿ, ಗುಲ್ಬರ್ಗ, ಧಾರವಾಡ, ದಾವಣಗೆರೆ, ಕರ್ನೂಲು, ಅನಂತಪುರ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಮಾತ್ರ ಚಾಲ್ತಿಯಲ್ಲಿದೆ.

**ಉ. ಋತುಮತಿ ಶಾಸ್ತ್ರ**

ಸೃಷ್ಟಿಯ ನಿಯಮದಂತೆ ನಿಸರ್ಗದಲ್ಲಿನ ಜೀವಸಂಕುಲ ದೈಹಿಕ ಬದಲಾವಣೆ ಹೊಂದುವುದು ಸಹಜ. ಇದಕ್ಕೆ ಮನುಷ್ಯಜೀವಿ ಹೊರತಾಗಿಲ್ಲ. ಹೆಣ್ಣು ಪ್ರೌಢಾವಸ್ಥೆ ತಲುಪಿ ಋತುಮತಿಯಾಗುವುದು ನಿಸರ್ಗದತ್ತವಾದದ್ದು. ಋತುಮತಿಯಾಗುವುದರ ಮೂಲಕ ದೈಹಿಕ ಬದಲಾವಣೆಯನ್ನು ಹೊಂದುವಳು ಇದನ್ನು ಮೈನೆರೆಯುವುದು, ಪುಷ್ಪವತಿಯಾಗುವುದು, ದೊಡ್ಡವಳಾಗುವುದು ಎಂದು ಪ್ರಾದೇಶಿಕ ರೂಢಿಭಾಷೆಯಲ್ಲಿ ಕರೆಯಲಾಗುತ್ತದೆ. ಪ್ರತಿಯೊಂದು ಸಮುದಾಯದಲ್ಲಿ ಹೆಣ್ಣುಮಗಳು ಋತುಮತಿಯಾದ ಸಂದರ್ಭವನ್ನು ಮೈಲಿಗೆ ಎಂದು ಭಾವಿಸುವರು. ಋತುಮತಿಯಾದ ಹೆಣ್ಣಿಗೆ

ಅವರವರ ಆರ್ಥಿಕ ಸ್ಥಿತಿಗತಿಯ ಮೇಲೆ ಕೆಲ ಆಚರಣೆಗಳನ್ನು ಮಾಡುವರು. ಹೆಣ್ಣು ಋತುಮತಿಯಾದ ಮೇಲೆ ಮಧ್ಯವಯಸ್ಸಿನಲ್ಲಿ ಆಕೆಯ ಋತುಚಕ್ರ ಸ್ಥಗಿತಗೊಳ್ಳುವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸಲಾಗುವುದು. ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟಮೊದಲ ಬಾರಿಗೆ ಜೈವಿಕ ಬದಲಾವಣೆ ಆಗುತ್ತಿರುವುದನ್ನು ಅನುಭವಿಸುತ್ತಾಳೆ. ಋತುಮತಿಯಾರೆ ಹೆಣ್ಣು ಸಂಸಾರಸ್ಥಳಾಗಿ ತಾಯ್ತನದ ಸುಖವನ್ನು ಅನುಭವಿಸಲು ಅರ್ಹತೆ ಹೊಂದಿದಳೆಂದು ತಂದೆ-ತಾಯಿ, ಬಂಧು-ಬಳಗ, ಸಂತೋಷಪಡುವರು. ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಹುಡುಗಿ ಸ್ತ್ರೀಯಾಗುವುದನ್ನು ಹದಿಹರೆಯ ವಯಸ್ಸು ಎನ್ನಲಾಗುತ್ತದೆ. ಹುಡುಗಿ ಸ್ತ್ರೀತನದ ಗುಣಲಕ್ಷಣಗಳನ್ನು ಪಡೆಯುವಳು. ಹೀಗೆ ಋತುಮತಿಯಿಂದ ಸ್ತ್ರೀಯು ಫಲವಂತಿಕೆಯ ಸಂಕೇತವಾಗಿ ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಳ್ಳುವಳು.

ಹೆಣ್ಣುಮಗಳು ಋತುಮತಿಯಾದರೆ ಸೋದರತ್ತೆ ಇಲ್ಲವೆ ಇತರೆ ಹೆಂಗಸರಿಂದ ಎಣ್ಣೆ, ಹಾಲುತುಪ್ಪ ಹಾಕಿ ನೀರೆಯುತ್ತಾರೆ. ಋತುಮತಿಯಾದ ಕನ್ನೆಯನ್ನು ಐದು, ಒಂಬತ್ತು ಇಲ್ಲವೆ ಹನ್ನೊಂದು ದಿನಗಳವರೆಗೆ ಮನೆ ವ್ಯವಹಾರಗಳಿಂದ ನಿಷಿದ್ಧಗೊಳಿಸಿ, ಪ್ರತ್ಯೇಕ ಕೂಡಿಸಿರುತ್ತಾರೆ. ಆ ದಿನಗಳಲ್ಲಿ ಆ ಕನ್ನೆಗೆ ಪೌಷ್ಟಿಕ ಮತ್ತು ಪುಷ್ಠಿದಾಯಕವಾದ ಆಹಾರ ನೀಡುತ್ತಿರುತ್ತಾರೆ. ಮನೆಯನ್ನು ಶುಭ್ರಗೊಳಿಸಿ ಜಂಗಮರಿಂದ ತಂದ ಪಾದೋದಕಗಳನ್ನು ಸಿಂಪಡಿಸುತ್ತಾರೆ. ಪ್ರತಿ ದಿನ ಸಂಜೆ ಸುಮಂಗಲಿಯರು ಸೇರಿ ಸೀತೆ, ಸಾವಿತ್ರಿ, ಹೇಮರೆಡ್ಡಿ ಮಲ್ಲಮ್ಮ ಇತ್ಯಾದಿ ಸ್ತ್ರೀಯರ ಹಾಡು ಆಡುವುದು, ಅವರ ಪಾತ್ರ(ವೇಷ) ಧರಿಸುವುದು, ಆರತಿ ಮಾಡುವುದು ಈ ರೀತಿ ಒಂಬತ್ತು ಇಲ್ಲವೆ ಹನ್ನೊಂದು ದಿನದವರೆಗೆ ಮಾಡುತ್ತಾರೆ. ಕೊನೆಯ ದಿನ ಋತುಮತಿಯಾದ ಕನ್ಯೆಯೊಂದಿಗೆ ಸುಮಂಗಲಿಯರು ಬಾವಿಗೆ ಹೋಗಿ ಅಂದು ತಯಾರಿಸಿದ ನೈವೇದ್ಯದೊಂದಿಗೆ ಗಂಗಾಪೂಜೆ ನೆರವೇರಿಸುತ್ತಾರೆ. ಐದುಜನ ಸುಮಂಗಲಿಯರಿಗೆ ಉಡಿತುಂಬುತ್ತಾರೆ. ನಂತರ ಒಂದು ಬಿಂದಿಗೆ ನೀರನ್ನು ಆ ಕನ್ಯೆಯ ತಲೆಯ ಮೇಲೆ ಹೋರಿಸಿತರುತ್ತಾರೆ. ನಂತರ ಆ ಕನ್ಯೆ ಯಥಾರೀತಿ ಗೃಹಕಾರ್ಯಗಳಲ್ಲಿ ಭಾಗಿಯಾಗುತ್ತಾಳೆ.

**ಊ. ವಿವಾಹ**

ವಿವಾಹವು ಕುಟುಂಬದಂತೆ ಬಹಳ ಪ್ರಾಮುಖ್ಯತೆಯನ್ನು ಪಡೆದಿರುವ ಸಾಮಾಜಿಕ ಸಂಸ್ಥೆ. ಮಾನವ ಲೈಂಗಿಕ ಬಯಕೆಗಳನ್ನು ಪೂರೈಸುವ ಮತ್ತು ಸಮಾಜದ ವಿಕಾಸಕ್ಕೆ ಮತ್ತು ಉಳುವಿಗೆ ಕಾರಣೀ ಭೂತವಾಗಿದೆ. ಸಮಾಜದ ಮುಂದುವರಿಕೆಗೆ ವಿವಾಹವು ವಧು-ವರರಿಗೆ ಜವಾಬ್ದಾರಿಯನ್ನು ಹೊರಿಸುತ್ತದೆ. ಸಂತಾನೋತ್ಪತ್ತಿಯನ್ನು ಬೆಳೆಸುತ್ತಾ ಕುಲ, ಜಾತಿ, ಸಾಮಾಜಿಕ ಸ್ಥಾನಮಾನಗಳನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುತ್ತದೆ.

ಭಾರತದಲ್ಲಿ ಹುಟ್ಟಿಕೊಂಡಿರುವ ಬಹುತೇಕ ನಂಬಿಕೆಗಳಲ್ಲಿ ಮಾನವನ ಜೀವನವು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪರಿಕಲ್ಪನೆಗಳಿಂದ ಕೂಡಿದೆ. ಇವುಗಳಲ್ಲಿ ಕಾಮ ಎಂಬ ಬಯಕೆಯನ್ನು ವಿವಾಹದಿಂದ ತೀರಿಸಿಕೊಳ್ಳಲು ಸಾಮಾಜಿಕ ಮನ್ನಣೆ ಪಡೆದಿದೆ. ಪುರಾತನ ಭಾರತೀಯ ಸಮಾಜದಲ್ಲಿ ಬ್ರಹ್ಮ, ದೈವ, ಆರ್ಶ, ಪ್ರಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚಿಕ ಎಂಬಿತ್ಯಾದಿ ಎಂಟು

ವಿವಾಹದ ಪ್ರಕಾರಗಳನ್ನು ಗುರುತಿಸಲಾಗಿತ್ತು. ಅದರಲ್ಲಿ ಸಮಾಜದ ಮನ್ನಣೆಯಿಂದ ನಡೆಯಲ್ಪಡುತ್ತಿದ್ದ ಬ್ರಹ್ಮವಿವಾಹವು ಶ್ರೇಷ್ಠ ಎಂಬ ಅಭಿಪ್ರಾಯವಿದೆ.

ಪ್ರಾಚೀನ ಕಾಲದ ಮಾನವ ಅಲೆಮಾರಿತನದಿಂದ ಗುಂಪು ಜೀವನಕ್ಕೆ ಕಾಲಿಟ್ಟು ಸಾಮೂಹಿಕವಾಗಿ ಜೀವನ ನಿರ್ವಹಣೆಯಲ್ಲಿ ತೊಡಗಿದ್ದ ಅವಧಿಯಲ್ಲಿ ಇತರೆ ಪ್ರಾಣಿಗಳಂತೆ ಮತ್ತು ಲೈಂಗಿಕ ಸಂಬಂಧವನ್ನು ಹೊಂದಿದನು. ಆ ಮೂಲಕ ಸೃಷ್ಟಿ ಕ್ರಿಯೆಯಲ್ಲಿ ತನಗರಿವಿಲ್ಲದಂತೆಯೇ ಭಾಗಿಯಾಗುತ್ತಿದ್ದನು. ತನ್ನ ಜೀವನ ವಿಧಾನದಲ್ಲಿ ಮಾರ್ಪಾಡುಗಳಾಗಿ ಅಲೆಮಾರಿತನಕ್ಕೆ ಕಡಿವಾಣ ಹಾಕಿ, ನಾವು–ನಮ್ಮವರು ಎಂಬ ಸೌಹಾರ್ದ ಭಾವನೆಯಿಂದಾಗಿ ಮುಕ್ತ ಲೈಂಗಿಕತೆಗೆ ತೆರೆ ಎಳೆಯಲಾಯಿತು. ಇದು ಹೊಮೋಸೆಫಿಯನ್ಸ್ ಹಿಂದಿನ ಕಾಲಾವಧಿಯಲ್ಲಿ ಸನ್ನಿವೇಶವಾಗಿತ್ತು. ನಂತರದಲ್ಲಿ ಗಂಡು–ಹೆಣ್ಣುಗಳ ಸಂಬಂಧಗಳ ಬಗ್ಗೆ ಹೊಸ ರೂಪ ಪಡೆದು ವಿವಾಹದ ಮೂಲಕ ಕುಟುಂಬಗಳನ್ನು ಕಟ್ಟಿಕೊಳ್ಳುವ ಸಂಪ್ರದಾಯ ಬೆಳೆದು ಬಂದಿರುವ ಸಾಧ್ಯತೆ ಇದ್ದಿರಬಹುದು. ಪ್ರಾಚೀನ ಕಾಲದ ಸಮಾಜದಿಂದ ಹಿಡಿದು ಇಂದಿನ ಆಧುನಿಕ ಸಮಾಜದವರೆಗೆ ವಿವಾಹವು ವಿವಿಧ ಮಾದರಿಗಳಲ್ಲಿ ಬೆಳೆದು ಬಂದಿರುತ್ತದೆ. ಇಂತಹ ವಿವಾಹವು ಸಾಂಸ್ಕೃತಿಕ ಪಲ್ಲಟ ಹೊಂದಿದ ಮತ್ತು ಸಾಮಾಜಿಕ ಸ್ತರವಿನ್ಯಾಸ ಹೊಂದಿರುವ ಭಾರತದಲ್ಲಿ ವಿಶೇಷ ಸಂಸ್ಕಾರ ವಿಧಿಯಾಗಿ ಮುಂದುವರೆದುಕೊಂಡು ಬಂದಿರುವುದನ್ನು ಕಾಣಬಹುದು. ಬಹು ಸಂಸ್ಕೃತಿ ಹೊಂದಿದ ಭಾರತೀಯ ಸಮಾಜದಲ್ಲಿ ಬುಡಕಟ್ಟು ಸಮುದಾಯಗಳು ವಿಭಿನ್ನ ಆಚರಣೆ ಮತ್ತು ಸಂಪ್ರದಾಯಗಳನ್ನು ಮೈಗೂಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಪ್ರತಿಯೊಂದು ಬುಡಕಟ್ಟು ತನ್ನದೇ ಆದ ಸಂಪ್ರದಾಯ, ಆಚರಣೆಗಳನ್ನು ಹೊಂದಿವೆ. ಆ ಮೂಲಕ ವಿವಾಹ ಕಾರ್ಯಗಳು ನಡೆಯುತ್ತವೆ. ಪೂರ್ವಿಕರಲ್ಲಿನ ಸಂಪ್ರದಾಯ, ಆಚರಣೆಗಳು ಮರೆಯಾಗುತ್ತಾ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತಿವೆ. ಕೆಲವೊಂದು ಮಾಯವಾಗಿ ಮತ್ತೆ ಕೆಲವು ಸೇರಿಕೊಂಡಿವೆ. ಸೋದರಮಾವ, ಅತ್ತೆ, ಅಕ್ಕನ ಮಗಳನ್ನು ವಿವಾಹವಾಗಬೇಕು ಎಂಬ ವಿಧಿಗಳಿವೆ. ಇವರ ವಿವಾಹ ಕಾರ್ಯಗಳು ಹಲವು ಹಂತಗಳಲ್ಲಿ ನಡೆಯುವುದನ್ನು ಹೀಗೆ ಗುರುತಿಸಬಹುದಾಗಿದೆ.

ಸಾಮಾನ್ಯವಾಗಿ ಗಂಡಿಗೆ ೨೦, ಹೆಣ್ಣಿಗೆ ೧೫ ರಿಂದ ೧೮ ವರ್ಷದ ಒಳಗೆ ಮದುವೆ ನೆರವೇರಿಸುತ್ತಾರೆ. ಲಾಳಗೊಂಡರ ಲೌಕಿಕ ಜೀವನವು ಭಿನ್ನವಾಗಿ ಕಾಣದಿದ್ದರೂ ಕೆಲವೊಂದು ಆಚರಣೆಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ವಿವಾಹವು ಪ್ರಮುಖ ಸಮಾರಂಭ ಈ ವಿವಾಹದ ಸಂದರ್ಭದಲ್ಲಿ ಅವರ ಇಡೀ ಕುಟುಂಬ ಮತ್ತು ಗ್ರಾಮದ ಜನರೆಲ್ಲ ಸಾರ್ವಜನಿಕ ಸಮಾರಂಭವಾಗಿ ವಿವಾಹವು ಪ್ರಾಮುಖ್ಯತೆ ಪಡೆದಿದೆ. ವಿವಾಹ ಎನ್ನುವುದು ಅನೇಕ ಕ್ರಿಯಾ ವಿದಿವಿಧಾನಗಳನ್ನೊಳಗೊಂಡ ಒಂದು ಪವಿತ್ರ ಬಂಧವಾಗಿದೆ. ಈ ವಿವಾಹದ ಪ್ರಮುಖ ಕ್ರಿಯಾ ವಿಧಿವಿಧಾನಗಳು ಹಿಂದೆ ಒಂಬತ್ತು ದಿನಗಳವರೆಗೆ ನೆರವೇರುತ್ತಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಸೋಗು ಮತ್ತು ಒತ್ತಡದ ಜೀವನ ಶೈಲಿಯಿಂದಾಗಿ ಸಾಂಪ್ರದಾಯಿಕ ಕಾರ್ಯಕ್ರಮಗಳು ನೆನೆಗುದಿಗೆ ಬಿದ್ದಿವೆ ಹಾಗೂ ಕಡಿಮೆ ಸಮಯದಲ್ಲಿ ಎಲ್ಲವೂ ನಡೆದು ಹೋಗುತ್ತವೆ. ಆದ್ದರಿಂದ ಇಂದು ಒಂದು ಅಥವಾ ಎರಡು ದಿನಗಳಲ್ಲಿ ವಿವಾಹದಂತಹ ಸಮಾರಂಭಗಳು ಮುಕ್ತಾಯಗೊಳ್ಳುತ್ತವೆ.

ಆಧುನಿಕತೆಯ ಪ್ರಭಾವವಿದ್ದರೂ ವೈವಾಹಿಕ ಸಮಾರಂಭಗಳಿಗೆ ಇರುವಂತಹ ಮಹತ್ವ ಇಂದಿಗೂ ಕಡಿಮೆಯಾಗಿಲ್ಲ ಎಂದು ಹೇಳುತ್ತವೆ. ಹಾಗಾಗಿ ಲಾಳಗೊಂಡರ ಪ್ರಮುಖ ವೈವಾಹಿಕ ಕ್ರಿಯಾವಿಧಿಗಳೆಂದರೆ ಮದುವೆ ಮಾತುಕತೆ, ಲಗ್ನಕಟ್ಟಿಸುವ ಕಾರ್ಯ, ಧಾನ್ಯಪೂಜೆ, ದೇವತಾ ಕಾರ್ಯ, ಮಾಂಗಲ್ಯಧಾರಣೆ, ಗಂಗಾಪೂಜೆ, ನಾಗೋಲೆಶಾಸ್ತ್ರ, ಆರತಕ್ಷತೆಕಾರ್ಯ ಈ ರೀತಿ ಹಂತಹಂತವಾಗಿ ವಿವಾಹವು ೨ ಕುಟುಂಬಗಳ ಸಾರ್ವಜನಿಕ ಸಮಾರಂಭವಾಗಿ ರೂಪಗೊಂಡಿದೆ.

ಲಾಳಗೊಂಡರಲ್ಲಿ ಪರಸ್ಪರ ಹೆಣ್ಣು ಮತ್ತು ಗಂಡಿನ ಎರಡು ಕುಟುಂಬಗಳು ಒಪ್ಪಿಗೆ ಸೂಚಿಸಿದ ನಂತರವೇ ವಿವಾಹ. ವಿವಾಹಕ್ಕೂ ಮುಂಚೆ ಮಾತುಕತೆ ನಿಶ್ಚಿತಾರ್ಥ ಎಲ್ಲವೂ ಗುರು ಜಂಗಮರ ಮುಖಂಡತ್ವದಲ್ಲಿ ನಡೆಯುತ್ತದೆ. ಮನೆಯ ಯಜಮಾನರು ಒಪ್ಪಿಗೆ ಸೂಚಿಸಿದ ನಂತರ ಸಂಬಂಧ ಗಟ್ಟಿಯಾಗುತ್ತದೆ. ಇಲ್ಲಿ ಗಂಡು ಮತ್ತು ಹಣ್ಣುಗಳ ಒಪ್ಪಿಗೆಗೆ ಹಿಂದೆ ಅವಕಾಶವಿರಲಿಲ್ಲ ಆದರೆ ಇತ್ತೀಚಿನ ದಿನಗಳಲ್ಲಿ ಗಂಡು ಮತ್ತು ಹೆಣ್ಣು ಇಬ್ಬರ ಒಪ್ಪಿಗೆಯನ್ನು ಕೇಳುತ್ತಾರೆ.

ಋ. ಕನ್ಯೆಯ ನಿಶ್ಚಿಯ

ಲಾಳಗೊಂಡ ಸಮುದಾಯದಲ್ಲಿ ಕನ್ಯೆಯ ನಿಶ್ಚಿಯ ಕಾರ್ಯದಲ್ಲಿ ವರನ ಕಡೆಯವರು ಕನ್ಯೆಯ ಮನೆಗೆ ಮೊದಲು ಹೋಗುವುದು ಸಂಪ್ರದಾಯ. ವರನ ತಂದೆಯು ತನ್ನ ಸಮುದಾಯದ ಹಿರಿಯರೊಂದಿಗೆ ಜಂಗಮರನ್ನು ಕರೆದುಕೊಂಡು ಕನ್ಯೆಯ ಮನೆಗೆ ಹೋಗುವರು. ಕನ್ಯೆಯನ್ನು ನೋಡಿ ಅವರ ಮನೆದೇವರು ಮತ್ತು ಕನ್ಯೆಯ ಹಸ್ತ ಅನ್ವೇಷಣೆಯ ಕಾರ್ಯ ನಡೆಸುವರು. ಇದನ್ನು ಕುಡಿ ಅಥವಾ ಸಾಲಾವಳಿ ಎನ್ನುವರು. ಇಲ್ಲಿ ಜಂಗಮನ ಪಾತ್ರ ಪ್ರಮುಖವಾಗಿರುತ್ತದೆ. ಸಂಬಂಧ ಬೆಳೆಸಬಹುದೋ? ಬೇಡವೋ? ಎಂಬ ತೀರ್ಮಾನಕ್ಕೆ ಬಂದನಂತರ ಹುಡುಗಿ ಒಪ್ಪಿಗೆಯಾದರೆ ಸಮುದಾಯದ ಮುಖ್ಯಸ್ಥರ ಸಮ್ಮುಖದಲ್ಲಿ ವರನ ಮನೆಯವರು ತಾಂಬೂಲವನ್ನು ಬದಲಿಸುವರು. ಅವನು ಒಪ್ಪಿಗೆ ಸೂಚಿಸಿದ ನಂತರವೇ ಕನ್ಯೆಯ ನಿಶ್ಚಯವಾಗುವುದು.

**ಎ. ವಿವಾಹವನ್ನು ನಿಶ್ಚಿಯಿಸುವುದು ಅಥವಾ ನಿಶ್ಚಿತಾರ್ಥ**

ಕನ್ಯೆಯನ್ನು ನಿಶ್ಚಯಿಸಿದ ನಂತರ ವಿವಾಹ ನಿಶ್ಚಿಯಿಸುವುದನ್ನು ಲಾಳಗೊಂಡರಲ್ಲಿ ವಿಳ್ಯಾಶಾಸ್ತ್ರ (ಎಲೆ-ಅಡಿಕೆಶಾಸ್ತ್ರ, ಕುಂಕುಮಶಾಸ್ತ್ರ, ವೀಳ್ಯಾ ಶಾಸ್ತ್ರ)ಎನ್ನುವರು. ಪರಸ್ಪರ ಎರಡು ಕಡೆಯವರಿಂದ ಒಪ್ಪಿಗೆ ಪಡೆದ ನಂತರ ಎಲೆ ಅಡಿಕೆಯನ್ನು ವಿನಿಮಯ ಮಾಡಿಸುವರು. ಇದಾದನಂತರ ವಧುವಿನ ಕಡೆಯವರು ನೆಂಟರಿಷ್ಟರು ಮತ್ತು ಸಮುದಾಯದ ಮುಖಂಡರ ಸಮ್ಮುಖದಲ್ಲಿ ವರನಕಡೆಯವರಿಗೆ ವರದಕ್ಷಿಣೆ ಕಟ್ಟುವರು. ಇದು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿದ್ದು, ಇಂದಿಗೂ ಆಚರಣೆಯಲ್ಲಿದೆ. ಈ ಹಿಂದೆ ಅದು ವಧುದಕ್ಷಿಣೆಯಾಗಿತ್ತು ಆದರೆ ಇಂದು ವರದಕ್ಷಣೆಯಾಗಿದೆ. ವರದಕ್ಷಿಣೆಯನ್ನು ನೀಡಿ ಮಾತುಕತೆ ಆಡಿದ ನಂತರ ವಿವಾಹದ ದಿನವನ್ನು ಖಚಿತಪಡಿಸಿಕೊಳ್ಳುವರು. ಕರ್ನಾಟಕದಲ್ಲಿ ಲಾಳಗೊಂಡ ಸಮುದಾಯದಲ್ಲಿ ಕೆಲವರು ನಿಶ್ಚಿತಾರ್ಥ ಕಾರ್ಯವನ್ನು ಮದುವೆಯ

ಹಿಂದಿನ ದಿನದರಾತ್ರಿ ಮದುವೆಮಂಟಪದ ಚಪ್ಪರದಡಿಯಲ್ಲಿ ಅಥವಾ ಆಯದ ಮನೆಯ ಒಳಗಡೆ ನಿಶ್ಚಿತಾರ್ಥ ಕಾರ್ಯವನ್ನು ಮುಗಿಸುವರು. ಈ ಶಾಸ್ತ್ರದ ದಿನದಂದು ಕನ್ಯೆಗೆ ವರನ ಕಡೆಯವರು ಸೀರೆ, ಕುಪ್ಪಸ, ಬಾಚಣಿಕೆ, ಕನ್ನಡಿ, ಉಂಗುರ ನೀಡುವರು. ನಿಶ್ಚಿತಾರ್ಥ ದಿನದಂದು ನೀಡಿದ ಸೀರೆ, ರವಿಕೆಯನ್ನು ತೊಟ್ಟು ಹೆಣ್ಣು ಹಸಿ ಮಣೆ ಮೇಲೆ ಕೂರಬೇಕು.

**ಏ. ತೆರ (ವಧುದಕ್ಷಿಣೆ)**

ವಿವಾಹದಲ್ಲಿ ಹೆಣ್ಣಿಗೆ ತೆರವು ಕೊಡುವ ಪದ್ಧತಿ ಇತ್ತು. ಅಂದರೆ ವರನಕಡೆಯವರು ವಧುವಿನ ಕಡೆಯವರಿಗೆ ತೆರ (ದಕ್ಷಣೆ) ಕೊಡುವುದು. ಈ ತೆರವು ನಿರ್ದಿಷ್ಟ ಮೌಲ್ಯದ ಹಣ, ಬಟ್ಟೆ, ಹಸು, ಕಂಬಳಿ ಹಾಗು ಒಡವೆಯಾಗಿರುತ್ತಿತ್ತು. ಬಡವರಾಗಲಿ, ಶ್ರೀಮಂತರಾಗಲಿ ಈ ಕನ್ಯಾಶುಲ್ಕವನ್ನು ಕಟ್ಟಲೇಬೇಕು. ಇದು ಹಿಂದಿನಿಂದಲೂ ಅನುಸರಿಸಿಕೊಂಡು ಬಂದ ಪದ್ಧತಿ. ಕನ್ಯಾಶುಲ್ಕ ಪದ್ಧತಿಯಿಂದಾಗಿ ಈ ಸಮುದಾಯದಲ್ಲಿ ಸ್ತ್ರೀಗೆ ಹೆಚ್ಚಿನ ಪ್ರಾಧಾನ್ಯತೆ ಇರುವುದು ತಿಳಿದುಬರುತ್ತದೆ. ಸ್ತ್ರೀಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವ ಕಾರಣದಿಂದಾಗಿ ಕನ್ಯಾಶುಲ್ಕ ಪದ್ಧತಿ ಪ್ರಾಮುಖ್ಯತೆ ಪಡೆದುಕೊಂಡಿರಬಹುದು. ಇಂದು ವಧುದಕ್ಷಣೆಯ ಬದಲಿಗೆ ವರದಕ್ಷಣೆ ಜಾರಿಯಲ್ಲಿದೆ. ಕನ್ಯಾಶುಲ್ಕವನ್ನು ನೀಡಿ ಮಾತುಕತೆ ಆಡಿದ ನಂತರ ವಿವಾಹದ ದಿನವನ್ನು ಖಚಿತಪಡಿಸಿಕೊಳ್ಳುವರು. ಹೀಗೆ ಬೇರೆಬೇರೆ ರೂಪಗಳಲ್ಲಿ ಕೊಟ್ಟು ವಿವಾಹವಾಗುವ ಪದ್ಧತಿಯಿತ್ತು ಇದು ಕಾಲಾಂತರದಲ್ಲಿ ವಧುದಕ್ಷಿಣೆ ವರದಕ್ಷಿಣೆಯಾಗಿ ಪರಿಣಮಿಸಿದೆ. ಆ ನಂತರದಲ್ಲಿ ವಿವಾಹಕ್ಕೆ ಒಂದು ದಿನಾಂಕವನ್ನು ಜಂಗಮರ ಸಮ್ಮುಖದಲ್ಲಿ ನಿಗಧಿಮಾಡುತ್ತಾರೆ. ಇದಕ್ಕೂ ಪೂರ್ವದಲ್ಲಿ ಎರಡೂ ಮನೆಯ ಕಡೆಯವರು ವಿವಾಹಕ್ಕೆ ಒಪ್ಪಿಗೆ ಸೂಚಿಸಿದ್ದೇವೆ ಎಂದು ಸಮುದಾಯ ಅಥವಾ ದೈವದ ಕಡತಕ್ಕೆ ಸಹಿ ಮಾಡುತ್ತಾರೆ.

**ಐ. ವರದಕ್ಷಿಣೆ**

ಪ್ರಸ್ತುತ ದಿನದಲ್ಲಿ ವಧುವಿನ ಕಡೆಯವರು ವರನಿಗೆ ಮದುವೆಯ ಸಂದರ್ಭದಲ್ಲಿ ಹಣ, ಒಡವೆ, ಆಸ್ತಿ ಮತ್ತು ವಿವಿಧ ವಸ್ತುಗಳನ್ನು ನೀಡುವ ಸಂಪ್ರದಾಯ ನಡೆದುಬಂದಿದೆ. ಆದರೆ ಪ್ರಸ್ತುತ ದಿನಗಳಲ್ಲಿ ಇದೊಂದು ಸಾಮಾಜಿಕ ಪಿಡುಗಾಗಿ ಪರಿಣಮಿಸಿದೆ.

**ಒ. ವಿವಾಹದ ವಿಧಿವಿಧಾನಗಳು**

ಲಾಳಗೊಂಡ ಸಮುದಾಯದಲ್ಲಿ ವಿವಾಹಗಳು ಇತರೆ ಸಮುದಾಯಗಳಿಗಿಂತಲೂ ಭಿನ್ನವಾಗಿಲ್ಲ ಮೊಟ್ಟಮೊದಲು ಜಂಗಮರಿಂದ ವಿವಾಹಪತ್ರಿಕೆಯನ್ನು ಬರೆಸುತ್ತಾರೆ. ಆ ನಂತರ ಜಂಗಮರ ಸಮ್ಮುಖದಲ್ಲಿ ನಿರ್ಣಯಿಸಿಕೊಂಡ ಪತ್ರಿಕೆಯನ್ನು ಮುದ್ರಿಸುತ್ತಾರೆ. ನಂತರ ವಿವಾಹದ ಸಮಾರಂಭಕ್ಕೆ ಬೇಕಾಗುವ ಸಾಮಗ್ರಿಗಳನ್ನು ಖರೀದಿ ಮಾಡುವಾಗ ವೀಳ್ಯದೆಲೆ, ಅರಿಶಿನಕುಂಕುಮವನ್ನು ಪರಸ್ಪರ ತೆಗೆದುಕೊಳ್ಳುತ್ತಾರೆ. ನಂತರ ವಿವಿಧ ಕಾರ್ಯಗಳನ್ನು ಹಂತಹಂತವಾಗಿ ಮಾಡುತ್ತಾರೆ. ಈ ಎಲ್ಲಾ ಕಾರ್ಯಗಳನ್ನು ಗುರುಜಂಗಮರ ಸಮ್ಮುಖದಲ್ಲಿಯೇ ಹಂತಹಂತವಾಗಿ ಮಾಡುತ್ತಾರೆ.

**೦. ಲಗ್ನಕಟ್ಟಿಸುವುದು**

ಲಗ್ನಕಟ್ಟಿಸುವ ದಿನ ಬಂಧುಬಾಂದವರು, ಹಿತೈಷಿಗಳು ಹಾಗೂ ಗುರುಹಿರಿಯರ ಸಮ್ಮುಖದಲ್ಲಿ ವಿವಾಹ ನಿಶ್ಚಯಮಾಡಲು ಜಂಗಮರನ್ನು ಕರೆದು ಪೂಜಾಸಾಮಗ್ರಿಗಳು, ಆರತಿ, ಕೊಬ್ಬರಿಬೆಲ್ಲ, ಅರಿಶಿನಕುಂಕುಮ ಮುಂತಾದ ವಸ್ತುಗಳಿಂದ ಪೂಜೆಮಾಡಿ ಬಿಳಿಯ ಬಟ್ಟೆಯಲ್ಲಿ ತೆಂಗಿನಕಾಯಿ ಕಟ್ಟಿಸಿ ಜೋಪಾನವಾಗಿಡುವಂತೆ ಸೂಚಿಸುತ್ತಾರೆ. ಇದನ್ನು ಮೂಹೂರ್ತದ ಕಾಯಿಯೆಂದು ಕರೆಯುತ್ತಾರೆ. ಈ ಕಾಯಿಯನ್ನು ವರನಿಗೆ ಮಧುಮಗಶಾಸ್ತ್ರ ಮಾಡುವಾಗ ಗಂಡಿನ ಬಲಕೈಯಲ್ಲಿ ಹಿಡಿದುಕೊಳ್ಳಲು ಕೊಡುತ್ತಾರೆ. ವಿವಾಹದ ಎಲ್ಲಾ ಕಾರ್ಯಗಳು ಮುಗಿಯುವವರೆಗೂ ಇದು ಒಡೆದುಹೋಗದಂತೆ ನೋಡಿಕೊಳ್ಳುತ್ತಾರೆ. ಒಂದು ವೇಳೆ ಮೂಹೂರ್ತದ ಕಾಯಿ ಒಡೆದುಹೋದರೆ ಮುಂದೆ ಏನೋ ಕೆಟ್ಟ ಘಟನೆಗಳು ಸಂಭವಿಸುತ್ತವೆ ಎಂಬ ನಂಬಿಕೆಯಿದೆ.

**ಔ. ಗಂಗಾ ಪೂಜೆ**

ವಿವಾಹದ ಹಿಂದಿನ ದಿನ ದೇವತಾಕಾರ್ಯದೊಂದಿಗೆ ವಿಧಿವಿಧಾನಗಳು ಪ್ರಥಮವಾಗಿ ಪ್ರಾರಂಭವಾಗುತ್ತವೆ. ದೇವತಾ ಕಾರ್ಯದಲ್ಲಿ ಮೂಲ ವಿಧಿಯಾಗಿ ಗಂಗಾಪೂಜೆ ನೆರವೇರಿಸುತ್ತಾರೆ. ಈ ವಿಧಿಯಲ್ಲಿ ಗಂಗೆಯನ್ನು ತರಲು ಮುತ್ತೈದೆಯರು ಬಾವಿಹತ್ತಿರ ಹೋಗಿ ಪೂಜೆ ನೆರವೇರಿಸಿ ಬಾವಿಯಿಂದ ಗಂಗೆಯನ್ನು(ನೀರು) ಮಂಗಳ ವಾಧ್ಯಗಳೊಂದಿಗೆ ಮೆರವಣಿಗೆಯಲ್ಲಿ ತರುತ್ತಾರೆ. ತಂದ ಗಂಗೆಯ ನೀರನ್ನು ಮತ್ತೊಂದು ಬಾರಿ ಮನೆಯಲ್ಲಿ ಪೂಜಿಸಿ ಕಳಸವನ್ನು ಪ್ರತಿಷ್ಠಾಪಿಸುತ್ತಾರೆ.

ಕಳಸ ಪ್ರತಿಷ್ಠಾಪನೆಯನ್ನು ಮನೆಯ ದೇವರ ಜಗುಲಿಯ ಮೇಲೆ ಜೋಪಾನವಾಗಿ ಇಡುತ್ತಾರೆ. ಅಂದು ದೇವತಾರಾದನೆ/ದೇವರೂಟ ಎಂಬ ಆಚರಣೆ ನೆರವೇರುತ್ತದೆ. ಅಂದರೆ ಊರಿನ ಎಲ್ಲಾ ಜನರಿಗೆ ಸಿಹಿ ಭೋಜನ ಉಣಬಡಿಸುತ್ತಾರೆ.

**ಕ. ವೀಳ್ಯಕೊಡುವುದು**

ವೀಳ್ಯನೀಡುವುದು ಒಂದು ಸಂಪ್ರದಾಯ ವೀಳ್ಯೆ ಮತ್ತು ದಕ್ಷಿಣೆಯನ್ನು ಪ್ರಥಮವಾಗಿ ಜಂಗಮರಿಗೆ ನೀಡಿ ಆಶೀರ್ವಾದ ಪಡೆಯಲಾಗುತ್ತದೆ. ನಂತರ ಮಡಿವಾಳ, ಬಡಿಗ, ಕುಂಬಾರ, ಶೀಲವಂತ(ಕ್ಷೌರಿಕ), ಇವರಿಗೆ ನಂತರ ವೀಳ್ಯೆಕೊಟ್ಟು ವಿವಾಹಕ್ಕೆ ಆಹ್ವಾನಿಸಲಾಗುತ್ತದೆ.

**ಖ. ಚಪ್ಪರ ಹಾಕುವುದು**

ಚಪ್ಪರ ಹಾಕುವ ಕಾರ್ಯವನ್ನು ಈಶಾನ್ಯ ಮೂಲೆಯಲ್ಲಿ ಪ್ರಥಮವಾಗಿ ಕಂಬನೆಟ್ಟು ಹಾಲುತುಪ್ಪ ಹಾಕಿ ಪೂಜೆಯನ್ನು ಮಾಡುವುದರ ಮೂಲಕ ಆರಂಭಿಸುತ್ತಾರೆ. ಎತ್ತುಗಳ ಹೆಗಲ ಮೇಲೆರಿಸುವ ನಾಲ್ಕು ನೊಗಗಳನ್ನು ಕಂಬದಂತೆ ಹೂಳಿ ಹಂದರ ನಿರ್ಮಾಣಮಾಡುತ್ತಾರೆ. ಪ್ರತಿ ಕಂಬಕ್ಕೆ ಪ್ರಣತಿಯನ್ನು ಇರಿಸಿ ಜ್ಯೋತಿ ಬೆಳಗಿಸಿಡುತ್ತಾರೆ. ಕೆಲವು ಪ್ರದೇಶಗಳಲ್ಲಿ ಈ ಹಂದರಕ್ಕೆ ಸಮೀಪವೆ ಹಾಲುಗಂಬ

ನೆಡುತ್ತಾರೆ. ಈ ಹಂದರಕ್ಕೆ ಸುಮಂಗಲಿಯರಿಂದ ಪೂಜೆ ನೆರವೇರುತ್ತದೆ. ಹಂದರಪೂಜೆ ತರುವಾಯ ಚಟ್ಟು(ಹೋಕಳಿ) ಹೊಡೆಯುವ ಕಾರ್ಯ ನೆರವೇರುತ್ತದೆ. ಈ ಕಾರ್ಯವು ವರನ ಸೋದರತ್ತೆ ಹಾಗೂ ಸೋದರಮಾವ ಇಲ್ಲವೇ ಸಹೋದರಿ ಮತ್ತು ಆಕೆಯ ಗಂಡನಿಂದ ನೆರವೇರುತ್ತದೆ. ಕೆಲವರಿಗೆ ಈ ಸಂಬಂಧಿಗಳು ಇರದಿದ್ದರೆ. ಆ ಕಾರ್ಯವನ್ನು ಗುರು ಜಂಗಮಯ್ಯ ಹಾಗೂ ಆತನ ಮಡದಿ ನೆರವೇರಿಸುತ್ತಾರೆ. ಈ ಚಟ್ಟು ಹೊಡೆಯುವ ಕಾರ್ಯ ಮಾಡಿರುವವರಿಗೆ ಆ ಹಂದರದಲ್ಲಿ ನೀರೆರೆದು ಹೊಸವಸ್ತ್ರ ನೀಡುತ್ತಾರೆ ಹಾಗೂ ಇತರ ಉಡುಗೊರೆ ನೀಡುತ್ತಾರೆ. ಆ ಚಪ್ಪರಕ್ಕೆ ಮಾವಿನ ತೋರಣ, ಹೂ ಮತ್ತು ಬಾಳೆದಿಂಡಿನಿಂದ ಅಲಂಕರಿಸುತ್ತಾರೆ.

**ಗ. ಕಂಬ ತರುವುದು**

ಚಪ್ಪರಕಂಬ ತರುವುದು ಒಂದು ವಿಶಿಷ್ಟ ಆಚರಣೆ. ಇಲ್ಲಿ ಹತ್ತಿ ಮತ್ತು ಕಳ್ಳಿಕಂಬ(ಹತ್ತಿಗಂಬ, ಹಾಲುಗಂಬ)ಗಳನ್ನು ಕಡಿದುತಂದು ಊರಬಾವಿ ಗಂಗಮ್ಮನ ಬಳಿ ಇಟ್ಟು ಅದನ್ನು ಪೂಜೆ ಮಾಡಲಾಗುತ್ತದೆ. ಇದನ್ನು ಮುತ್ತೈದೆಯರು ಕಳಸ ತೆಗೆದುಕೊಂಡು ಗಂಡುಮಕ್ಕಳ ಜೊತೆಗೆ ಬಂದು ಮೂಹೂರ್ತದ ಚಪ್ಪರದ ಕಂಬಕ್ಕೆ ಕಟ್ಟುತ್ತಾರೆ. ಕಳ್ಳಿ ಮತ್ತು ಹತ್ತಿಯನ್ನು ಬಳಸುವ ವಿಶೇಷತೆಯೆಂದರೆ ಇವೆರಡೂ ಕೂಡ ಹಾಲು ಇರುವಂತಹ ಗಿಡಮರಗಳಾಗಿದ್ದರಿಂದ ಇವುಗಳ ವಂಶಾವಳಿಯು ಗಿಡದ ಅರೆ ಅಥವಾ ಕೊಂಬೆಗಳು ನೆಲಕ್ಕೆಬಿದ್ದರೂ ಚಿಗುರಿ ಬೆಳೆಯುತ್ತವೆ. ಆದಕಾರಣ ಸಂತಾನೋತ್ಪತ್ತಿ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವಂಶಬೆಳೆಯುತ್ತದೆ ಎಂಬ ನಂಬಿಕೆ ಜನರಲ್ಲಿದೆ(ಶಶಿಕಲಾ ಹರಪನಹಳ್ಳಿ).

**ಘ. ಅರಿಶಿನ, ಕುಂಕುಮ, ಲಗ್ನಪತ್ರಿಕೆ ಕೊಡುವುದು**

ಸಾಮಾನ್ಯವಾಗಿ ಮುತ್ತೈದೆಯರು ಸೇರಿ ಮಂಗಳವಾದ್ಯಗಳೊಂದಿಗೆ ಅರಿಶಿನಕುಂಕುಮ, ಎಲೆ-ಅಡಿಕೆ, ಅಕ್ಷತೆ ತೆಗೆದುಕೊಂಡು ಲಗ್ನಪತ್ರಿಕೆಯೊಂದಿಗೆ ಮೊದಲು ದೇವಸ್ಥಾನಗಳಿಗೆ ಕೊಟ್ಟು ನಂತರ ಜಂಗಮರ ಮನೆಗೆ ಕೊಟ್ಟ ಮೇಲೆ ಊರಿನ ಎಲ್ಲಾ ಮನೆಗಳಿಗೆ ಹೋಗಿ ವಿವಾಹ ಸಮಾರಂಭಕ್ಕೆ ಆದರದಿಂದ ಸ್ವಾಗತಿಸುತ್ತಾರೆ. ಹೀಗೆ ಊರಿನ ಪ್ರತಿಯೊಂದು ಮನೆಗಳಿಗೆ ತೆರಳಿ ಮದುವೆಗೆ ಸ್ವಾಗತಿಸುವುದು ಅಪರೂಪದ ಸಂಗತಿಯಾಗಿದೆ.

**ಙ. ಹರಣಿ ಬಾಸಿಂಗ ತರುವುದು**

ಕಳಸ, ಕನ್ನಡಿ ಹಿಡಿದುಕೊಂಡು ಸುಮಂಗಲಿಯರೊಂದಿಗೆ ಹರಿಣಿಬಾಸಿಂಗ ತರಲು ಅಚ್ಚಂದ ಎಲ್ಲಾ ತರಹದ ಬೇಳೆ, ಬೆಲ್ಲ, ಅಕ್ಕಿ, ಎಲೆ-ಅಡಿಕೆ ದಕ್ಷಿಣೆಯೊಂದಿಗೆ ಇಟ್ಟುಕೊಂಡು ಕುಂಬಾರನ ಮನೆಗೆ ಹೋಗಿ ಕುಂಬಾರನ ಮನೆಯಲ್ಲಿ ಕೆಳಗಡೆ ಅಕ್ಕಿ ಅಥವಾ ಜೋಳವನ್ನು ಹಾಕಿ ಐದು ಕುಂಬ ಎರಡು ಕಾಯಿ ಸೊರೆ(ಗಡಿಗೆ/ಮಡಿಕೆ), ಕೇಲ(ಹರಣಿ/ಬಿಂದಿಗೆ), ವಾಗಿ(ಸಣ್ಣಮಡಿಕೆ), ಹರಣಿಬಾಸಿಂಗಗಳಿಗೆ ಕುಂಬಾರರಿಂದಲೇ ಪೂಜೆ ಮಾಡಿಸಿ ತರಲಾಗುತ್ತದೆ.

**ಚ. ಹರಣೆ(ಐರಾಣಿ) ಹೊಡುವುದು**

ಕುಂಬಾರರ ಮನೆಯಿಂದ ತಂದ ಕುಂಭ ಹರಣಿಬಾಸಿಂಗವನ್ನು ಪೂಜಿಸಿ ದೇವರ ಮನೆಯಲ್ಲಿ ಇಡಲಾಗುತ್ತದೆ. ಅದಕ್ಕೆ ನೂಲುದಾರವನ್ನು ಸುತ್ತಿ ಇಡಲಾಗುತ್ತದೆ. ಪ್ರತಿಯೊಂದು ವಿಧಿಯು ಮುಗಿದ ನಂತರ ವಧುವರರು ಹರಣಿಗೆ ನಮಸ್ಕರಿಸಬೇಕು ಆಗ ಅವರು ಬಾಸಿಂಗವನ್ನು ಧರಿಸಲು ಅರ್ಹರಾಗುತ್ತಾರೆ ಮತ್ತು ಕುಂಭಗಳನ್ನು ಬೀಸುವಕಲ್ಲು, ಒಳಕಲ್ಲಿನ ಹತ್ತಿರ ಹಾಗೂ ಹೊಲೆಯ ಹತ್ತಿರ ಇಡಲಾಗುವುದು, ಇದೊಂದು ವಿಶಿಷ್ಟ ಪದ್ಧತಿಯಾಗಿದೆ.

**ಛ. ಮಧುಮಗಳು ಮಾಡುವುದು**

ವಿವಾಹಕ್ಕೂ ಎರಡುದಿನ ಮೊದಲು ಹೆಣ್ಣಿನ ಮನೆಯಲ್ಲಿ ವಧುವನ್ನು ಮಧುಮಗಳನ್ನಾಗಿ ಮಾಡಲಾಗುತ್ತದೆ. ಮಧುಮಗಳು ಮಾಡುವಾಗ ಊರಿನ ಮುತ್ತೈದೆಯರನ್ನು ಕರೆದು, ಬಳೆಗಾರರನ್ನು ಕರೆಯಲಾಗುತ್ತದೆ. ವಿಧಿಯು ಪ್ರಮುಖವಾಗಿ ನೆರೆಹೊರೆಯವರು, ಸೇರಿಕೊಂಡು ಮಾಡುವಂತಹ ಕಾರ್ಯವಾಗಿದೆ. ತದನಂತರದಲ್ಲಿ ಹಾಲುತುಪ್ಪ ಎಣ್ಣೆನೀರು ಹಾಕುವುದರ ಮೂಲಕ ಎಣ್ಣೆಸ್ನಾನ ಮಾಡಿಸಲಾಗುತ್ತದೆ. ಆ ನಂತರ ಬಳೆತೊಡಿಸಿ ಆರತಿಮಾಡಿ ಮಧುಮಗಳನ್ನಾಗಿ ಮಾಡಲಾಗುತ್ತದೆ. ಬಳೆ ಇಡಿಸಿದ ನಂತರ ಗಂಡಿನ ಮನೆಗೆ ಮಧುಮಗಳಾಗಿ ಹೋಗುವಾಗ ಸಂಜೆ ಶ್ಯಾವಿಗೆಪಾಯಸ ಅಥವಾ ಹಾಲುಕುಡಿಸಿ ಕಳುಹಿಸುವರು.

**ಜ. ಮಧುಮಗ ಮಾಡುವುದು**

ಹೆಣ್ಣಿಗೆ ಮಾಡಿದ ವಿಧಿವಿಧಾನಗಳಂತೆ ವರನಿಗೂ ಸಹ ವರನ ಮನೆಯಲ್ಲಿಯೇ ನೆರವೇರಿಸುತ್ತಾರೆ. ಮಧುಮಗ ಮಾಡುವ ಮೊದಲು ಕ್ಷೌರವನ್ನು ಮಾಡಿಸಲು ಶೀಲವಂತನಿಗೆ(ಕ್ಷೌರಿಕ) ಆಹ್ವಾನಿಸಲಾಗುತ್ತದೆ. ಅವರಿಗೆ ಹೊಸಬಟ್ಟೆ ಹಾಗೂ ಕಾಣಿಕೆಯನ್ನು ಕೊಟ್ಟು ವರನಿಗೆ ಕ್ಷೌರವನ್ನು ಮಾಡಿಸುತ್ತಾರೆ. ತದನಂತರ ವರನಿಗೆ ಅರಿಶಿನ ಮತ್ತು ಎಣ್ಣೆಯನ್ನು ಹಚ್ಚಿ ಎಣ್ಣೆಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ಧರಿಸುವ ಮೂಲಕ ಮಧುಮಗನನ್ನಾಗಿ ಮಾಡಲಾಗುತ್ತದೆ. ನಂತರ ಆರತಿಮಾಡಿ ಅಕ್ಷತೆಯನ್ನು ಹಾಕಲಾಗುತ್ತದೆ. ಹೀಗೆ ಮಧುಮಗನನ್ನು ಮಾಡಿಕೊಂಡು ಗ್ರಾಮದ ದೇವಸ್ಥಾನಗಳಿಗೆ ಕಳಸ ಹಾಗೂ ಮಂಗಳ ವಾದ್ಯಗಳೊಂದಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬರಲಾಗುತ್ತದೆ.

ಇದೊಂದು ಪ್ರಾಚೀನ ಪರಂಪರಾಗತ ಪದ್ಧತಿ ಲಾಳಗೊಂಡರಲ್ಲಿ ಮದುವೆಗಳು ಸಾಮಾನ್ಯವಾಗಿ ವರನ ಮನೆಯಲ್ಲಿಯೇ ನಡೆಯುವುದು ವಾಡಿಕೆ. ವಧುವಿನ ಕಡೆಯವರು ವರನ ಗ್ರಾಮಕ್ಕೆ ಬಂದ ತಕ್ಷಣ ವಧುವಿನ ಕಡೆಯವರಿಗೆ ವರನ ಸಂಬಂಧಿಕರೆಲ್ಲರೂ ಸೇರಿ ಕುಡಿಯಲು ತಂಪು ಪಾನೀಯ ಮತ್ತು ಸಕ್ಕರೆ ಕೊಡುವುದರ ಮೂಲಕ ವಧುವಿನ ಕಡೆಯ ನೆಂಟರಿಷ್ಟರಿಗೆ ಆತಿಥ್ಯ ಮಾಡುತ್ತಾರೆ. ವರನ ಮನೆಯ ಕಡೆಯವರು ಕೂಡ ವಧುವಿನ ಕಡೆಯವರಿಗೆ ಪುರವನ್ನು ಪ್ರವೇಶ ಮಾಡಿದ

ತಕ್ಷಣ ಮೊದಲು ಅವರನ್ನು ಪುರದಲ್ಲಿರುವ ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಪೂಜೆ ಮಾಡಿಸಿ ವಧುವರನನ್ನು ಕೂಡಿಸಿ ಆರತಿ ಮಾಡುವರು. ಹೀಗೆ ಸಂಪ್ರದಾಯ ಬದ್ಧವಾಗಿ ವಧುವಿನ ಕಡೆಯವರನ್ನು ವರನ ಮನೆಗೆ ಕರೆತಂದ ಬಳಿಕ ಅವರುಗಳೆಲ್ಲರಿಗೂ ಊಟೋಪಚಾರ ಮಾಡಿಸಲಾಗುತ್ತದೆ. ಎಲ್ಲರಿಗೂ ಶಾಸ್ತ್ರಬದ್ಧವಾಗಿ ಭೋಜನ ಮಾಡಿಸಿದ ತರುವಾಯ ನಂತರ ಉಳಿದ ಶಾಸ್ತ್ರಗಳನ್ನು ಮಾಡಲಾಗುತ್ತದೆ.

**ಝ. ವಧುವಿಗೆ ಬಳೆತೊಡಿಸುವ ಕಾರ್ಯ(ಗಂಡಿನ ಮನೆಯಲ್ಲಿ)**

ಈ ಬಳೆತೊಡಿಸುವುದು ವಧು ಅಥವಾ ಹೆಣ್ಣಿನ ಜೀನನದಲ್ಲಿ ಬಹು ಮುಖ್ಯವಾದ ಗಳಿಗೆ ಎಂದೇ ಪರಿಬಾವಿಸಲಾಗುತ್ತದೆ. ಅದು ಕನ್ಯೆಯಾದವಳನ್ನು ಗೃಹಿಣಿಯನ್ನಾಗಿಸುವ ಮೊದಲ ಪ್ರಯತ್ನವಾಗಿರುತ್ತದೆ. ಇಲ್ಲಿ ವಧುವಿಗೆ ವಿಷೇಶವಾಗಿ ಹಸಿರುಬಳೆಗಳನ್ನು ತೊಡಿಸಲಾಗುತ್ತದೆ. ಬಳೆಗಾರ ಪೂಜೆ ಪುನಸ್ಕಾರ ಮಾಡಿದ ತರುವಾಯ ಎಲೆಅಡಿಕೆ ದಕ್ಷಿಣೆಯನ್ನು ಸ್ವೀಕರಿಸಿ ಬಳೆಗಳನ್ನು ತೊಡಿಸುತ್ತಾರೆ. ವಧುವಿನ ಜೊತೆಗೆ ಕೆಲವೊಂದು ಐದು, ಒಂಬತ್ತು ಇಲ್ಲವೆ ಹನ್ನೊಂದು ಜನ ಮುತ್ತೈದೆಯರಿಗೆ ಬಳೆಯನ್ನು ತೊಡಿಸಲಾಗುತ್ತದೆ. ಈ ಬಳೆಶಾಸ್ತ್ರದಲ್ಲಿ ತೊಡಗಿದ ಮುತ್ತೈದೆಯರು ಮತ್ತು ವಧುವು ನಂದಿ ಪೂಜೆಯನ್ನು ಮಾಡಿಕೊಂಡು ಬರಲಾಗುತ್ತದೆ. ಈ ಒಂದು ಶಾಸ್ತ್ರ ಮುಗಿದ ನಂತರ ವಧುವಿಗೆ ಪ್ರಥಮವಾಗಿ ಹೆಣ್ಣು ಮಾಡುವ ಶಾಸ್ತ್ರ ಪ್ರಾರಂಭವಾಗುತ್ತದೆ.

**ಞ. ವಧುವಿನ ಹಸಿಮಣೆ ಶಾಸ್ತ್ರ**

ವಧುವಿನ ಹಸೆಮಣೆಶಾಸ್ತ್ರವನ್ನು ಕ್ರಮಬದ್ಧವಾಗಿ ನೆರವೇರಿಸಲಾಗುತ್ತದೆ. ವಿಶೇಷವಾಗಿ ಈ ಶಾಸ್ತ್ರಮಾಡುವಾಗ ಒಂದು ಹೊಸಮಣೆಯನ್ನು ಹಾಕಿ ಅದರ ಮೇಲೆ ಅಕ್ಷತೆ ಹಾಕಿ ವಧುವಿನ ಸೋದರ ಮಾವನ ಮನೆಯಿಂದ ಕೊಡಲ್ಪಟ್ಟ ಹೊಸ ಸೀರೆರವಿಕೆ ತೊಟ್ಟು ಜೊತೆಗೆ ಹೂವು ಮುಡಿಸಿ ಹಸೆಮಣೆಯ ಮೇಲೆ ಕೂಡಿಸಲಾಗುತ್ತದೆ. ಜಂಗಮನ ಹೆಂಡತಿಯಿಂದ ಪ್ರಥಮವಾಗಿ ಕಂಕಣವನ್ನು ವಧುವಿನ ಕೈಗೆ ಕಟ್ಟಿ ಕಾರ್ಯ ಪ್ರಾರಂಭಿಸಲಾಗುತ್ತದೆ. ಗುರುಗಳು ಮೊದಲು ಅರಿಶಿನ ಎಣ್ಣೆ ಹಚ್ಚಿದ ನಂತರ ಇತರೆ ಮುತ್ತೈದೆಯರಿಗೆ ಕಂಕಣವನ್ನು ಕಟ್ಟಲಾಗುತ್ತದೆ. ಹಾಗೂ ಅವರಿಂದ ವಧುವಿಗೆ ಅಕ್ಷತೆ ಜೊತೆಗೆ ಆರತಿಮಾಡಿ ಐದು ಅಥವಾ ಒಂಭತ್ತು ಜನ ಮುತ್ತೈದೆಯರು ಮಾಡುತ್ತಾರೆ.

**ಟ. ಗಂಡಿನ ಹಸೆಮಣೆಶಾಸ್ತ್ರ**

ವರನಿಗೂ ಕೂಡ ಸಂಪ್ರದಾಯಬದ್ಧವಾಗಿ ಕೆಲವು ಪದ್ಧತಿಗಳನ್ನು ನೆರವೇರಿಸಲಾಗುತ್ತದೆ. ವರನಿಗೆ ಅರಿಶಿನ ಎಣ್ಣೆ ಹಚ್ಚಿ ಕಂಕಣಕಟ್ಟಿ ಸ್ನಾನ ಮಾಡಿಸಲಾಗುತ್ತದೆ. ವರನಿಗೂ ಕೂಡ ನಂದಿ ಪೂಜೆಯನ್ನು ಮಾಡಿಸಲಾಗುತ್ತದೆ. ವಧುವಿಗೆ ಮಾಡಿದ ಹಸೆಮಣೆ ಶಾಸ್ತ್ರವನ್ನು ವರನಿಗೂ ಮಾಡಲಾಗುತ್ತದೆ.

**ತ. ಒನಕೆಶಾಸ್ತ್ರ**

ಒನಕೆಶಾಸ್ತ್ರವು ಮೂಲತಃ ರೈತಾಪಿಜನರ ನಂಬಿಕೆಯಾದ ಇದು ಮದುವೆಯ ಸಂಪ್ರದಾಯದಲ್ಲಿ ಪ್ರಮುಖವಾಗಿ ಸೇರಿಕೊಂಡಿದೆ. ಈ ಆಚರಣೆಯಿಂದ ಲಾಳಗೊಂಡ ಸಮುದಾಯವನ್ನು ಕೃಷಿ ಮೂಲದವರೆಂದು ಅರಿಯಲು ಸಾಧ್ಯವಾಗುತ್ತದೆ. ಹಿಂದಿನಿಂದ ಆಚರಣಾತ್ಮಕವಾಗಿ ಬಂದ ಈ ನಂಬಿಕೆಯ ಪ್ರಕಾರ ಜೋಳ, ಭತ್ತವನ್ನು ಒಳಕಲ್ಲಿಗೆ ಹಾಕಿ ಮುತ್ತೈದೆಯರಿಂದ ಒನಕೆಯಿಂದ ಕುಟ್ಟಿ ಪುಡಿಮಾಡಿಸಿ ಅದೇ ದವಸವನ್ನು ಮೂಹೂರ್ತಕ್ಕೆ ರಾಶಿಪೂಜೆ ಮಾಡಲು ಬಳಸುತ್ತಾರೆ. ಇದರ ಉದ್ದೇಶವು ವರನೂ ಹೀಗೆ ಗ್ರಾಮೀಣ ರೈತ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಬಲ್ಲ ಮತ್ತು ಸಾಂಸಾರಿಕ ಜೀವನದಲ್ಲಿ ಬಾಳಬಲ್ಲ ಎಂಬುದನ್ನು ಅರಿಯುವ ಪ್ರಯತ್ನವನ್ನು ಮಾಡುವ ಉದ್ದೇಶವಿರುತ್ತದೆ.

**ಡ. ಹಚ್ಚ ಮಣೆಯನ್ನು ತರುವುದು(ಶ್ಯಾವಿಗೆ ಮಣೆ)**

ಮುಖ್ಯವಾಗಿ ಹಚ್ಚುಮಣೆ ಶಾಸ್ತ್ರವನ್ನು ಮಾಡಲು ಕಟ್ಟಿಗೆಮಣೆ(ಶ್ಯಾವಿಗೆಮಣೆ)ಬೇಕಾಗುತ್ತದೆ. ಈ ಮಣೆಗಳನ್ನು ಐದುಜನ ಮುತ್ತೈದೆಯರು ಹಂದರದ ಕೆಳಗೆ ಹಾಕಿ ಶ್ಯಾವಿಗೆಯನ್ನು ಮಾಡಲಾಗುತ್ತದೆ. ಇದನ್ನು ಮಾಡುವಾಗ ಸೋಬಾನೆ ಪದಗಳನ್ನು ಹಾಡಲಾಗುತ್ತದೆ. ಇದನ್ನು ಮಾಡುವ ಮುಖ್ಯ ಉದ್ದೇಶ ಹೆಣ್ಣು ಗೃಹಸ್ತಾಶ್ರಮಕ್ಕೆ ಕಾಲಿಡುವುದು.

**ಢ. ಈಶ್ವರ ಬಸವಣ್ಣನ ಪೂಜೆ**

ಲಾಳಗೊಂಡ ಸಮುದಾಯದಲ್ಲಿ ಇದೊಂದು ವಿಷೇಶವಾದ ಸಂಪ್ರದಾಯ. ಎಲ್ಲಾ ಮುತ್ತೈದೆಯರು ಸೇರಿ ಐದುಹೊಸ ಮೊರದಲ್ಲಿ ಬೇರೆಬೇರೆ ಬಣ್ಣದ ಸಂಡಿಗೆಯನ್ನು ಮಾಡಲಾಗುತ್ತದೆ. ಮಧ್ಯದಲ್ಲಿ ಈಶ್ವರ ಮತ್ತು ಬಸವಣ್ಣನ ಮೂರ್ತಿ ಇಡಲಾಗುತ್ತದೆ. ಆ ಮೂರ್ತಿಗಳಿಗೆ ಹವಳ ಮತ್ತು ಮುತ್ತಿನ ಸರವನ್ನು ಹಾಕುವರು ನಂತರ ಸುಮಂಗಲಿಯರೆಲ್ಲರೂ ಸೇರಿ ಅವುಗಳಿಗೆ ಪೂಜೆ ಮಾಡುತ್ತಾರೆ.

**ಣ. ವರನ ಒಂಟಿ ಸುರಗಿ ಹಿಡಿಯುವುದು**

ಸುರಗಿ ಹಿಡಿಯುವುದು ನಾಲ್ಕುಜನ ನಾಲ್ಕುಮೂಲೆಯಲ್ಲಿ ನಿಂತುಕೊಂಡು ನಾಲ್ಕುಎಳೆಯ ಸೂರಗಿ ನೂಲನ್ನು ಹಿಡಿದುಕೊಳ್ಳುತ್ತಾರೆ. ಸೂರಗಿ ನೀರನ್ನು ಹಾಕುವ ಮೊದಲು ಅರಿಶಿನ ಹಚ್ಚುವರು. ವರನಿಗೆ ಕುಂಬದ ನೀರನ್ನು ಬಿಡುತ್ತಾರೆ. ವರನನ್ನು ಮೂಹೂರ್ತಕ್ಕೂ ಮೊದಲು ಒಂಟಿಯಾಗಿ ಬಂದಿಸಲ್ಪಡುವುದು ತದನಂತರ ವರನನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಬಿಡಿದಿಕೊಡುತ್ತಾರೆ(ಬಿಡುವು ನೀಡುವುದು).

**ತ. ವೀಳ್ಯೆ ತಿದ್ದುವುದು**

ವೀಳ್ಯೆ ತಿದ್ದುವುದು ಅಂದರೆ ಗಂಡಿನ ಕಡೆಯವರು ತಂದಿರುವ ಒಡವೆವಸ್ತ್ರ ಇವುಗಳನ್ನು ವಧುವಿನ ಕಡೆಯಿಂದ ಹಿರಿಯರಿಗೆ ಒಪ್ಪಿಸಿ ಎಲ್ಲಾ ಸರಿಯಾಗಿದೆ ಎಂದು ಸೂಚಿಸಿದಾಗ ವೀಳ್ಯೆ

ಹಂಚುವುದು ಮತ್ತು ದೈವದ ಮುಖ್ಯಸ್ಥರಿಂದ ಚಪ್ಪರದ ಹಣವನ್ನು ಕಟ್ಟಿಸಿಕೊಂಡು ಒಡವೆ ವಸ್ತುಗಳನ್ನು ಗುರುಹಿರಿಯರ ಮೂಲಕ ಒಪ್ಪಿಸುತ್ತಾರೆ.

**ಥ. ವಧುವಿನ ಒಂಟಿ ಸುರಗಿ ಹಿಡಿಯುವುದು**

ಮೂಹೂರ್ತಕ್ಕೂ ಮೊದಲು ವಧುವನ್ನು ಕರೆದುಕೊಂಡುಬಂದು, ಚಪ್ಪರದ ಕೆಳಗೆ ನಾಲ್ಕುಜನ ನಾಲ್ಕುಮೂಲೆಯಲ್ಲಿ ನಾಲ್ಕುಸುತ್ತು ಸುರಗಿ ನೀರನ್ನು ಹಿಡಿದುಕೊಂಡು ಇರುತ್ತಾರೆ ನಾಲ್ಕುಕುಂಬದ ಮಧ್ಯದಲ್ಲಿ ಒಂದು ಗಿಂಡಿಯನ್ನು ಇಡಲಾಗುತ್ತದೆ. ಈ ಸುರಿಗೆ ಗಿಂಡಿಯಲ್ಲಿ ಹೋಳಿಗೆ, ಎಲೆಅಡಿಕೆ ಇಟ್ಟು ಅದರ ಮೇಲೆ ಸುಮಂಗಲಿಯರು ಕೈ ಇಡುತ್ತಾರೆ. ನಡುವೆ ಒಂದು ಕಳಸವನ್ನು ಇಡಲಾಗುತ್ತದೆ. ವಧುವಿನ ಸುರಿಗೆ ಹಾಕುವಾಗ ಅವರ ತಾಯಿ ಸಂಬಂಧಿಯವರು ಕೂಡುತ್ತಾರೆ. ಈ ಮೂಲಕವಾಗಿ ಕನ್ಯೆಯನ್ನು ವೈವಾಹಿಕ ಬಂಧನಕ್ಕೆ ಒಳಪಡಿಸಲಾಗುತ್ತದೆ.

**ದ. ಲಗ್ನಪತ್ರಿಕೆ ಪೂಜೆ**

ಮಾಂಗಲ್ಯಧಾರಣೆಗೂ ಮೊದಲು ಲಗ್ನಪತ್ರಿಕೆ ಇಟ್ಟು ಅದರ ಸುತ್ತಲು ಐದು ಕಳಸದ ಗಿಂಡಿಯನ್ನು ಇಡಲಾಗುತ್ತದೆ.(ಗುರುಕಳಸ ಹೂಡುವುದು) ಆ ತಂಬಿಗೆಗಳಿಗೆ ದಾರಸುತ್ತಲಾಗುತ್ತದೆ. ಐದುಜನ ಹಿರಿಯರ ಸಮ್ಮುಖದಲ್ಲಿ ಜಂಗಮರು ಪೂಜೆಮಾಡುವರು. ಹಿರಿಯರು ಸೇರಿ ಅವುಗಳನ್ನು ಆಶೀರ್ವದಿಸುವರು.

**ಧ. ಮೂಹೂರ್ತ**

ಮೂಹೂರ್ತಕ್ಕೆ ಎಲ್ಲಾ ಸಾಮಗ್ರಿಗಳನ್ನು ಜೋಡಿಸಿಕೊಂಡು, ಗುರುಗಳನ್ನು ಕರೆತಂದು ವರನ ಕಡೆಯವರು ವಧುವನ್ನು ಕರೆತರಲು ವರನ ಸಂಬಂಧಿಕರು ಕಳಸ, ಕನ್ನಡಿಯನ್ನು ಹಿಡಿದುಕೊಂಡು ಮಂಗಳವಾಧ್ಯಗಳೊಂದಿಗೆ ವಧುವನ್ನು ಲಗ್ನಕ್ಕೆ ಕರೆತರಲು ಹೋಗುತ್ತಾರೆ. ವಧುವಿನ ಕಡೆಯಿಂದ ಕಳಸವನ್ನು ಹಿಡಿದು ವರನ ಸಂಬಂಧಿಕರಿಗೆ ಮುಖಾಮುಖಿಯಾಗುತ್ತಾರೆ. ಹಾಗೆಯೆ ಎರಡು ಕಡೆಯವರು ಪರಸ್ಪರ ಅಕ್ಷತೆ ಹಾಕುವ ಮೂಲಕ ಹೊಂದಾಗುತ್ತಾರೆ.

ಗುರುಗಳ ನಿರ್ದೇಶನದಂತೆ ವರನನ್ನು ಮೂಹೂರ್ತದ ಮಂಟಪಕ್ಕೆ ಕರೆತರಲಾಗುತ್ತದೆ. ಆಗ ವಧುವಿನ ಸೋದರಮಾವ ವಧುವನ್ನು ಒಪ್ಪಿಸಿಕೊಂಡು ತನ್ನ ಭುಜದ ಮೇಲೆ ಹೊತ್ತುಕೊಂಡು ಮೂಹೂರ್ತದ ಮಂಟಪಕ್ಕೆ ಕರೆ ತರಲಾಗುತ್ತದೆ. ಇತ್ತೀಚೆಗೆ ಕೈ ಹಿಡಿದು ವಧುವನ್ನು ಕರೆತರಲಾಗುತ್ತದೆ.

ವಧು ಮತ್ತು ವರರು ಪರಸ್ಪರ ನೋಡದಂತೆ ಒಂದು ಪರದಿ ಅಥವಾ ಒಂದು ಪಟವನ್ನು (ಬಿಳಿಯ ಬಟ್ಟೆ) ಅಡ್ಡಹಿಡಿಯಲಾಗಿರುತ್ತದೆ. ಆ ನಂತರ ವರನ ಕೈಯಲ್ಲಿ ಲಗ್ನ ಕಟ್ಟಿಸಿದ ತೆಂಗಿನ ಕಾಯಿಯನ್ನು ಕೊಟ್ಟು ಮೂಹೂರ್ತದ ಧಾರೆಗೆ ಸಿದ್ಧರಾಗುತ್ತಾರೆ. ಪ್ರಥಮವಾಗಿ ವಧುವಿನ ತಂದೆತಾಯಿ ವರನ ಕಾಲುತೊಳೆದು ಕನ್ಯಾಧಾನವನ್ನು ಮಾಡಿಕೊಡುತ್ತಾರೆ. ಹಾಲುತುಪ್ಪ ಎರೆದು ಅಕ್ಷತೆಯನ್ನು

ಹಾಕಿ ಆಶೀರ್ವಾದ ಮಾಡುತ್ತಾರೆ. ಆ ನಂತರ ಇತರ ಸಂಬಂಧಿಕರು ಹಾಲುತುಪ್ಪ ಹಾಕುವುದರ ಮೂಲಕ ಕನ್ಯಾದಾನ ಮಾಡುತ್ತಾರೆ.

**ನ. ಮಾಂಗಲ್ಯಧಾರಣೆ**

ತಾಳಿಕಟ್ಟಿಸುವ ಕಾಲಕ್ಕೆ ನಿಗಧಿತ ಸಮಯದಲ್ಲಿ ಜಂಗಮರ ಹೇಳಿಕೆಯಂತೆ ವರನು ವಧುವಿಗೆ ತಾಳಿಕಟ್ಟುತ್ತಾನೆ. ಹಿಂದೆ ಅರಿಶಿನದ ಕೊಂಬು ಮತ್ತು ಅರಿಶಿನ ಲೇಪಿತ ದಾರದಿಂದ ಕಟ್ಟಲಾಗುತ್ತಿತ್ತು. ಆದರೆ ಇಂದು ಕರಿಮಣಿ ಮತ್ತು ವರನ ಹಾಗೂ ವಧುವಿನ ಕಡೆಯವರು ತಂದ ಎರಡು ತಾಳಿ ಪೋಣಿಸಿದ ದಾರವನ್ನು ಕಟ್ಟಲಾಗುತ್ತದೆ. ಈ ತಾಳಿಯನ್ನು ಕಟ್ಟುವ ಉದ್ದೇಶ ಏನೇ ಸಮಸ್ಯೆ, ಕಷ್ಟಗಳು ಬಂದರೂ ತಾಳಿಕೊಂಡು, ತಾಳ್ಮೆಯಿಂದ ಹೋಗು ಎಂದು ಅರ್ಥೈಸಲಾಗಿದೆ.

**ಪ. ಜೋಡಿ ಸುರಗಿ ಹಿಡಿಯುವುದು**

ಮಾಂಗಲ್ಯಧಾರಣೆಯ ತರುವಾಯ ವಧುವರರಿಗೆ ಸುರಿಗಿ ಮಾಲೆಯನ್ನು ಗುರುಗಳಿಂದ ಹಾಕಲಾಗುತ್ತದೆ. ತದನಂತರ ವಧು ಮತ್ತು ವರರಿಬ್ಬರನ್ನೂ ಸೇರಿಸಿ ಸುರಿಗಿ ಹಿಡಿದು ಕುಂಬ ನೀರು ಹಾಗೂ ಕಳಸ ನೀರನ್ನು ಬಿಡಲಾಗುತ್ತದೆ. ಇದರ ಮುಖ್ಯ ಉದ್ದೇಶ ಮಾಂಗಲ್ಯ ಧಾರಣೆಗೂ ಮುಂಚಿತವಾಗಿ ವಧು ಮತ್ತು ವರರಿಬ್ಬರಿಗೆ ಪ್ರತ್ಯೇಕವಾಗಿ ಒಂಟಿ ಸುರಗಿ ನೀರನ್ನು ಹಾಕಲಾಗಿರುತ್ತದೆ. ಮಾಂಗಲ್ಯ ಧಾರಣೆಯ ನಂತರ ವಧುವರರೀರ್ವರನ್ನು ಸೇರಿಸಿ ಸುರಗಿಯನ್ನು ಬಿಡಲಾಗುತ್ತದೆ. ಒಂಟಿಯಾಗಿದ್ದವರನ್ನು ಮಾಂಗಲ್ಯ ಧಾರಣೆಯ ನಂತರ ವಧುವರರನ್ನು ಒಟ್ಟಿಗೆ ಸೇರಿಸುವ ಒಂದು ಸ್ಥಳ. ಈ ಮೂಲಕ ವಧುವರರಿಬ್ಬರು ದೈವಿಕವಾಗಿ ಮಾನಸಿಕವಾಗಿ ಒಂದುಗೂಡುತ್ತಾರೆ ಎನ್ನುವುದು ವಿಶೇಷ. ನಂತರ ವಧುವರರಿಬ್ಬರನ್ನೂ ಕೂರಿಸಿ ಆರತಿ ಮಾಡಲಾಗುತ್ತದೆ. ಅಂತಿಮವಾಗಿ ಬಂದಂತಹ ವಧುವರರ ಕಡೆಯವರಿಗೆ ಊಟೋಪಚಾರ ಮಾಡಲಾಗುತ್ತದೆ.

**ಫ. ನಾಗೋಲೆ ಶಾಸ್ತ್ರ**

ಮಾಂಗಲ್ಯಧಾರಣೆಯ ಎಲ್ಲಾ ಕಾರ್ಯಗಳು ಮುಗಿದ ತರುವಾಯ ಮರುದಿನ ನಾಗೋಲೆ ಶಾಸ್ತ್ರವನ್ನು ಮಾಡುತ್ತಾರೆ. ಮದುವೆಯ ದಿನ ಗಂಗಾಪೂಜೆಯಿಂದ ತಂದ ನೀರನ್ನು ಹಾಗೆ ಇಡುತ್ತಾರೆ. ಮರುದಿನ ನಾಗೋಲೆಶಾಸ್ತ್ರ ಮಾಡುವಾಗ ವಧುವರರಿಬ್ಬರನ್ನು ಕೂಡಿಸಿ ಈ ನೀರನ್ನು ಉಪಯೋಗಿಸಿ ಸುರಗಿ ನೀರನ್ನು ಬಿಡುವರು. ಮಧುಮಗ ಮಾಡುವಾಗ ವರನಿಗೆ ಕಟ್ಟಿದ ತೆಂಗಿನ ಕಾಯಿಯನ್ನು ಇದಕ್ಕೆ ಹರಿಬಿಡುವರು ಇದನ್ನು ಮಡಿವಾಳರು ತೆಗೆದುಕೊಂಡು ಹೋಗುವರು. ಈ ನಾಗೋಲೆ ಮಾಡುವ ವಿಧಾನವನ್ನು ವಿಶೇಷವಾಗಿ ದೇವರು ಮಾಡುವುದು ಎನ್ನುತ್ತಾರೆ.

**ಬ. ಆರತಕ್ಷತೆ**

ಮಾಂಗಲ್ಯಧಾರಣೆ ಮರುದಿನ ವರನ ಮನೆಗೆ ವಧುವನ್ನು ಕರೆದುಕೊಂಡು ಹೋಗಿ ಬಾಗಿಲನ್ನು(ಹೊಸ್ತಿಲು) ಪೂಜೆ ಮಾಡಿಸುತ್ತಾರೆ. ನಂತರ ಹೊಸ್ತಿಲಿಗೆ ವಧುವಿನ ಕಾಲನ್ನು ಇಟ್ಟು ವಧುವಿನ ಕಾಲಿನ ಬೆರಳು ಸಂದಿಯಲ್ಲಿ ನಾಣ್ಯವನ್ನು(ಲಕ್ಷ್ಮಿ)ಇಟ್ಟು ಮಳೆಬಡಿಯುತ್ತಾರೆ. ನಂತರ

ಲಾಳಗೊಂಡರಲ್ಲಿ ಚಾಜಾ(ಹೊಸ) ಸಾಮಾನು ಒಂದು ಬುಟ್ಟಿಯಲ್ಲಿ ಅವರಿಗೆ ದಿನನಿತ್ಯ ಬಳಕೆಯ ವಸ್ತುಗಳು, ಪಾತ್ರೆ, ಪೂಜಾ ಸಾಮಾನು ಇತ್ಯಾದಿಗಳನ್ನು ಇಡಲಾಗಿರುತ್ತದೆ. ಇದನ್ನು ವರನಮನೆಯವರು ವಧುವಿನ ಸಹೋದರಿಗೆ ಹೊಸ ಬಟ್ಟೆಯನ್ನು ಕೊಟ್ಟು ಪೂಜೆ ಮಾಡಿ ನೈವೇಧ್ಯ ಮಾಡಿ ತೆಗೆದುಕೊಳ್ಳಲಾಗುತ್ತದೆ. ವಧುವನ್ನು ಮನೆತುಂಬಿಸಿಕೊಳ್ಳುವಾಗ ಹೊಸ್ತಿಲ ಮೇಲೆ ಒಂದು ಸೇರು ಅಕ್ಕಿ ಬೆಲ್ಲ ಇಡಲಾಗುತ್ತದೆ. ಆ ನಂತರ ಅಕ್ಕಿಯ ಸೇರನ್ನು ಕಾಲಿನಿಂದ ಚೆಲ್ಲಿಸಿ ಮನೆಯ ಒಳಗೆ ತುಂಬಿಸಿಕೊಳ್ಳಲಾಗುತ್ತದೆ.

**ಭ. ಚಪ್ಪರ ಇಳಿಸುವುದು**

ಲಾಳಗೊಂಡರ ವಿವಾಹದ ಕಾರ್ಯಗಳೆಲ್ಲವು ಮುಗಿದ ನಂತರ ಚಪ್ಪರಕಂಬವನ್ನು ತೆಗೆಯಲಾಗುತ್ತದೆ. ವಿವಾಹದ ನಂತರದ ೯ ನೇ ದಿನದಂದು ಚಪ್ಪರಕಂಬಕ್ಕೆ ವಧುವರರ ಕೈಯಿಂದ ಪೂಜೆಯನ್ನು ನೆರವೇರಿಸಿ ಆ ಕಂಬಕ್ಕೆ ಪ್ರಸಾದ ನೈವೇಧ್ಯವನ್ನು ಮಾಡಿ ವಧುವರರ ಕೈಯಿಂದ ಚಪ್ಪರ ಕಂಬವನ್ನು ಇಳಿಸುವ ಶಾಸ್ತ್ರಮಾಡುತ್ತಾರೆ. ಇದರ ವಿಷೇಶತೆ ಎಂದರೆ ವಧುವರರೂ ಚಪ್ಪರ ಕಂಬವನ್ನು ತೆಗೆಯುವುದರ ಮೂಲಕ ತಮ್ಮ ವೈವಾಹಿಕ ಜೀವನಕ್ಕೆ ಇದ್ದ ಅಡ್ಡಿಗಳನ್ನು ಬದಿಗೆ ಸರಿಸಿ ಮುಂದಿನ ಜೀವನಕ್ಕೆ ಅಡಿಯಿಟ್ಟರು ಎಂಬುದಾಗಿದೆ.

**ಮ. ವಿಧವಾ ವಿವಾಹ**

ಲಾಳಗೊಂಡರಲ್ಲಿ ಚಿಕ್ಕಲಾಳಗೊಂಡರು, ಹಿರೇಲಾಳಗೊಂಡರು ಎಂಬ ಎರಡು ಪ್ರಭೇದಗಳಿರುವ ಕಾರಣ ಹಿರೇಲಾಳಗೊಂಡರಲ್ಲಿ ವಿಧವಾ ವಿವಾಹ ಕಂಡುಬರುವುದಿಲ್ಲ, ಚಿಕ್ಕಲಾಳಗೊಂಡರಲ್ಲಿ ವಿಧವಾ ವಿವಾಹ ಕಂಡುಬರುತ್ತದೆ. ಆದರೂ ಅದು ಅಲ್ಪಪ್ರಮಾಣದಲ್ಲಿ ಕಂಡುಬರುತ್ತದೆ. ವಿಧವಾ ವಿವಾಹಕ್ಕೆ ಉಡಕಿ ಮದುವೆ ಅಥವಾ ಸೀರೆ ಉಡಿಸುವುದು ಎನ್ನುತ್ತಾರೆ ಈ ರೀತಿಯ ಮದುವೆಯನ್ನು ಕೆಲವು ಪ್ರದೇಶಗಳಲ್ಲಿ ವಿಧವೆಯರು ಸ್ವ ಇಚ್ಚೆಯಿಂದ ನಿರಾಕರಿಸುತ್ತಾರೆ. ಇದಕ್ಕೆ ಕಾರಣ ಇತರ ಲಿಂಗಾಯುತ ಸಮುದಾಯದ ಪ್ರಭಾವವೆ ಆಗಿದೆ. ಉಡಿಕಿ ಮದುವೆ ಯಾವುದೇ ಆಡಂಬರ, ಪ್ರಚಾರವಿಲ್ಲದೆ ಕೆಲವೇ ಮುಖಂಡರ ಸಮ್ಮುಖದಲ್ಲಿ ಮಧ್ಯರಾತ್ರಿ ನಡೆಯುತ್ತದೆ. ಆಗ ಮದುವೆ ಗಂಡು ಒನಕೆಗೆ ತಾಳಿ ಕಟ್ಟುತ್ತಾನೆ ನಂತರ ಆ ತಾಳಿಯನ್ನು ವಿಧವೆಯ ಸೋದರ ಮಾವ ವಿಧವೆಗೆ ಕಟ್ಟುತ್ತಾನೆ ಉಡಿಕಿ ಮದುವೆಯು ಹೆಚ್ಚಾಗಿ ವಿಧುರ ವಿಧವೆಯರ ಮಧ್ಯ ನೆರವೇರುತ್ತದೆ. ಈ ರೀತಿಯ ಮದುವೆಯಾದವರಿಗೆ ಇತರ ಶುಭಕಾರ್ಯಗಳಲ್ಲಿ ನಿಷೇಧವಿರುತ್ತದೆ.

ನವ ವಧುವನ್ನು ವಿಧುರನಿಗೆ ಕೊಟ್ಟು ವಿವಾಹ ಮಾಡಬಹುದಾಗಿದೆ. ನವವಧುವರರ ವಿವಾಹದ ಆಚರಣೆಗಳಂತೆ ಈ ಮದುವೆ ಆಚರಣೆಗಳಿರುತ್ತವೆ. ಪುನಃ ಮದುವೆಯಾದ ವಿಧುರನಿಗೆ ಯಾವೂದೇ ಮಂಗಳ ಕಾರ್ಯದಲ್ಲಿ ಸ್ಥಾನವಿರುವುದಿಲ್ಲ. ಆದರೆ ವಿಧುರನನ್ನು ಮದುವೆಯಾದ ಸುಮಂಗಲಿಗೆ ಅಂತಹ ನಿಷಿದ್ಧಗಳು ಇರುವುದಿಲ್ಲ ಚೊಚ್ಚಲು ಬಸಿರು ಬಾಣಂತಿಗೆ ಸೀಮಂತ ಕಾರ್ಯವು ಇತರ

ಲಿಂಗಾಯುತರಂತೆ ನೆರವೇರುತ್ತವೆ. ಆದರೆ ಬಹುತೇಕ ಕುಟುಂಬಗಳು ಈ ಆಚರಣೆಯು ನಮ್ಮ ಮನೆತನಕ್ಕೆ ರೂಢಿ ಇಲ್ಲವೆಂದು ಆಚರಿಸುವುದಿಲ್ಲ. ಈ ಒಂದು ಆಚರಣೆ ಮಹಿಳೆಯರಿಗೆ ಇರುವ ಸ್ಥಾನವನ್ನು ಗುರುತಿಸುತ್ತದೆ.

ಈ ಮೇಲೆ ಹೇಳಿದ ರೀತಿಯಲ್ಲಿ ಲಾಳಗೊಂಡರಲ್ಲಿ ವಿವಾಹ ಕಾರ್ಯವನ್ನು ಬಂಧುಬಾಂಧವರು ಸೇರಿ ಸಂಭ್ರಮದಿಂದ ಮಾಡಲಾಗುತ್ತದೆ. ಲಾಳಗೊಂಡರಿಗೆ ಬೆಸಸಂಖ್ಯೆ ೧,೩,೫,೭,೯,೧೧,೧೩ ಇನ್ನು ಮುಂತಾಗಿ ಬೆಸಸಂಖ್ಯೆಗಳನ್ನು ಒಳ್ಳೆಯ ಸಂಖ್ಯೆಗಳೆಂಬುದಾಗಿ ಅವುಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಾರೆ. ಸಮಸಂಖ್ಯೆಗಳಾದ ೨,೪,೬,೮,೧೦,೧೨ ಮುಂತಾದ ಸಂಖ್ಯೆಗಳ ದಿನಗಳೊಂದು ಯಾವುದೇ ಕಾರಣಕ್ಕೂ ಶುಭಕಾರ್ಯಗಳಿಗೆ ಬಳಸುವುದಿಲ್ಲ.

ನಂದಿಯನ್ನು ಮುಂದೆ ಇಟ್ಟುಕೊಂಡೇ ಎಲ್ಲಾ ಕಾರ್ಯಗಳನ್ನು ನೆರವೇರಿಸುತ್ತಾರೆ. ಇದರ ವಿಶೇಷವೇನೆಂದರೆ. ವ್ಯವಸಾಯಕ್ಕೆ ಯಾವರೀತಿಯಲ್ಲಿ ಪ್ರಾಮುಖ್ಯತೆ ನೀಡಿದ್ದಾರೆ. ಎಂಬುದು ತಿಳಿದುಬರುತ್ತದೆ. ಈಗಾಗಲೇ ಇವರು ಹೈನುಗಾರಿಕೆಯಿಂದ ಕೃಷಿಮೂಲ ಸಮಾಜದಿಂದ ಬಂದವರೆಂದು ತಿಳಿದು ಬರುತ್ತದೆ.

**ಯ. ಶವಸಂಸ್ಕಾರದ ಕಾರ್ಯಗಳು**

ಲಾಳಗೊಂಡರು ಸಹ ಇತರೆ ಲಿಂಗಾಯತ ಉಪಜಾತಿಗಳಂತೆ ಲಿಂಗೈಕ್ಯರಾದವರಿಗೆ ವಿಶಿಷ್ಟ ಆಚರಣೆಗಳನ್ನು ಮಾಡಲಾಗುತ್ತದೆ. ಲಾಳಗೊಂಡರಲ್ಲಿ ಸಾವು ದುಃಖದ ಸನ್ನಿವೇಶವೆಂದು ಪರಿಗಣಿಸಲಾಗುತ್ತದೆ. ಇಹಲೋಕ ತ್ಯಜಿಸಿದವರು ಕೈಲಾಸವಾಸಿಯಾದವರೆಂದು ಕರೆಯುತ್ತಾರೆ. ಲಿಂಗೈಕ್ಯರಾದ ತಕ್ಷಣ ಕೈಕಾಲುಗಳನ್ನು ಮಡಿಚಿ, ಮುಖ ಮಜ್ಜನ ಮಾಡಿ ವಿಭೂತಿಧಾರಣೆ ಮಾಡಲಾಗುತ್ತದೆ. ಮನೆಮುಂದೆ ಅಗ್ನಿಯನ್ನು ಹಚ್ಚುತ್ತಾರೆ. ಸಾಮಾನ್ಯವಾಗಿ ಸಹಜ ಸಾವು ಸಂಭವಿಸಿದವರನ್ನು ಹೂಳುವುದು ಇಲ್ಲಿ ಪರಂಪರಾಗತವಾಗಿ ಇಲ್ಲಿ ನಡೆದುಕೊಂಡು ಬಂದ ಪದ್ಧತಿಯಾಗಿರುತ್ತದೆ. ಸ್ಮಶಾನದಲ್ಲಿ ೯ ಅಥವಾ ೧೩ ಜನ ಶವ ಹೂಳಲು ಗುಂಡಿ (ಕುಣಿ)ಯನ್ನು ತೆಗೆಯುತ್ತಾರೆ. ಇದು ಶ್ರಮದಾಯಕ ಕೆಲಸವಾಗಿರುತ್ತದೆ. ಸರಿಸಮವಾಗಿ ಇತ್ತ ಮನೆಯಲ್ಲಿ ಶ್ರವಕ್ಕೆ ಸ್ನಾನ ಮಾಡಿಸಿ ಹೊಸ ಬಿಳಿಯ ೭ ಮೀ ಬಟ್ಟೆಯನ್ನು ಧರಿಸಲಾಗುತ್ತದೆ. ಈ ಬಟ್ಟೆಯನ್ನು ಶಿವಸೆರಗು ಎಂದು ಕರೆಯಲಾಗುತ್ತದೆ.

ಮುತ್ತೈದೆ ಸಾವನ್ನಪ್ಪಿದರೆ ತವರು ಮನೆಯಿಂದ ಹೊಸಬಟ್ಟೆ ತಂದು ತಲೆಗೆ ಎಣ್ಣೆ ಹಚ್ಚುತ್ತಾರೆ. ಉಡಿಅಕ್ಕಿ, ಅರಿಶಿನ-ಕುಂಕುಮ, ದಂಡಿ(ಹೂವಿನಿಂದ ಮಾಡಿದ್ದು)ತರುತ್ತಾರೆ. ನಂತರ ಗುರುಗಳನ್ನು ಕರೆತಂದು ಪೂಜೆ ಮಾಡಲಾಗುತ್ತದೆ. ತದ ನಂತರ ಎಲ್ಲಾ ಸಂಬಂಧಿಕರು ಶವವನ್ನು ಮುಟ್ಟಿ ದೇವರ ಸಮಾನವೆಂದು ಪೂಜೆ ಸಲ್ಲಿಸಿ ನಮಸ್ಕರಿಸುತ್ತಾರೆ. ಎಲ್ಲಾ ಸಂಬಂಧಿಗಳು ಬಂದು ದರ್ಶನ ಪಡೆದ ನಂತರ ಶವವನ್ನು ರುದ್ರಭೂಮಿ(ಸಾರ್ವಜನಿಕ ಸ್ಮಶಾನ) ಅಥವಾ ಅವರ ಸ್ವಂತ ಹೊಲ

ಅಥವಾ ತೋಟಗಳಲ್ಲಿ ಹೂಳುವುದುಂಟು. ಶವವನ್ನು ಗುಂಡಿಯ ಕಡೆಗೆ ಹೋಗುವ ಸಂದರ್ಭದಲ್ಲಿ ಮನೆಯ ಹಿರಿಯ ಮಗನಿಂದ ಬೆಂಕಿ(ಕಿಚ್ಚು)ಯನ್ನು ಹಿಡಿದುಕೊಂಡು ತಲೆಗೆ ರುಮಾಲು ಸುತ್ತಿಕೊಂಡು ಕರ್ಪೂರ ಹಚ್ಚಿ ನಾಲ್ಕುಜನ ಸೇರಿ ಚಟ್ಟವನ್ನು ಹೊತ್ತುಕೊಳ್ಳುತ್ತಾರೆ. ಬಂದ ಸಂಬಂಧಿಗಳೆಲ್ಲಾ ನಾಲ್ಕಾರು ಹೆಜ್ಜೆಗೊಬ್ಬರಂತೆ ಆ ಶವವನ್ನು ಪರಸ್ಪರ ಹೆಗಲಿನಿಂದ ಹೆಗಲಿಗೆ ಬದಲಾಯಿಸಿಕೊಳ್ಳುತ್ತಾರೆ, ಜೊತೆಗೆ ವಾದ್ಯಗಳೊಂದಿಗೆ ಕರೆದೊಯ್ಯುತ್ತಾರೆ. ಆ ಮೂಲಕ ಆತ್ಮಕ್ಕೆ ಶಾಂತಿಸಿಗಲಿ ಎಂಬ ನಂಬಿಕೆ ಇದೆ. ದಾರಿಯುದ್ದಕ್ಕೂ ಮಂಡಕ್ಕಿ ಸೂರೆಮಾಡುತ್ತಾರೆ. ಏಕೆಂದರೆ ಸತ್ತವರ ಆತ್ಮವು ತಿರುಗಿ ಬರಕೂಡದು ಎಂಬುದಾಗಿ ಈ ರೀತಿ ದಾರಿಯುದ್ದಕ್ಕೂ ಸೂರೆ ಮಾಡುವ ಸಂಪ್ರದಾಯವಿದೆ. ಒಂದು ವೇಳೆ ಹಾಗೇನಾದರು ತಿರುಗಿ ಬಂದರೆ ದಾರಿಯುದ್ದಕ್ಕೂ ಬಿದ್ದ ಮಂಡಕ್ಕಿ ಆಯ್ದುಕೊಂಡು ಬರಬೇಕು ಇದು ಸಾಧ್ಯವಿಲ್ಲ ಎಂಬ ಅಪಾರ ಮುಂದಾಲೋಚನೆ ನಂಬಿಕೆಯನ್ನು ಹೊಂದಿ ಈ ಕಾರ್ಯವನ್ನು ಮಾಡಲಾಗುತ್ತದೆ. ಆದರೆ, ಈ ರೀತಿಯ ನಂಬಿಕೆಗಳು ಕೇವಲ ನಂಬಿಕೆಗಳೇ ಹೊರತು, ಕೇಳಿಸಿಕೊಳ್ಳಲು ಮಾತ್ರ ಚೆನ್ನಾಗಿರುತ್ತವೆ. ಈ ಒಂದು ಆಚರಣೆಯು ಬುಡಕಟ್ಟು ಸಮುದಾಯದ ಲಕ್ಷಣವಾಗಿದೆ. ಇದರ ಹಿಂದೆ ಭೂತಾರಾಧನೆ ಮತ್ತು ಅವುಗಳ ಬಗೆಗೆ ಜನಸಾಮಾನ್ಯರಲ್ಲಿರುವಂತಹ ಭಯದ ಪ್ರತೀಕವಾಗಿ ಈ ಆಚರಣೆಯನ್ನು ನೆರವೇರಿಸಲಾಗುತ್ತದೆ.

ಶವವನ್ನು ಊರಸೀಮೆ ಅಥವಾ ಬಾಗಿಲನ್ನು ದಾಟಿದ ನಂತರ ಒಂದು ಮೊರದಲ್ಲಿ ಧಾನ್ಯ ಉಪ್ಪು ಮೆಣಸಿನ ಕಾಯಿಯನ್ನು ಇಟ್ಟು ಮುಂದೆ ಸಾಗುತ್ತಾರೆ. ಆ ನಂತರ ಶವವನ್ನು ಕುಣಿಯ ಒಳಗೆ ಉತ್ತರಾಭಿಮುಖವಾಗಿ ಯೋಗ ಮುದ್ರೆಯಲ್ಲಿ ಕೂರಿಸಲಾಗುತ್ತದೆ. ಯೋಗ ಮುದ್ರೆಯಲ್ಲಿ ಕುಳಿತ ಶವದ ಎಡತೋಳಿಗೆ ಲಿಂಗವನ್ನು ಒಂದು ಬಿಳಿ ವಸ್ತ್ರದಲ್ಲಿರಿಸಿ ಕಟ್ಟಲಾಗುತ್ತದೆ. ಸಮಾಜದ ಗುರುಗಳು ಪೂಜೆಮಾಡಿ ಗುರುಗಳ ಪಾದವನ್ನು ಶವದ ಹಣೆಗೆ ಇಟ್ಟು ಪೂಜಿಸಿ ತದನಂತರ ಮನೆಯ ಹಿರಿಯ ಮಗನಿಗೆ ಪೇಟ (ರುಮಾಲು) ತೊಡಿಸುತ್ತಾರೆ. ಇದರ ಮೂಲ ಉದ್ದೇಶ ತಂದೆಯ ನಂತರ ಮಗನು ಯಜಮಾನಿಕೆಯ ಅಧಿಕಾರವನ್ನು ಪಡೆದುಕೊಳ್ಳುವುದು ಎಂದರ್ಥ.

ಮನೆಯ ಯಜಮಾನ ಲಿಂಗೈಕ್ಯರಾಗಿದ್ದರೆ, ಹೆಂಡತಿಗೆ ಶವದಬಳಿ ಕರೆತಂದು ತವರು ಮನೆಯವರು ತಂದುಕೊಟ್ಟ ಹೊಸಬಟ್ಟೆ ಅರಿಶಿನಕುಂಕುಮ ಬಳೆ, ಹೂವು, ಎಣ್ಣೆ ತಂದು ಹಚ್ಚಿ, ಉಡಿಹಕ್ಕಿ(ಇದನ್ನು ಕೊನೆಯ ಮಡಿಲಕ್ಕಿ ಎನ್ನುತ್ತಾರೆ)ಯನ್ನು ಹಾಕಿ ಕೈಗೆ ತೊಡಿಸಿಕೊಂಡ ಬಳೆಗಳನ್ನು ಒಡೆದು, ಹಣೆಯ ಮೇಲಿನ ಕುಂಕುಮವನ್ನು ಅಳಿಸಿ, ತಲೆಯಲ್ಲಿ ಮುಡಿದ ಹೂವು ತೆಗೆದು ನಂತರ ತಾಳಿ, ಕಾಲುಂಗುರ ತೆಗೆಯಲಾಗುತ್ತದೆ. ಕೊನೆಯಲ್ಲಿ ಮೂರುಬೊಗಸೆ ಮಣ್ಣನ್ನು ತನ್ನ ಗಂಡನ ಶವದ ಮೇಲೆ ಹಾಕುತ್ತಾರೆ.

ನಂತರ ಶವಕ್ಕೆ ಮನೆಯ ಹಿರಿಯ ಮಗನಿಂದ ಪೂಜೆ ನೆರವೇರಿಸಲಾಗುತ್ತದೆ. ಆ ಹಿರಿಯ ಮಗ ಪೂಜೆಯ ಸಂದರ್ಭದಲ್ಲಿ ಶವದ ಮೇಲೆ ಬಿಲ್ವಪತ್ರೆಯನ್ನು ಹಾಕುತ್ತಾನೆ. ತದ ನಂತರ ಮೂರು ಬೊಗಸೆ ಮಣ್ಣನ್ನು ಹಾಕುತ್ತಾನೆ ಹಾಗೂ ವಿಭೂತಿಯನ್ನು ಹೆಚ್ಚಾಗಿ ಸಂಸ್ಕಾರ ಮಾಡಲು ಬಳಸಲಾಗುತ್ತದೆ. ಈ ಕಾರ್ಯ ಮುಗಿಯುತ್ತಿದ್ದಂತೆ, ಶವಸಂಸ್ಕಾರಕ್ಕೆ ಬಂದ ಎಲ್ಲಾ ಬಾಂದವರಿಗೆ

ಸಾರ್ವಜನಿಕರಿಗೆ ಅಕ್ಷತೆ, ಬಿಲ್ವಪತ್ರೆ ಕೊಟ್ಟು ಗುರುಗಳಿಂದ ಪುಷ್ಪಾಂಜಲಿ ಶ್ಲೋಕವನ್ನು ಭೋದಿಸಿ ನಂತರ ಜನರೆಲ್ಲಾ ಕೈಲಾಸಕ್ಕೆ ಉಘೇಉಘೇ ಎಂದು ಹೂವು ಬಿಲ್ವ ಪತ್ರೆಗಳನ್ನು ಶವದ ಮೇಲೆ ಹಾಕಿ ತಲಾಮೂರು ಬೊಗಸೆ ಮಣ್ಣನ್ನು ಹಾಕಲಾಗುತ್ತದೆ. ನಂತರ ಕುಣಿಗೆ ಮಣ್ಣನ್ನು ಹಾಕಿ ಮುಚ್ಚಲಾಗುತ್ತದೆ. ಶವಸಂಸ್ಕಾರಕ್ಕೆ ಬಂದ ಬಂಧುಬಾಂದವರೆಲ್ಲಾ ಮುಖ ಮತ್ತು ಕೈಕಾಲುಗಳನ್ನು ತೊಳೆದುಕೊಂಡು ದೇವರ ಬಾಗಿಲಲ್ಲಿ ನಿಂತು ದೇವರ ದರ್ಶನಮಾಡಿ ಮನೆಗೆತೆರಳಿ, ಸ್ನಾನಗೈದು, ಮಡಿ ಬಟ್ಟೆ ಧರಿಸಿ ಮನೆಗೆ ಗೋ ಮೂತ್ರ ಸಿಂಪಡಿಸಲಾಗುತ್ತದೆ. ತರುವಾಯ ಮೃತನಾದ ವ್ಯಕ್ತಿಯ ಮನೆಗೆ ಹೋಗಿ ದೀಪವನ್ನು ದರ್ಶಿಸಿ, ಪೂಜಿಸಿ, ಪ್ರಸಾದವನ್ನು ಸೇವಿಸಿ ಮನೆಗೆ ಇಂತಿರುಗುತ್ತಾರೆ.

**೮. ಮೂರನೇ ದಿನದ ಕಾರ್ಯ**

ಸಾವಿನ ಮನೆಯಲ್ಲಿ, ಸಾವನ್ನಪ್ಪಿದ ದಿನದಿಂದ ಮೂರನೇ ದಿನದಲ್ಲಿ ಈ ಕಾರ್ಯ ಜರುಗುತ್ತದೆ. ಆ ಸಂದರ್ಭದಲ್ಲಿ ಶವದ ಗುಡ್ಡೆಗೆ ಪೂಜೆ ಮಾಡಲಾಗುತ್ತದೆ, ಮತ್ತು ಬದನೆಕಾಯಿ, ಅನ್ನದಿಂದ ಮಾಡಿದ ಖಾದ್ಯವನ್ನು ತೆಗೆದುಕೊಂಡು ಹೋಗಿ ಪೂಜೆ ನೆರವೇರಿಸಲಾಗುತ್ತದೆ. ಪೂಜೆ ಸಲ್ಲಿಸಿ ಎಡೆಯನ್ನು ಹಾಕಲಾಗುತ್ತದೆ. ಹೀಗೆ ಇಟ್ಟ ಎಡೆಯನ್ನು ಕಾಗೆ ಬಂದು ಮುಟ್ಟ ಬೇಕು ಎಂದು ಕಾಯುತ್ತಾರೆ. ಕಾಗೆ ಬಂದು ಗುಡ್ಡೆಗೆ ಇಟ್ಟ ಎಡೆಯನ್ನು ತಿಂದರೆ ಸತ್ತವ್ಯಕ್ತಿಯು ಸಂತೃಪ್ತನಾಗಿರುವುದಾಗಿ ಬಾವಿಸಲಾಗುತ್ತದೆ. ಹೀಗೆ ಮೂರುದಿನದ ಕಾರ್ಯ ಮುಗಿದ ತರುವಾಯ, ೯ ದಿನದಲ್ಲಿ ನಂತರ ಒಂದು ತಿಂಗಳಲ್ಲಿ ಕೈಲಾಸಾರಾಧನೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುತ್ತದೆ.

ಅಪ್ರಾಪ್ತ ವಯಸ್ಸಿನ ಬ್ರಹ್ಮಚಾರಿಗಳು, ಮಕ್ಕಳು, ಸತ್ತರೆ ಯಾವ ಶಾಸ್ತ್ರಗಳನ್ನು ಮಾಡದೆ ಚಟ್ಟವನ್ನು ಕಟ್ಟದೆ ಕೈಯಲ್ಲಿ ತೆಗೆದುಕೊಂಡು ಹೋಗಿ ಮಣ್ಣು ಮಾಡುವರು. ಗರ್ಭಿಣಿ ಸ್ತ್ರೀಯರು ಸತ್ತರೆ ಮಣ್ಣು ಮಾಡದೆ ಸುಡುವರು. ಈ ಸುಡುವ ಕ್ರಿಯೆ ವೈಷ್ಣವೀಕರಣಕ್ಕೆ ಒಳಗಾಗಿರುವುದನ್ನು ಸೂಚಿಸುತ್ತದೆ. ಈ ರೀತಿಯಾಗಿ ಶವಸಂಸ್ಕಾರವನ್ನು ನೆರವೇರಿಸುವುದು ಕಾಣುತ್ತೇವೆ. ಇಂದು ಆಹಾರ ಕ್ರಮ ನಂಬಿಕೆಗಳು ಸಡಿಲವಾಗುತ್ತಿವೆ. ಈ ಎಲ್ಲಾ ಕಾರ್ಯಗಳು ಗುರು ಅಥವಾ ಜಂಗಮರ ಸಾನಿಧ್ಯದಲ್ಲಿ ನೆರವೇರಿಸಲಾಗುತ್ತದೆ.

ಪ್ರಸ್ತುತ ಅಧ್ಯಾಯವು ಲಾಳಗೊಂಡರ ಜೀವನಾವರ್ತನ ಆಚರಣೆಗಳನ್ನು ಒಳಗೊಂಡಿದೆ. ಪಶುಪಾಲನ ಲಕ್ಷಣಗಳನ್ನು ಹೊಂದಿರುವ ಈ ಸಮುದಾಯವು ಬಹುಹಿಂದೆಯೇ ತನ್ನ ಮೂಲ ಲಕ್ಷಣಗಳನ್ನು ಕಳೆದುಕೊಂಡು ಲಿಂಗಾಯತ ಸಮುದಾಯದಲ್ಲಿ ಬೆರೆತು ಹೋಗಿದೆ. ಇಂದು ಕಾಲ ಮತ್ತು ಪ್ರದೇಶಗಳಲ್ಲಿ ಕೆಲವೊಂದು ಆಚರಣೆಗಳನ್ನು ಕೈ ಬಿಟ್ಟಿದೆ ಮತ್ತೆ ಕೆಲವನ್ನು ಸೇರಿಸಿಕೊಂಡು ಸ್ಥಿತ್ಯಂತರ ಹೊಂದಿದೆ. ಜೀವನಾವರ್ತಕ ಆಚರಣೆಗಳಿಂದ ಲಾಳಗೊಂಡ ಸಮುದಾಯದ ಸಾಂಸ್ಕೃತಿಕ ಅನನ್ಯತೆ ತಿಳಿಯಬಹುದಾಗಿದೆ.

## COUSTUMS OF THE LALIGUNDARU

The Laligundaru deny their being sudras, and say that them are Linga Banijigas: but that race will neither eat in their houses; north give them their girls in marriage. They are a tribe of Karnataka descent. They are formers, bullock- hirere, gardeners,builders of mud walls and treaders in straw and other small merchanchandze: but they never take service as batigaru, or hinds. They have hereditary chiefs called Ijyamanas: who as useual with the assistant of a council, settle disputes and punish transgressions agenest the ruls of cast, by mulcting the offender in an entertainment or by a temporary excommunication. In cases of adulatory, the chief and is council first investigate the business. If they find it proved, that a women as been guilty of a connexion with a man of a strange caste, the priest (wodear) is called, and in his presence she is excommunicated : but , if she has only bestowed her favours on a man of the caste, her husband turns her away and she may live with any unmarried person of the caste concubine. The men are allowed to have a number of wives: and even after the age of puberty the women continue to be marriageable. The sex are very industrious, both at spinning and working in the fields. This caste buries the dead: and although they offer sacrifices to the saktis, are not allowed either to drink spirituous liquors or to eate animal food they pray to the spirits of good men, thinking that they are the occasion of dreams which foretell future events: but they know not what becomes of the spirits of bad men after death. Some of them are worshippers of Vishnu : and some of Iswara. The guru of former is a Sri Vaishnavam, Brahman residing at ahobalum. The guru of the siva side lives at meilar, and is called lingappa. He wears the linga, as do also his followers: and he is a sannyasi, but of what kind of people here do not know in his escursions, which do not happen above once in 10 years, he distributes holy water, and receives contributions

under the name of charity. it is at their marriages only that the punchanga reads mantrams (buchanan, francis, a journey from madras............, 1807, vol no1, 350).

**ಲ. ಲಾಳಿಗೊಂಡರ ಸಂಪ್ರದಾಯಗಳು**

ಲಾಳಿ-ಗುಂಡರು ತಮ್ಮ ಶೂದ್ರತ್ವವನ್ನು ಒಪ್ಪುವುದಿಲ್ಲ ಅವರು ತಮ್ಮನ್ನು ಲಿಂಗಬಣಜೀಗರೆಂದು ಹೇಳುವರು ಆದರೆ ಈ ಜನಾಂಗ ಲಿಂಗಬಣಜೀಗರ ಮನೆಯಲ್ಲಿ ಆಹಾರ ಸೇವಿಸುವುದಾಗಲಿ ಅಥವಾ ಅವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದಾಗಲಿ ಮಾಡುವುದಿಲ್ಲ. ಇವರು ಕರ್ನಾಟಕದ ಬುಡಕಟ್ಟಿನ ಮೂಲದವರಾಗಿರುವರು. ಒಕ್ಕಲುತನ, ಎತ್ತುಗಳ ಬಾಡಿಗೆ, ತೋಟಗಾರಿಕೆ ಕೆಸರಿನ ಗೋಡೆಗಳ ನಿರ್ಮಾಣಕಾರ್ಯ, ಒಣಹುಲ್ಲು ಹಾಗೂ ಸಣ್ಣವ್ಯಾಪಾರದಂತಹ ಕಾಯಕಗಳನ್ನು ಹೊಂದಿರುವರು. ಆದರೆ ಆಳಿನ ಸಹಾಯ ಪಡೆಯುವುದೇ ಇಲ್ಲ. ಇವರ ಸಾಂಪ್ರದಾಯಿಕ ಜಾತಿ ಪಂಚಾಯಿತಿಯ ಮುಖಂಡನಿಗೆ ಯಜಮಾನ ಎಂದು ಕರೆಯುವರು. ಪಂಚರ ಸಹಕಾರದೊಂದಿಗೆ ಈತನು ಸಮುದಾಯದ ಆಂತರಿಕ ಜಗಳಗಳನ್ನು ಪರಿಹರಿಸುವನು. ಜಾತಿಯ ನೀತಿಗಳನ್ನು ಮೀರಿದವರಿಗೆ ದಂಡವಿಧಿಸಿ ಶಿಕ್ಷಿಸುವರು ವ್ಯಭಿಚಾರಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನು ಪಂಚರು ಪರಿಶೀಲಿಸುವರು. ತಪ್ಪಿತಸ್ತರನ್ನು ಪೂಜಾರಿ ಒಡೆಯರ ಸಮ್ಮುಖದಲ್ಲಿ ಸಮಾಜದಿಂದ ಬಹಿಷ್ಕರಿಸುವರು. ಪುರುಷರು ಬಹುಪತ್ನಿತ್ವವನ್ನು ಅನುಸರಿಸಬಹುದು. ಈ ಜನಾಂಗ ಕೃಷಿ ಮತ್ತು ನೇಯ್ಗೆಯ ಉದ್ಯಮದಲ್ಲಿ ತೊಡಗಿಸಿಕೊಂಡಿರುವುದು. ಇವರಲ್ಲಿ ಸತ್ತವರನ್ನು ಊಳುವ ಸಂಪ್ರದಾಯವಿದೆ. ಶಕ್ತಿದೈವಗಳಿಗೆ ಬಲಿಗಳನ್ನು ಅರ್ಪಿಸುವರು. ಆದರೆ ಮದ್ಯಮಾಂಸ ಸೇವಿಸುವುದಿಲ್ಲ. ಇವರಲ್ಲಿ ಹಲವರು ವಿಷ್ಣುವನ್ನು ಕೆಲವರು ಶಿವನನ್ನು ಆರಾಧಿಸುತ್ತಾರೆ. ಅಹೋಬಲಂದಲ್ಲಿಯ ಶ್ರೀ ವೈಷ್ಣವ ಬ್ರಾಹ್ಮಣರು ಇವರ ಗುರುಗಳಾಗಿದ್ದರೆ, ಶಿವನ ಆರಾಧಕ ಲಾಳಗೊಂಡರ ಗುರುಗಳು ಲಿಂಗಧಾರಕ ಸನ್ಯಾಸಿಗಳಾಗಿದ್ದು ಮೈಲಾರದಲ್ಲಿರುವರು. ಇವರು ತೀರ್ಥಕೊಡುವರು, ಪಂಚಾಂಗ ನೋಡುವರು ಮತ್ತು ಮಂತ್ರ ಪಠಿಸುವರು (ಪ್ರಾನ್ಸಿಸ್ ಬೂಖಾನ್, ೧೮೦೭, ೧:೩೫೦).

**ವ. ಬಂಧುತ್ವ ಮತ್ತು ವಿವಾಹ**

ಬಂಧುತ್ವ ವ್ಯವಸ್ಥೆ ಮೂಲಭೂತ ಸಾಮಾಜಿಕ ಸಂಸ್ಥೆಯನ್ನು ಪ್ರತಿನಿಧಿಸುತ್ತದೆ. ಇದು ಸಂತಾನದ ಆಧಾರದ ಮೇಲೆ ರಚಿತವಾಗಿದೆ. ಸಾಮಾಜಿಕವಾಗಿ ಅಂಗೀಕೃತವಾದ ಶಾರೀರಿಕ ಸಂಬಂಧ, ರಕ್ತಸಂಬಂಧ ಹಾಗೂ ವಿವಾಹದ ಮೂಲಕ ಸೃಷ್ಟಿಯಾಗುವ ಸಾಮಾಜಿಕ ಸಂಬಂಧಗಳ ಬಲೆಯಾಗಿದೆ. ಪಾಶ್ಚಿಮಾತ್ಯದ ಸಮಾಜ ಮತ್ತು ಭಾರತೀಯ ಸಮಾಜಕ್ಕೂ ಇರುವ ಭಿನ್ನತೆಗಳಲ್ಲಿ ಬಂಧುತ್ವವು ಒಂದಾಗಿದೆ. ಇದು ಭಾರತೀಯ ಸಮಾಜವನ್ನು ವೈವಿಧ್ಯತೆಯಿಂದ ಕೂಡಿರುವಂತೆ ಮಾಡಿದೆ. 'ಮಹಮ್ಮದೀಯರು ಹಾಗೂ

ಹಿಂದುಗಳ ನಡುವೆ, ಅಷ್ಟೇ ಅಲ್ಲ ಕುಲಕುಲಗಳ ನಡುವೆ ಜಾತಿ ಜಾತಿಗಳ ನಡುವೆ ವಿಭಜಿತವಾದ ದೇಶ ಎಲ್ಲ ಸದಸ್ಯ ಘಟಕಗಳ ನಡುವೆಯೂ ಸಾಮಾನ್ಯವಾಗಿ ಕಂಡುಬರುವ ಪರಸ್ಪರ ತಿರಸ್ಕಾರ ಭಾವನೆ ಮತ್ತು ಸ್ವಭಾವ ಜನ್ಯವಾದ ಪ್ರತ್ಯೇಕತೆಗಳ ಒಟ್ಟು ಪರಿಣಾಮವಾಗಿ ಮೂಡಿ ಬರುವ ಅನಿರ್ಧಿಷ್ಟ ಸಮತೋಲನದ ಚೌಕಟ್ಟಿನ ಆಧಾರದ ಮೇಲೆ ನಿಂತಿರುವ ಸಮಾಜ ಎಂದು ಭಾರತೀಯ ಸಮಾಜದ ಕುರಿತಂತೆ ಕಾರ್ಲ್‌ಮಾರ್ಕ್ಸ್ ಅಭಿಪ್ರಾಯಿಸಿದ್ದಾರೆ (ಎನ್ಸೈಕ್ಲೋಪೀಡಿಯಾ ಆಫ್ ಸೋಷಿಯಾಲಜಿ, ೨೦೦೬).

ಭಾರತೀಯ ಸಮಾಜ ಕುಲಕುಲಗಳಿಂದ ವಿಭಜನೆಯನ್ನು ಹೊಂದಿರುವುದರಿಂದ ಅವುಗಳಲ್ಲಿ ವಿಶಿಷ್ಟ ವಿಧಿವಿಧಾನ ಮತ್ತು ನಿಷೇಧಗಳನ್ನು ಕಾಣಬಹುದು. ಪ್ರತಿ ಸಮುದಾಯವು ತನ್ನ ಸದಸ್ಯರ ನಡುವಿನ ಸಂಬಂಧಗಳನ್ನು ಸೃಷ್ಟಿಸಿಕೊಳ್ಳುವಾಗ ಕೆಲವೊಂದು ಚಿಹ್ನೆ ಅಥವಾ ಗುರುತುಗಳನ್ನು ನೀಡುತ್ತದೆ. ಆ ರೀತಿಯ ಚಿಹ್ನೆಗಳಲ್ಲಿ ಕುಲ/ಬಳಿ/ಬೆಡಗುಗಳು ಪ್ರಮುಖವಾಗಿದ್ದು, ಸಂಬಂಧ ಬೆಸೆಯಲು ಮತ್ತು ಸಮುದಾಯದ ವಿಕಾಸಕ್ಕೆ ಕಾರಣವಾಗುತ್ತವೆ. ಸಮುದಾಯದಲ್ಲಿ ಕೊಡುಕೊಳ್ಳುವಿಕೆಗೆ, ಜನನ, ಮರಣದಂತಹ ಕ್ರಿಯಾ ವಿಧಿಗಳಲ್ಲಿ ನಡೆಯುವ ಜವಾಬ್ದಾರಿಯನ್ನು ನೀಡಲು ನೆರವಾಗುತ್ತವೆ. ಬಂಧತ್ವು ಎಂದರೆ ಸಮುದಾಯದ ಸದಸ್ಯರ ನಡುವಿನ ಬೆಸುಗೆ ಬೆಸೆಯುವ ಒಟ್ಟು ಅಂಶಗಳ ಮೊತ್ತವೆಂದರೂ ತಪ್ಪಾಗಲಿಕ್ಕಿಲ್ಲ. ಸಮುದಾಯದಲ್ಲಿ ಬಂಧುತ್ವ ಬೆಳೆಯಲು ಪೂರ್ವಜರಿಂದ ಬಂದ ಸ್ತರವಿನ್ಯಾಸ ಮಾದರಿಯ ವರ್ಗೀಕರಣ ಕುಲ ಬಳಿ, ಬೆಡಗು, ಗೋತ್ರಗಳ ರೂಪದಲ್ಲಿ ಸೃಷ್ಟಿಯಾಗುತ್ತವೆ. ಇಂತಹ ಕುಲ/ಬಳಿ/ಬೆಡಗು/ಗೋತ್ರಗಳನ್ನು ಒಳಗೊಂಡ ಸಮುದಾಯದ ಬಂಧುತ್ವ ಕುರಿತಂತೆ ಇರಾವತಿ ಕರ್ವೆ ಎಂಬ ಸಮಾಜಶಾಸ್ತ್ರಜ್ಞೆ ಸೂಕ್ಷ್ಮವಾಗಿ ಅಧ್ಯಯನ ಮಾಡಿರುವರು.

ಲಾಳಗೊಂಡರಲ್ಲಿ ಗೋತ್ರ ಮತ್ತು ಬೆಡಗುಗಳು ಇರುವುದಿಲ್ಲ ಲಿಂಗಾಯಿತ ಲಾಳಗೊಂಡರು ಇತರೆ ಲಿಂಗಾಯಿತರಂತೆ ಶಿವಭಕ್ತರು, ಶಿವಾರಾಧಕರು. ಲಿಂಗಾಯತ ಲಾಳಗೊಂಡರು ಸಮುದಾಯ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿದ್ದು, ತಂದೆಯೇ ಕುಟುಂಬದ ಎಲ್ಲಾ ವ್ಯವಹಾರ ಮಾಡುತ್ತಾರೆ. ಮಹಿಳೆಯರಿಗೆ ಅಷ್ಟೊಂದು ವ್ಯವಹಾರ ಸ್ವಾತಂತ್ರ್ಯವಿರುವುದಿಲ್ಲ. ವ್ಯವಹಾರಿಕವಾಗಿ ಹೆಣ್ಣು ಮುಂದುವರೆದರೆ ಅವಲಕ್ಷಣವೆಂಬುದು ಇಂದಿಗೂ ಗ್ರಾಮೀಣ ಸಮುದಾಯದ ಮನಸ್ಥಿತಿಯಾಗಿದೆ. ತಂದೆಯ ನಂತರ ಸ್ಥಾನ ಆ ಕುಟುಂಬದ ಹಿರಿಯ ಮಗನದಾಗಿರುತ್ತದೆ. ಆದರೆ ಧಾರ್ಮಿಕ ಹಾಗು ಸಾಮಾಜಿಕ ಕಾರ್ಯಕಲಾಪಗಳಲ್ಲಿ ತಂದೆತಾಯಿಯ ಬಳಿಕ ಹಿರಿಅಣ್ಣನಿಗೆ ಹಿರಿಯಸೊಸೆಗೆ ಆದ್ಯತೆಯಿರುತ್ತದೆ. ಸಾಮಾನ್ಯವಾಗಿ ಅವಿಭಕ್ತಕುಟುಂಬ ಹೆಚ್ಚಾಗಿದ್ದರು ಇತ್ತೀಚ್ಚೆಗೆ ಇತರೆ ಸಮಾಜದವರಂತೆ ವಿಭಕ್ತ ಕುಟುಂಬಗಳಾಗುತ್ತಿವೆ.

## ೪.೪ ವಾರ್ಷಿಕಾವರ್ತನ ಆಚರಣೆಗಳು

## ಲಾಳಗೊಂಡರ ದೇವರುಗಳು ಆಥವಾ ದೈವಗಳು

ಸಾಮಾಜಿಕ ದೃಷ್ಟಿಕೋನದಲ್ಲಿ ದೇವರ ಕಲ್ಪನೆಗಳು ಮತ್ತು ಸಾಮಾಜಿಕ ರಚನೆಯ ನಡುವಿನ ಸಂಬಂಧ ವಿಶ್ಲೇಷಣೆಯ ಕುರಿತು ಚರ್ಚಿಸುವಾಗ ದೇವರ ಕಲ್ಪನೆಗಳು ಮತ್ತು ಸಾಮಾಜಿಕ ರಚನೆಯ ನಡುವಿನ ಸಂಬಂಧ ಸಾಂದರ್ಭಿಕ ಸಂಬಂಧವಿದೆಯೇ ಎಂಬ ಪ್ರಶ್ನೆ ಮೂಡುತ್ತದೆ. "ದೇವರಪರಿಕಲ್ಪನೆಯ ಮೂಲವು ಸಮಾಜದಲ್ಲಿ ಅಸ್ತಿತ್ವದಲ್ಲಿದೆ ಮತ್ತು ಸಮಾಜದ ಜನರ ಅನುಭವಗಳಿಂದ ಈ ಪರಿಕಲ್ಪನೆಯನ್ನು ನೇರವಾಗಿ ರಚಿಸಲಾಗಿದೆ ಎಂದು ನಂಬುತ್ತಾರೆ"(ಬೌಕರ್೧೯೭೩:೭೪). ಹಾಗೇ ಕಾಮ್ಟ್ ತನ್ನ ಮೂರು ಹಂತದ ಸಿದ್ಧಾಂತದಲ್ಲಿ ಅರ್ಥೈಸಲ್ಪಟ್ಟರೆ, ಮಾರ್ಕ್ಸನು ದೇವರ ಪರಿಕಲ್ಪನೆಯು ವರ್ಗಸಿದ್ಧಾಂತದ ಭಾಗವಾಗಿದೆ ಮತ್ತು ಅದರ ಅರ್ಥ ಇದು ಸಾಮಾಜಿಕ ವರ್ಗಗಳಿಂದ ಪ್ರಭಾವಿತವಾಗಿದೆ (ರಿಟ್ಜರ್, ೨೦೦೬, ೧೫).

ಆದಿವಾಸಿ ಮಾನವ ಅಲೆಮಾರಿಯಾಗಿ ಪ್ರಕೃತಿಯ ಮಡಿಲಲ್ಲಿ ಜೀವನ ಸಾಗಿಸುತ್ತಿದ್ದ ಕಾಲದಲ್ಲಿ ಪ್ರಾಕೃತಿಕ ವಿಕೋಪಗಳಾದ ಗಾಳಿ, ಚಳಿ, ಬಿಸಿಲು, ಗುಡುಗು, ಮಿಂಚು, ಸಿಡಿಲು, ಭೂಕಂಪ, ಬೆಂಕಿ, ಬಿರುಗಾಳಿ, ಸುಂಟರಗಾಳಿ, ಪ್ರವಾಹಗಳು ಮಾನವನನ್ನು ಭಯಭೀತನನ್ನಾಗಿಸಿದವು ಆಗ ಮಾನವ ಹೆದರಿಕೆಯುಂಟುಮಾಡುವ ಪ್ರಕೃತಿ ಶಕ್ತಿಗೆ ಶರಣಾಗತನಾಗಿ ಭಯ ಭಕ್ತಿಯಿಂದ ಅವುಗಳನ್ನು ಆರಾಧನೆ ಮಾಡತೊಡಗಿದನು. ಹೀಗೆ ಆಚರಣೆಗೆ ಬಂದ ಆರಾಧನೆ ಸಾಮೂಹಿಕವಾಗಿ ಸಮುದಾಯಗಳಿಗೆ ಅನ್ವಯವಾಯಿತು. ಪ್ರಕೃತಿಯ ಆರಾಧನೆಯು ಮುಂದೆ ಆಚರಣೆಗಳಾಗಿ ನಿರಂತರವಾದವು. ನಾಗರಿಕತೆಯ ಬೆಳವಣಿಗೆಯಿಂದ ಅವುಗಳು ಮೂರ್ತಿ ಸ್ವರೂಪ ಪಡೆದು ಗ್ರಾಮ, ಪಟ್ಟಣಗಳಲ್ಲಿ ಆರಾಧಿಸಲ್ಪಟ್ಟವು. ಗ್ರಾಮಗಳಲ್ಲಿ ಆರಾಧಿಸಲ್ಪಟ್ಟ ದೇವರು ಗ್ರಾಮದೇವತೆಗಳಾದವು. ಆದರೆ ನಾಡಿನ ಸಂಪರ್ಕದಿಂದ ದೂರ ಉಳಿದ ಬುಡಕಟ್ಟುಗಳು ಗೆಡ್ಡೆ ಗೆಣಸು ಸಂಗ್ರಹಿಸುವಾಗ, ಮೀನು ಹಿಡಿಯುವಾಗ, ಬೇಟೆಯಾಡುವಾಗ ತಮಗೆ ಎದುರಾದ ಪ್ರಕೃತಿ ಶಕ್ತಿಗಳಾದ ಗಾಳಿ, ಬೆಳಕು, ನೀರುಗಳ ಶಕ್ತಿಯನ್ನು ಗ್ರಹಿಸಿ, ಅವುಗಳಿಗೆ ಭಯ–ಭಕ್ತಿ ತೋರಿಸಿದರು. ಇದಕ್ಕಾಗಿ ಮರ, ಹುತ್ತ ಕಲ್ಲುಗಳನ್ನು ಅವುಗಳ ಪ್ರತಿರೂಪವಾಗಿ ಪೂಜಿಸುತ್ತಿದ್ದರು. ಕ್ರಮೇಣ ಗಾಳಿ ನೀರಿನ ಜೊತೆಗೆ ಭೂಮಿ ಆಕಾಶಗಳನ್ನು ಸೇರಿಸಿ ವೈದಿಕರು ಪಂಚಭೂತಗಳೆಂದು ಕರೆದರು.

ಬುಡಕಟ್ಟುಗಳು ನಗರದಿಂದ ದೂರ ಉಳಿದು ಕಾಡುಗಳಲ್ಲಿಯೇ ನೆಲೆಸಿದವು. ಬುಡಕಟ್ಟು ಜನರು ಅವರ ಪೂರ್ವಜರ ಆತ್ಮಗಳನ್ನೇ ಪೂಜಿಸುತ್ತಿದ್ದರು. ಈ ಆತ್ಮಗಳ ಪೂಜಾವಿಧಾನವನ್ನೇ ಇ.ಬಿ.ಟೇಲರ್‌ರವರು ಅನಿಮಿಸಂ (ಬುಡಕಟ್ಟುಧರ್ಮ)ಎಂದು ಹೇಳುವರು. ಮಾನವನ ಆಚರಣೆಗಳಲ್ಲಿ ಅನಿಮಿಸಂ ಪುರಾತನವಾಗಿದ್ದು ಮೊದಲನೆಯ ಆಚರಣೆ ಅಥವಾ ಆರಾಧನೆ ಎಂದಿದ್ದಾರೆ. ಇವನು ಆತ್ಮಗಳನ್ನು Free Soul ಮತ್ತು Body soul ಎಂದು ವಿಂಗಡಿಸಿ Free Soul ಅಂದರೆ ಸತ್ತ

ವ್ಯಕ್ತಿಯ ಆತ್ಮ ದೇಹದಿಂದ ದೂರವಾದರೂ ಇದ್ದು ವ್ಯಕ್ತಿಗಳ ಮಧ್ಯೆ ಜೀವಂತವಾಗಿರುತ್ತವೆ ಎಂದು ನಿದರ್ಶನಗಳ ಮೂಲಕ ಸಾಬೀತುಪಡಿಸುತ್ತಾರೆ (ಇ ಬಿ ಟೇಲರ್:೧೮೭೧:೪೧೦). ಇಂತಹ ಅನಿಮಿಸಂನ್ನು ನಾವು ಇಂದು ಹಿರಿಯರ ಹಬ್ಬ ಎಂದು ವಿವಿಧ ಸಮುದಾಯಗಳಲ್ಲಿ ಅವರದೇ ಆದ ರೀತಿಗಳಲ್ಲಿ ಆಚರಿಸುವುದನ್ನು ಕಾಣಬಹುದು. ಸಮಾಜದ ವಿಕಾಸವು ಮುಂದುವರೆದು ಬುಡಕಟ್ಟುಗಳು ಸಾಂಸ್ಕೃತಿಕ ಪ್ರಭುತ್ವಕ್ಕೆ ಒಳಗಾಗಬೇಕಾಯಿತು. ಕಾಡುನಾಡಾದಾಗ ಶೈವೀಕರಣ, ವೈಷ್ಣವೀಕರಣ ಪ್ರಕ್ರಿಯೆಗಳು ಬುಡಕಟ್ಟುಗಳ ಮೇಲೆ ಪ್ರಭಾವ ಬೀರಿ ದೇವ–ದೇವತೆಗಳ ಆರಾಧನೆಗೆ ಒಳಗಾಗಬೇಕಾಯಿತು. ಪ್ರಕೃತಿ ಆರಾಧನೆ ಮೂರ್ತಿ ರೂಪ ಪಡೆದಾಗ ಪುರುಷ–ಸ್ತ್ರೀ ದೈವಗಳು ಅಸ್ತಿತ್ವಕ್ಕೆ ಬಂದವು.

ಲಾಳಗೊಂಡರು ಒಂದುಕಾಲದಲ್ಲಿ ಸರ್ವಚೇತನವಾದಿಗಳಾಗಿದ್ದವರು. ಕಾಲಾಂತರದಲ್ಲಿ ಶೈವ ವೈಷ್ಣವದೈವಗಳ ಪ್ರಭಾವಕ್ಕೊಳಗಾಗಿ ಇನ್ನೂ ಕೆಲವರು ಶೈವರಾದರೆ ಹಲವರು ವೈಷ್ಣವರಾದರು. ಇತರೆ ಲಿಂಗಾಯಿತರಂತೆ ಶಿವಭಕ್ತರು, ಶಿವಾರಾಧಕರು. ಪ್ರತಿನಿತ್ಯ ಎರಡುಬಾರಿ ಲಿಂಗಪೂಜೆ ಮಾಡಿಕೊಳ್ಳುವ ರೂಡಿಯಿದೆ. ಕುಲದೇವತಾ ವೈಶಿಷ್ಟತೆ ಕಂಡು ಬರುತ್ತಿಲ್ಲ ಪ್ರತಿಯೊಂದು ಕುಟುಂಬಗಳು ತಮ್ಮದೇ ಮನೆ ದೇವರನ್ನು ಹೊಂದಿ ಆರಾಧಿಸುತ್ತಾರೆ. ಶೈವದೈವಗಳೆಂದರೆ...

**ಅಮರೇಶ್ವರ ದೇವಾಲಯ**

ಈ ದೇವಾಲಯವು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ದೇವರಾಭೂಪುರ್ ಗ್ರಾಮದಲ್ಲಿದೆ. ಲಿಂಗಸಗೂರಿನಿಂದ ೧೮ ಕಿ ಮೀ ದೂರದಲ್ಲಿರುವ ಈ ದೇವಾಲಯಕ್ಕೆ ಗುರುಗುಂಟ ಅಮರೇಶ್ವರ ಎಂದೂ ಸಹ ಕರೆಯಲಾಗುತ್ತದೆ. ಇದು ಶಿವಲಿಂಗ ವಿಗ್ರಹವಾಗಿದೆ ಮತ್ತು ಫಾಲ್ಗುಣ ತಿಂಗಳಲ್ಲಿ ಹೋಳಿ ಹುಣ್ಣಿಮೆಯ ದಿನದಂದು ಇದರ ವಾರ್ಷಿಕ ಉತ್ಸವ ಜರುಗುತ್ತದೆ. ಈ ಭಾಗದ ಲಾಳಗೊಂಡ ಲಿಂಗಾಯತ ಸಮುದಾಯದವರು ಅಮರೇಶ್ವರ(ಶಿವ)ನನ್ನು ಆರಾಧಿಸುವರು.

**ಬಾಗೇವಾಡಿ ಬಸವಣ್ಣ**

ಈ ದೇವಾಲಯವು ಬಿಜಾಪುರ ಜಿಲ್ಲೆಯ ಬಿಜಾಪುರ ತಾಲೂಕಿನ ಬಾಗೇವಾಡಿಯಲ್ಲಿದೆ. ಚಾಲುಕ್ಯ ವಂಶದ ಆಳ್ವಿಕೆಯಲ್ಲಿ ೧೧ನೇ ಶತಮಾನದಲ್ಲಿ ಈ ಬಸವೇಶ್ವರ ದೇವಸ್ಥಾನವನ್ನು ನಿರ್ಮಿಸಿದರು. ಬಸವನಬಾಗೇವಾಡಿಯು ಇಂಗಲೇಶ್ವರ ಬಾಗೇವಾಡಿಯೆಂದು ಸಹ ಗುರುತಿಸಲ್ಪಡುತ್ತದೆ. ಇದು ಬಿಜಾಪುರದಿಂದ ೪೨ ಕಿ ಮೀ ದೂರದಲ್ಲಿದೆ. ಇದು ಬಿಜಾಪುರದ ಆದಿಲ್‌ಶಾಹಿ ರಾಜವಂಶದ ರಾಜಧಾನಿಯಾಗಿತ್ತು. ಅದರಲ್ಲಿ ಬಾಗೇವಾಡಿ ಅವಿಭಾಜ್ಯ ಭಾಗವಾಗಿದೆ. ೧೨ ನೇ ಶತಮಾನದ ಸಮಾಜ ಸುಧಾರಕ ಬಸವೇಶ್ವರನ ಜನ್ಮಸ್ಥಳ ಕೂಡ ಇದಾಗಿದೆ. ಬಸವೇಶ್ವರರ ಸಾಮಾಜಿಕ ಮೌಢ್ಯಗಳ ವಿರುದ್ಧದ ಕ್ರಾಂತಿಯಿಂದಾಗಿ ಅವರ ಹುಟ್ಟೂರಾದ ಬಾಗೇವಾಡಿಯು ಬಸವನಬಾಗೇವಾಡಿಯೆಂದು ಪ್ರಸಿದ್ಧಿ ಪಡೆದಿದೆ. ಈ ಭಾಗದ ಲಾಳಗೊಂಡ ಸಮುದಾಯದ ಅನೇಕರು ಬಸವ ತತ್ವಗಳ ಅನುಯಾಯಿಗಳಾಗಿದ್ದು ಈ ದೇವಸ್ಥಾನದ ಭಕ್ತರಾಗಿದ್ದಾರೆ.

**ಬೂದಿಹಾಳು ಬಸವಣ್ಣ**

ಬೂದಿಹಾಳು ಬಸವಣ್ಣ ಅಥವಾ ಬೂದಿಹಾಳ್ ಕಲ್ಯಾಣ ಬಸವೇಶ್ವರ ದೇವಾಲಯವು ಈಗಿನ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ, ಬೂದಿಹಾಳದಲ್ಲಿದೆ. ಈ ಹಳ್ಳಿಯ ಸುತ್ತಮುತ್ತಲಿನ ಲಿಂಗಾಯತ ಸಮುದಾಯದವರು ಬಸವಣ್ಣ ದೇವರನ್ನು ಆರಾಧಿಸುವರು. ಹಾವೇರಿ ಜಿಲ್ಲೆಯಲ್ಲಿನ ಲಾಳಗೊಂಡ ಸಮುದಾಯದವರು ಇಲ್ಲಿನ ದೇವರನ್ನು ಪೂಜಿಸುವರು.

**ಕರಿಬಸವೇಶ್ವರ**

ಕರಿಬಸವೇಶ್ವರ ಅಥವಾ ಕರಿಬಸವಜ್ಜಯ್ಯ ಎಂದೇ ಪ್ರಸಿದ್ಧಿಯಾಗಿರುವ ಈ ದೇವಾಲಯವು ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ ಮಲೆಬೆನ್ನೂರು ಸಮೀಪದ ಉಕ್ಕಡಗಾತ್ರಿಯಲ್ಲಿದೆ. ಕರಿಬಸವಜ್ಜಯ್ಯರವರು ಮೌಢ್ಯಗಳ ಬಗ್ಗೆ ಜನರಲ್ಲಿರುವ ನಂಬಿಕೆಗಳನ್ನು ಹೋಗಲಾಡಿಸುವಲ್ಲಿ ಪವಾಡ ಪುರುಷನಾಗಿ ಉಕ್ಕಡಗಾತ್ರಿಯ ಕರಿಬಸವಜ್ಜಯ್ಯ ಎಂದು ಪ್ರಸಿದ್ಧಿ ಪಡೆದಿರುವ ಕರಿಬಸವೇಶ್ವರನ ಭಕ್ತರು ಅಪಾರ, ಹರಿಹರ, ದಾವಣಗೆರೆ, ಚನ್ನಗಿರಿ, ಹೊನ್ನಾಳಿ, ಶಿವಮೊಗ್ಗ,ರಾಣೆಬೆನ್ನೂರು, ಹಾವೇರಿ ನಗರಗಳ ಹೆಚ್ಚಿನ ಜನರು ಕರಿಬಸವೇಶ್ವರನ ಆರಾಧಕರಾಗಿದ್ದಾರೆ.

**ಕುರುವತ್ತಿಬಸವೇಶ್ವರ**

ಕುರುವತ್ತಿ ಬಸವೇಶ್ವರ ದೇವಾಲಯವು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಕುರುವತಿ ಎಂಬಲ್ಲಿದೆ. ಇದು ಕರ್ನಾಟಕದ ಪುರಾತನ ಮತ್ತು ಐತಿಹಾಸಿಕ ದೇವಾಲಯಗಳಲ್ಲಿ ಒಂದಾಗಿದೆ. ಈ ದೇವಾಲಯವು ತುಂಗಭದ್ರ ನದಿಯ ದಡದಲ್ಲಿದ್ದು ಹಲವಾಗಲುದಿಂದ ೧೦ ಕಿ ಮೀ ಮತ್ತು ಮೈಲಾರದಿಂದ ೨ ಕಿ ಮೀ ಮತ್ತು ರಾಣೆಬೆನ್ನೂರಿನಿಂದ ೩೬ ಕಿ ಮೀ ಮತ್ತು ಬೆಂಗಳೂರಿನಿಂದ ೩೨೬ ಕಿ ಮೀ ದೂರದಲ್ಲಿದೆ. ಈ ದೇವಸ್ಥಾನವು ೬೦೦ ವರ್ಷಗಳಷ್ಟು ಇತಿಹಾಸವನ್ನು ಹೊಂದಿದೆ. ವಿಜಯನಗರ ವಾಸ್ತು ಶೈಲಿಯ ಪ್ರಕಾರ ಇದರ ಕಾಲಾವದಿ ೧೩೩೬-೧೫೬೫ ಎಂದು ಹೇಳಲಾಗುತ್ತದೆ. ಈ ಬಸವೇಶ್ವರನ ವಿಗ್ರಹವು ೧೦ ಅಡಿ ಉದ್ದ ಮತ್ತು ೯ ಅಡಿ ಎತ್ತರದಲ್ಲಿದೆ. ಇದರ ಪ್ರವೇಶದ್ವಾರದಲ್ಲಿ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನವಿದ್ದು ೯೦೦ ವರ್ಷ ಹಳೆಯದಾಗಿದೆ ಹಾಗೂ ಇದು ಚಾಲುಕ್ಯ ವಾಸ್ತು ಶೈಲಿಯಲ್ಲಿದೆ. ಇದರ ಉತ್ಸವವು ಪ್ರತಿ ವರ್ಷ ಮಹಾಶಿವರಾತ್ರಿ ಕಾಲದಲ್ಲಿ ನಡೆಯುತ್ತದೆ. ಇದನ್ನು ಕಾರ್ ಉತ್ಸವ ಅಥವಾ ರಥೋತ್ಸವ ಎಂದು ಕರೆಯಲಾಗುತ್ತದೆ. ಈ ಭಾಗದ ಸುತ್ತಮುತ್ತಲಿನ ಮತ್ತು ಹೊರಭಾಗದ ದೂರದ ಲಿಂಗಾಯತ ಸಮುದಾಯದ ಅಪಾರ ಭಕ್ತ ಸಮೂಹವನ್ನು ಈ ದೇವಾಲಯವು ಒಳಗೊಂಡಿದೆ. ಲಾಳಗೊಂಡರು ನಂದಿಯ (ಬಸವ) ಆರಾಧಕರಾಗಿರುವುದರಿಂದ ಹೆಚ್ಚಾಗಿ ಈ ದೇವಸ್ಥಾನಕ್ಕೆ ನಡೆದುಕೊಳ್ಳುವರು.

**ಕುರುಗೋಡುಬಸವೇಶ್ವರ**

ಕುರುಗೋಡು ಬಸವೇಶ್ವರ ದೇವಸ್ಥಾನವು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಕುರುಗೋಡು ಪಟ್ಟಣದಲ್ಲಿದೆ. ಬಳ್ಳಾರಿಯಿಂದ ೩೦ ಕಿ ಮೀ ಅಂತರದಲ್ಲಿದೆ. ನಂದಿ ಅಥವಾ ನಡೇಶ್ವರ ಎಂದು ಕರೆಯಲ್ಪಡುವ ದೊಡ್ಡ ಬುಲ್ ವಿಗ್ರಹವು ಏಕಶಿಲೆಯ ಶಿಲೆಗಳಿಂದ ಕೆತ್ತಲ್ಪಟ್ಟದೆ ಮತ್ತು ೧೨ಅಡಿ ಎತ್ತರವಾಗಿದೆ. ಕುರುಗೋಡು ಪ್ರದೇಶದ ಇತಿಹಾಸವು ಶಿಲಾಯುಗದ ಕಾಲದ್ದದೆಂದು ಶೋಧಿಸಲಾಗಿದೆ. ಮಹಾಭಾರತದ ಕಾಲದಲ್ಲಿ ಕುಂತಳ ರಾಜ್ಯದ ರಾಜಧಾನಿಯಾಗಿದ್ದ ಇಲ್ಲಿ, ಸುಪ್ರಸಿದ್ಧ ಅರಸ ಚಂದ್ರಹಾಸನು ರಾಜ್ಯಭಾರ ಮಾಡಿದ್ದನೆಂದು ಪ್ರತೀತಿ. ನಂತರ ಈ ಪ್ರದೇಶವನ್ನು ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣದ ಚಾಲುಕ್ಯರ ಆಡಳಿತಕ್ಕೊಳಪಟ್ಟಿತ್ತು. ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಸಿಂದ್ ವಂಶದ ೧೧ ಅರಸರು ಇಲ್ಲಿ ಕ್ರಿ ಶ ೯೫೦ ರಿಂದ ೧೨೦೦ ವರೆಗೆ ಸುಮಾರು ೨೫೦ ವರ್ಷಗಳ ಕಾಲ ಆಳಿದ್ದಾರೆ.

ಕ್ರಿ ಶ ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಹಂಪಿಯಲ್ಲಿ ಸ್ಥಾಪಿಸಿದ ಹರಿಹರ ಬುಕ್ಕ ಸಹೋದರರ ಪಿತ ಸಂಗಮನು ಕುರುಗೋಡು ಮೂಲದವನೆಂದು ಇತ್ತೀಚಿನ ಸಂಶೋಧನೆಯಿಂದ ತಿಳಿದುಬಂದಿದೆ. ಈತನೇ ಕುರುಗೋಡಿನಲ್ಲಿ ಭವ್ಯವಾದ ಸಂಗಮೇಶ್ವರ ದೇವಾಲಯವನ್ನು ನಿರ್ಮಿಸಿದನು. ನಂತರ ವಿಜಯನಗರ ಸಾಮ್ರಾಜ್ಯದಲ್ಲಿ ವಿಲೀನವಾಗಿದ್ದ ಕುರುಗೋಡಿನಲ್ಲಿ ಹಂಪೆಯ ಅಧಿಪತಿ ಶ್ರೀ ಪಂಪಾಪತಿಗೆ ಅಭಿಮುಖವಾಗಿ ಎದುರು ಬಸವಣ್ಣನ ಸಂಕೇತವಾಗಿ ೧೨ ಅಡಿ ಎತ್ತರದ ದಕ್ಷಿಣಭಾರತದಲ್ಲೇ ೨ ನೇ ಅತಿದೊಡ್ಡದಾದ ದೊಡ್ಡಬಸವೇಶ್ವರನ ಬೃಹದಾಕಾರದ ಏಕಶಿಲಾ ಮೂರ್ತಿಯಾಗಿದೆ. ವಿಜಯನಗರದ ಸಾಮ್ರಾಟರು ಈ ದೇವಾಲಯಗಳಿಗೆ ಗ್ರಾಮ, ಭೂಮಿ, ಧಾನ ದತ್ತಿಗಳನ್ನು ನೀಡಿ ಸ್ಮರಣೀಯರಾಗಿದ್ದಾರೆ. ವಿಜಯನಗರ ಸಾಮ್ರಾಜ್ಯದ ಪತನದ ನಂತರ ವಿಜಾಪುರದ ಸುಲ್ತಾನರಿಗೆ ಸೇರಿದ್ದ ಈ ನಾಡನ್ನು ಅಂಡೇ ವಂಶದ ಅರಸರಾದ ಬಾಲದ ಹನುಮಪ್ಪನಾಯಕ ಮತ್ತು ಆತನ ವಂಶಸ್ಥರು ಕ್ರಿ ಶ ೧೫೬೯ ರಿಂದ ೧೭೭೫ ರ ವರೆಗೆ ರಾಜ್ಯಭಾರ ಮಾಡಿದ್ದಾರೆ. ಈ ವಂಶದ ದೇವಪ್ಪನಾಯಕನು ಸಿಂದರ ರಾಜಧಾನಿ ಸ್ಥಳವನ್ನು ಬಿಟ್ಟು ಈಶ್ವರ ಗುಡ್ಡದ ಮೇಲೆ ಕೋಟೆಯನ್ನು ನಿರ್ಮಿಸಿ ಹೊಸ ಪಟ್ಟಣವನ್ನು ೧೭೦೧ ರಲ್ಲಿ ನಿರ್ಮಿಸಿದನು. ೧೮ನೇ ಶತಮಾನದ ಉತ್ತರಾರ್ಧದಲ್ಲಿ ಸಿಂದಿಗೇರಿಯಿಂದ ಬಂದ ಶಿವ ಶರಣೆ ನೀಲಮ್ಮನವರು ಈ ಮಠದಲ್ಲಿ ವಾಸವಿದ್ದು ಅನೇಕ ಪವಾಡಗಳನ್ನು ಮಾಡಿ ಕುರುಗೋಡು ಪ್ರಸಿದ್ಧಿಪಟ್ಟಣವಾಗಲೆಂದು ಹರಸಿದ್ದಾಳೆ ಎನ್ನಲಾಗಿದೆ. ಶಿಲಾಯುಗದ ನೆಲೆಗಳು ವೈವಿಧ್ಯಮಯ ದೇವಾಲಯಗಳು, ಜೈನಬಸದಿಗಳು ಹಾಗೂ ಬೃಹದಾಕಾರದ ಶಿಲ್ಪಗಳು ಇಲ್ಲಿ ಕಾಣಬಹುದು.(ಹನುಮಂತರೆಡ್ಡಿ ವೈ, ಇತಿಹಾಸತಜ್ಞರು, ಕುರುಗೋಡು, ಮೋ: ೯೪೪೮೮೫೦೪೩೨). ಮೂಲತಃ ಲಾಳಗೊಂಡ ಸಮುದಾಯದವಳಾದ ನೀಲಮ್ಮಳು ಕುರುಗೋಡಿನಲ್ಲಿ ನೆಲೆಸಿರುವುದರಿಂದ ಹೆಚ್ಚಿನ ಲಾಳಗೊಂಡ ಸಮುದಾಯದವರು ಕುರುಗೋಡು ಬಸವೇಶ್ವರನ ಆರಾಧಕರಾಗಿದ್ದಾರೆ.

**ಗುರುಕೊಟ್ಟೂರುಬಸವೇಶ್ವರ**

ಶ್ರೀ ಗುರುಕೊಟ್ಟೂರೇಶ್ವರ ದೇವಸ್ಥಾನವು ಕರ್ನಾಟಕದ ಇತಿಹಾಸ ಪ್ರಸಿದ್ಧಿಗಳಲ್ಲಿ ಒಂದು. ಇದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಿಂದ ೧೯ ಕಿ ಮೀ ದೂರದ ಕೊಟ್ಟೂರಿನಲ್ಲಿದೆ. ಈ ದೇವಸ್ಥಾನವನ್ನು ಕೊರರೇಶ್ವರ ದೇವಸ್ಥಾನವೆಂದೂ ಕರೆಯಲಾಗುತ್ತಿತ್ತು. ಇದರ ಪೌರಾಣಿಕ ಕತೆಯಂತೆ ಹಿಂದುಳಿದ ಮತ್ತು ವೀರಶೈವ ಧರ್ಮವು ಬೆದರಿಕೆಯಲ್ಲಿದ್ದಾಗ ಪರಲೋಕದಿಂದ ಶಿವ ಮತ್ತು ಪಾರ್ವತಿ ನರಿಯನ್ನು ಶಿಖರಪುರಕ್ಕೆ ಹೋಗಲು ಮತ್ತು ಮುಗ್ಧ ಜನರನ್ನು ರಕ್ಷಿಸಲು ಆದೇಶಿಸಿದರು ಆದ್ದರಿಂದ ನಂದಿಯು ಒಂದು ವಿಧವಾದ ಸಂತನಾಗಿ ವೇಷ ಧರಿಸಿ ಶಿಕಾರಪುರವನ್ನು ತಲುಪಿದನು. ಈ ಸಂತನನ್ನು ಜನರು ಕೊರರೇಶ್ವರ ಎಂದು ಕರೆಯುತ್ತಾರೆ.(ಕೊಟ್ಟು ಅಥವಾ ಕೊಡು ಕನ್ನಡದಲ್ಲಿ ನೀಡಿ ಹಾಗೂ ಈಶ್ವರ ಎಂದರೆ ಶಿವ) ಈ ಸಂತನು ಮುಂದೆ ಜನರಿಗೆ ಆರ್ಶೀವಧಿಸಿ ಅವರ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಿದನು. ಹೀಗೆ ಇತಿಹಾಸ ಪ್ರಸಿದ್ಧಿ ಹೊಂದಿ ಭಕ್ತರ ಭಾಯಿಯಲ್ಲಿ ಓಂ ಶ್ರೀಗುರುಕೊತೇರೇಶ್ವರನಮಃ ಮುಂದೆ ಕೊಟ್ಟೂರೇಶ್ವರನಾಗಿ ಪ್ರಸಿದ್ಧಿಪಡೆಯಿತು ಮತ್ತು ಈ ಪ್ರದೇಶವು ಮುಂದೆ ಕೊಟ್ಟೂರು ಎಂದು ಪ್ರಸಿದ್ಧಿಹೊಂದಿತು. ಇದು ಒಟ್ಟು ೪ ದೇವಾಲಯಗಳನ್ನು ಒಳಗೊಂಡಿದೆ. ೧) ದೊಡ್ಡಮಠ ೨) ಮುರ್ಕಾಲ ಮಠ ೩) ಗಚಿನಾ ಮಠ ೪) ತೊಟ್ಟಿಲ ಮಠಗಳು ಪ್ರಸಿದ್ಧವಾದವುಗಳು. ಈ ಅಪಾರ ಭಕ್ತಿಸಮೂಹವನ್ನು ಹೊಂದಿರುವ ಈ ದೇವಾಲಯದ ಜಾತ್ರಾಮಹೋತ್ಸವವು ಪ್ರತಿ ವರ್ಷ ಮಹಾಲಯ ಅಮವಾಸ್ಯೆಯ ಮೊದಲು ಅಂದರೆ ಫೆಬ್ರವರಿಯಲ್ಲಿ ಜರುಗುತ್ತದೆ. ಉತ್ತರ ಕರ್ನಾಟಕದಲ್ಲಿ ಕುರುಗೋಡು ನೀಲಮ್ಮ ನಿರ್ಮಿಸಿದ ೮೦೦ ಮಠಗಳಲ್ಲಿ ಈ ಮಠವು ಒಂದು ಎಂಬ ಪ್ರತೀತಿಯು ಉಂಟು ಆದ್ದರಿಂದ ಲಾಳಗೊಂಡ ಸಮುದಾಯದ ಜನರು ಕೊಟ್ಟೂರು ಬಸವೇಶ್ವರ ದೇವಸ್ಥಾನಕ್ಕೆ ಹೆಚ್ಚಾಗಿ ನಡೆದುಕೊಳ್ಳುವರು. ದಾವಣಗೆರೆ, ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ, ತುಮಕೂರು ಭಾಗದ ಲಾಳಗೊಂಡ ಸಮುದಾಯದವರು ಶ್ರೀಗುರುಕೊಟ್ಟೂರೇಶ್ವರನ್ನು ಮನೆದೇವರಾಗಿ ಆರಾಧಿಸುವರು.

**ಕೊಡೆಕಲ್ಲುಬಸವೇಶ್ವರ**

ಈಗಿನ ಯಾದಗಿರಿ ಜಿಲ್ಲೆಯ ಸುರುಪುರ ತಾಲ್ಲೂಕಿನ ಕೊಡೆಕಲ್ಲಿನಲ್ಲಿ ಈ ದೇವಸ್ಥಾನವಿದೆ. ಶೈವ ದೇವಸ್ಥಾನದ ವಾಸ್ತುಶಿಲ್ಪಗಳನ್ನು ಈ ದೇವಾಲಯದಲ್ಲಿ ಕಾಣಬಹುದು. ೧೨ನೇ ಶತಮಾನದ ಬಸವಣ್ಣನವರ ಸಾಮಾಜಿಕ ಕ್ರಾಂತಿಯಿಂದಾಗಿ ಇಲ್ಲಿನ ಜನರು ಬಸವೇಶ್ವರರ ಅನುಯಾಯಿಗಳಾದರು ಮತ್ತು ಅವರ ಆರಾಧನೆಗಾಗಿ ಕಟ್ಟಿದ ದೇವಸ್ಥಾನವೇ ಕೊಡೆಕಲ್ಲು ಬಸವೇಶ್ವರ.

**ಮೇವುಂಡಿಬಸವೇಶ್ವರ**

ಈ ದೇವಸ್ಥಾನವು ಹಾವೇರಿ ಜಿಲ್ಲೆ ಹಾವೇರಿ ತಾಲ್ಲೂಕಿನ ಮೇವುಂಡಿ ಎಂಬ ಊರಿನಲ್ಲಿ ಇದೆ. ಇದಕ್ಕೆ ಮಂಡಿ ಗ್ರಾಮವೆಂತಲೂ ಕರೆಯುತ್ತಾರೆ ಹಾವೇರಿಯಿಂದ ೨೭ ಕಿ ಮೀ ದೂರದಲ್ಲಿದೆ.

ಮೇವುಂಡಿ ಗ್ರಾಮಕ್ಕೆ ರಾಣೆಬೆನ್ನೂರು, ಲಕ್ಷ್ಮೇಶ್ವರ, ಸವಣೂರು ನಗರಗಳು ಹತ್ತಿರವಿದ್ದು ಈ ನಗರಗಳ ಮತ್ತು ಸುತ್ತಮುತ್ತಲಿನ ಹಳ್ಳಿಯ ಜನರು ಈ ಮೇವುಂಡಿ ಬಸವೇಶ್ವರ ದೇವಾಲಯದ ಭಕ್ತರಾಗಿ ಬರುತ್ತಾರೆ.

**ನಾಗೋಲಿಬಸವಂತ**

ನಾಗೋಲಿಬಸವಂತ ದೇವಸ್ಥಾನವು ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ನಾಗೋಲಿ ಎಂಬ ಗ್ರಾಮದಲ್ಲಿದೆ. ಇದು ದೇವದುರ್ಗದಿಂದ ೧೨ ಕಿ ಮೀ ದೂರದಲ್ಲಿದೆ. ಇಲ್ಲಿನ ಬಸವಣ್ಣ ದೇವಾಲಯವನ್ನು ದೊಡ್ಡಕಾಚಾರಿ ಎಂಬುವವರು ನಿರ್ಮಿಸಿದರು. ಇಲ್ಲಿನ ಸುತ್ತಮುತ್ತಲಿನ ವಿವಿಧ ಸಮುದಾಯದವರು ಈ ದೇವಸ್ಥಾನದ ಈಶ್ವರನ ಲಿಂಗವನ್ನು ಪೂಜಿಸಿ ಆತನನ್ನು ಬಸವಂತ, ಬಸವೇಶ್ವರ, ಬಸವಣ್ಣ ಎಂಬ ಮುಂತಾದ ಹೆಸರುಗಳಿಂದ ಆರಾಧಿಸುವರು.

**ಉಳವಿ ಚನ್ನಬಸವೇಶ್ವರ**

ಈ ದೇವಾಲಯವು ಕರ್ನಾಟಕದ ಪ್ರಸಿದ್ಧ ಯಾತ್ರಾ ಕೇಂದ್ರಗಳಲ್ಲಿ ಒಂದು. ಇದು ಉತ್ತರಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟಗಳ ಒಂದು ಸುಂದರವಾದ ಸ್ಥಳದಲ್ಲಿ ದಟ್ಟಅರಣ್ಯದ ಮಧ್ಯದಲ್ಲಿ ಉಲುವಿಚನ್ನಬಸವೇಶ್ವರ ದೇವಸ್ಥಾನವಿದೆ. ಹುಬ್ಬಳ್ಳಿ, ಧಾರವಾಡ, ಬೆಳಗಾವಿ ಜಿಲ್ಲೆಯ ಲಾಳಗೊಂಡಲಿಂಗಾಯತರು ಹಾಗೂ ಇತರೆ ಲಿಂಗಾಯತರು ಈ ದೇವಸ್ಥಾನದ ಭಕ್ತರು. ೧೨ನೇ ಶತಮಾನದಲ್ಲಿ ಚನ್ನಬಸವಣ್ಣನವರು ಕಲ್ಯಾಣದಿಂದ ಉಳುವಿಗೆ ಭೇಟಿ ನೀಡಿದ್ದರು. ಚನ್ನಬಸವಣ್ಣನು ಬಸವಣ್ಣನ ಸೋದರಳಿಯ ೧೨ನೇ ಶತಮಾನದ ಅಗ್ರಗಣ್ಯ ಶರಣರಲ್ಲಿ ಇವರು ಒಬ್ಬರು. ಚನ್ನಬಸವಣ್ಣನು 'ಕರಾನಾ ಹಾಸುಜ್' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದು ಲಿಂಗಾಯತರ ಪವಿತ್ರ ಗ್ರಂಥಗಳಲ್ಲಿ ಒಂದಾಗಿದೆ. ೧೧೬೨ ರಲ್ಲಿ ಅಲ್ಲಮಪ್ರಭು ನಿರ್ಗಮನದ ನಂತರ ಕಲ್ಯಾಣದ ಅನುಭವಮಂಟಪದಲ್ಲಿ ಶೂನ್ಯ ಸಿಂಹಾಸನಕ್ಕೆ ಉತ್ತರಾಧಿಕಾರಿಯಾದರು ಕ್ರಿ ಶ ೧೧೬೭ ರಲ್ಲಿ ಕಲಚೂರಿ ರಾಜ ಬಿಜ್ಜಳನ ಹತ್ಯೆಯ ನಂತರ ಚನ್ನಬಸವಣ್ಣ ಮತ್ತು ಅವನ ಅನುಯಾಯಿಗಳು ವಚನ ಸಾಹಿತ್ಯವನ್ನು ರಕ್ಷಿಸಲು ಉಲವಿ(ಉಳವಿ)ಗೆ ವಲಸೆ ಹೋದರು. ಇಲ್ಲಿಯೇ ಅವರು ಸಮಾಧಿ ಹೊಂದಿದರು ಇವರ ಸಮಾಧಿಯ ಮೇಲೆ ನಂದಿಮುಖವನ್ನು ಇರಿಸಲಾಗಿದೆ. ಇಲ್ಲಿ ಮಲ್ಲಿಕಾರ್ಜುನ ಮತ್ತು ಸಂಗಮೇಶ್ವರ ದೇವಸ್ಥಾನಗಳು ಇವೆ.

**ಶರಣಬಸಪ್ಪ**

ಮೂಲತಃ ಜೇವರ್ಗಿ ತಾಲೂಕಿನ ಹರಳಗುಂಡಿ ಗ್ರಾಮದ ಬಸವಣ್ಣನು ಮುಂದೆ ಕಲಬುರ್ಗಿಗೆ ಬಂದು ನೆಲೆಸಿದರು. ಶರಣಬಸವೇಶ್ವರರಿಗೆ ಕಲಬುರ್ಗಿಯಲ್ಲಿ ನೆಚ್ಚಿನ ಶಿಷ್ಯರಾಗಿದ್ದರು. ಗುರುಶಿಷ್ಯರ ಅವಿನಾಭಾವ ಸಂಬಂಧ ಹಾಗೂ ಸಾಮರಸ್ಯಗಳನ್ನು ಸೂಚಿಸಲು ಶರಣಬಸಪ್ಪ ಹಾಗೂ ಶರಣ

ಬಸವೇಶ್ವರರ ಬೆಳ್ಳಿ ಮುಖಗಳುಳ್ಳ ಜೋಡಿ ಮೂರ್ತಿಯನ್ನು ಪ್ರಾತಿನಿಧಿಕವಾಗಿ ಪ್ರತಿಷ್ಠಾಪಿಸಿದ್ದು ಇಂದು ಇದೇ ಭಕ್ತರ ಆರಾಧನಾ ಬಿಂದುವಾಗಿದೆ. ಇಲ್ಲಿ ವಿಶಾಲವಾದ ಮಂಟಪವಿದ್ದು ೩೬ ಕಮಾನುಗಳನ್ನು ನಿರ್ಮಿಸಿದ್ದಾರೆ. ಶ್ರಾವಣ ಮಾಸದ ನಡುವಣ ಸೋಮುವಾರ ಶರಣಬಸವಣ್ಣನ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಅನೇಕ ಲಿಂಗಾಯತ ಸಮುದಾಯದವರು ಇಲ್ಲಿ ಭಾಗವಹಿಸುತ್ತಾರೆ.

**ಉರುಕುಂದಿಈರಣ್ಣ**

ಈ ದೇವಾಲಯವು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಉರುಕುಂಡ ಗ್ರಾಮದಲ್ಲಿರುವ ಶ್ರೀ ನರಸಿಂಹ ಎಣ್ಣಣ್ಣ ಸ್ವಾಮಿ ದೇವಾಲಯವು ಪ್ರಸಿದ್ದ ದೇವಾಲಯವಾಗಿದೆ. ಇಲ್ಲಿ ಪವಿತ್ರ ಪೀಪದ ಮರದ ಕೆಳಗೆ ವೀರಶೈವ ಧರ್ಮದ ಪ್ರಕಾರ ಪೂಜಿಸುವ ವೀರಭದ್ರಸ್ವಾಮಿ ಮತ್ತು ಲಕ್ಷ್ಮಿನರಸಿಂಹರ ವಿಗ್ರಹಗಳಿವೆ. ದಂತಕತೆಗಳ ಪ್ರಕಾರ ಎರ್ರಾನಾ ಅಥವಾ ವೀರಣ್ಣಾ ಎಂಬ ಹೆಸರಿನ ಹಿರನ್ಯಾ ಎಂಬ ಋಷಿ ಉರಕುಂಡ ಹಳ್ಳಿಯ ಪೀಪಲ್ ಮರದ ಕೆಳಗೆ ಪ್ರಾಯಶ್ಚಿತ್ತಕ್ಕಾಗಿ ಕುಳಿತಿದ್ದಾಗ ಅಲ್ಲಿಗೆ ಮೇಯಲೆಂದು ಬರುತ್ತಿದ್ದ ಹಸುಗಳೊಂದಿಗೆ ಬೆರೆತು ಅವುಗಳ ವಿಶ್ವಾಸ ಗಳಿಸಿದರು ಜೊತೆಗೆ ಹಳ್ಳಿಯ ಜನರು ಆತನ್ನು ಹಣ್ಣುಹಂಪಲುಗಳೊಂದಿಗೆ ನೋಡಲು ಬರುತ್ತಿದ್ದರು ಆ ಋಷಿಯು ಜನರ ಕಾಯಿಲೆಗಳಿಗೆ ಕಾಡಿನ ಮದ್ದುಗಳಿಂದ ಚಿಕಿತ್ಸೆಯನ್ನು ನೀಡಿ ಪ್ರಸಿದ್ದಿಯನ್ನು ಪಡೆದರು. ಮುಂದೆ ಆ ಋಷಿಯು ಒಂದು ದಿನ ಮಾಯವಾದನು ಮತ್ತು ಆತ ಕುಳಿತಿದ್ದ ಪೀಪಲ್ ಮರದ ಕೆಳಗೆ ಲಕ್ಷ್ಮೀನರಸಿಂಹನ ಮರದ ವಿಗ್ರಹವನ್ನು ಇಟ್ಟು ಹೋಗಿದ್ದು ಆ ನಂತರ ಜನರು ವೀರಣ್ಣಾನನ್ನು ಲಕ್ಷ್ಮೀನರಸಿಂಹನ ಅಪರಾವತಾರ ಎಂದು ನಂಬಿ ಆತನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಉರಕುಂದಿಈರಣ್ಣ ಎಂದು ಆರಾಧಿಸತೊಡಗಿದರು.

ಲಾಳಗೊಂಡ ಲಿಂಗಾಯತರು ಉರಕುಂದಿಈರಣ್ಣನ ಪರಮ ಭಕ್ತರು ಮತ್ತು ಮನೆದೇವರಾಗಿ ಆರಾಧಿಸುವರು ಇದಕ್ಕೆ ಸಾಕ್ಷಿಯಾಗಿ ಧಾರವಾಡದ ಮಾರಡಿಗಿ ಎಂಬ ಊರಿನಲ್ಲಿ ನೆಲೆಸಿರುವ ಲಾಳಗೊಂಡಲಿಂಗಾಯತ ಸಮುದಾಯದ ಅನೇಕರು ಉರಕುಂದಿ ಈರಣ್ಣನನ್ನು ಮನೆದೇವರಾಗಿ ಈಗಲೂ ಆರಾಧಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿದೆ. ಲಾಳಗೊಂಡರಲ್ಲದೇ ಹಲವು ಲಿಂಗಾಯತ ಸಮುದಾಯದವರು ಈ ದೇವರಿಗೆ ನಡೆದುಕೊಳ್ಳುವರು.

**ಎರಿತಾತ**

ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಚಳಗುರ್ಕಿ ಗ್ರಾಮದಲ್ಲಿ ಎರಿತಾತನ ದೇವಸ್ಥಾನವಿದೆ. ಬಳ್ಳಾರಿಯಿಂದ ೨೫ ಕಿ ಮೀ ದೂರದಲ್ಲಿದೆ. ಎರಿತಾತನು ಪವಾಡ ಪುರುಷನಾಗಿದ್ದು ೧೯೨೨ ರಲ್ಲಿ ಇಲ್ಲಿ ಜೀವಂತ ಸಮಾದಿ ಹೊಂದಿದ್ದಾನೆ. ಅನೇಕ ಪವಾಡಗಳನ್ನು ಮಾಡಿ ಜನರ ಕಷ್ಟಗಳನ್ನು ನಿವಾರಿಸುವಲ್ಲಿ ಯಶಸ್ವಿಯಾಗಿ ಇಂದಿಗೂ ಜೀವಂತನಾಗಿರುವನು ಎಂದು ನಂಬಲಾಗಿದೆ. ಪ್ರತಿ ವರ್ಷ ದಸರಾ ಸಮಯದಲ್ಲಿ ಎರಿತಾತನ ಜಾತ್ರಾಮಹೋತ್ಸವ ಜರುಗುತ್ತದೆ. ಇವರ ಹೆಸರಿನಲ್ಲಿ

ಅನೇಕ ಶಾಲಾಕಾಲೇಜುಗಳು, ದಾಸೋಹಗಳು ಇಂದಿಗೂ ಉಚಿತವಾಗಿ ನಡೆಯುತ್ತವೆ. ಬಳ್ಳಾರಿಯ ಲಾಳಗೊಂಡ ಸಮುದಾಯದವರು ಎರಿತಾತನ ಅನುಯಾಯಿಗಳಾಗಿದ್ದಾರೆ.

**ಮೈಲಾರಲಿಂಗ**

ಬಳ್ಳಾರಿಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಮೈಲಾರದಲ್ಲಿರುವ ಮೈಲಾರಲಿಂಗೇಶ್ವರವು ಶಿವನ ಅಪರಾವತಾರವಾಗಿರುವ ಹಿಂದೂ ದೇವರಲ್ಲಿ ಸುಪ್ರಸಿದ್ಧವಾದ ದೇವಾಲಯವಾಗಿದೆ. ಹೂವಿನಹಡಗಲಿ ತಾಲೂಕಿನಿಂದ ೩೬ ಕಿ ಮೀ ದೂರದಲ್ಲಿರುವ ಈ ದೇವಾಲಯವು ಹಾಲುಮತ, ಕುರುಬಗೌಡ ಸಮುದಾಯದ ಆರಾಧ್ಯದೈವವಾಗಿದೆ. ಇಲ್ಲಿನ ದಂತಕತೆಯ ಪ್ರಕಾರ ಮಲ್ಲಸುರ ರಾಕ್ಷಸನು ಮತ್ತು ಆತನ ಸಹೋದರರು ಬ್ರಹ್ಮನಿಂದ ಶಾಪಗ್ರಸ್ಥರಾಗಿ ಭೂಮಿಗೆ ಬಂದರು ಅವರು ಋಷಿಗಳಿಗೆ ಕಿರುಕುಳ ನೀಡಲು ಪ್ರಾರಂಭಿಸಿದರು ಆಗ ಋಷಿಗಳು ಶಿವನಲ್ಲಿ ಮೊರೆ ಹೋಗಲು, ಶಿವನು ತನ್ನ ೭ ಕೋಟಿ ಗೋರಗಳ ಪಡೆಗಳನ್ನು ತೆಗೆದುಕೊಂಡು ೧೦ ದಿನಗಳ ಕಾಲ ಮಲ್ಲಸುರ ಮತ್ತು ಆತನ ಸಹೋದರರೊಂದಿಗೆ ಹೋರಾಡಿ ಮಣಿಸಿದರು. ಇದರ ಪ್ರತೀತಿಯಾಗಿ ಇಂದಿಗೂ ಸಹ ಮೈಲಾರ ಲಿಂಗರ ಅನೇಕ ಭಕ್ತರು ಕಪ್ಪು ಚರ್ಮದ ಉಣ್ಣೆಯ ಉಡುಪನ್ನು ಧರಿಸಿ ಗೊರವರಾಗಿ ಮೈಲಾರಲಿಂಗೇಶ್ವರನಿಗೆ ಸೇವೆ ಸಲ್ಲಿಸುವರು. ಪ್ರತಿ ವರ್ಷ ಫೆಬ್ರುವರಿ ತಿಂಗಳಿನಲ್ಲಿ ಇದರ ಉತ್ಸವ ನಡೆದು ಕಾರಣೀಕದ ಹೇಳಿಕೆಗಳಿಗೆ ಪ್ರಸಿದ್ಧಿಯಾಗಿದೆ.

ದೊಡ್ಡಬಳ್ಳಾಪುರ ತಾಲೂಕಿನ ಲಾಳಗೊಂಡ ಲಿಂಗಾಯತರು ಇದರ ಆರಾಧಕರಾಗಿದ್ದಾರೆ. ಇದರ ಪ್ರತೀತಿಯಾಗಿ ಕೋಡಿಮಂಚೇನ ಹಳ್ಳಿಯಲ್ಲಿ ಮೈಲಾರ ದೇವಸ್ಥಾನವನ್ನು ಕಟ್ಟಿಸಿಕೊಂಡು ಅದರ ಆರಾಧನೆಯನ್ನು ಮಾಡುತ್ತಿರುವುದನ್ನು ಇಂದಿಗೂ ನಾವು ಕಾಣಬಹುದು.

**ಶ್ರೀಶೈಲ ಮಲ್ಲಿಕಾರ್ಜುನ**

ಆಂಧ್ರಪ್ರದೇಶದ ರಾಜ್ಯದ ಶ್ರೀಶೈಲಂನಲ್ಲಿ ಈ ದೇವಸ್ಥಾನವಿದ್ದು ದಕ್ಷಿಣಭಾರತದ ಪುರಾತನ ಮತ್ತು ಪವಿತ್ರ ಸ್ಥಳಗಳಲ್ಲಿ ಒಂದಾಗಿದೆ. ಇದು ಕೃಷ್ಣಾನದಿಯ ದಡದಲ್ಲಿದ್ದು ಹೈದರಾಬಾದ್‌ನಿಂದ ೨೦೧ ಕಿ ಮೀ ದೂರದಲ್ಲಿದೆ. ಇದರ ಇತಿಹಾಸವು ಆಂಧ್ರಪ್ರದೇಶದ ಆರಂಭಿಕ ರಾಜರಾಗಿದ್ದ ಸಾತವಾಹನರೊಂದಿಗೆ ಪ್ರಾರಂಭವಾಗುತ್ತದೆ ಎಂದು ಶಿಲಾರೂಪದ ಸಾಕ್ಷಿಗಳು ಬಹಿರಂಗಪಡಿಸುತ್ತವೆ. ನಂತರ ವಿಜಯನಗರದ ಅರಸರು, ಚಾಲುಕ್ಯರು, ಮರಾಠರಾಜರು ಮೊಗಲ್ ಚಕ್ರವರ್ತಿಗಳು ಆಳಿದ್ದರು ಎನ್ನಲಾಗಿದೆ. ಕರ್ನಾಟಕದ ಅನೇಕ ಲಿಂಗಾತಯತ ಸಮುದಾಯದವರು ಆಂಧ್ರದಲ್ಲಿನ ಶ್ರೀಶೈಲ ಮಲ್ಲಿಕಾರ್ಜುನನ ಭಕ್ತರಾಗಿರುವುದು ಲಿಂಗಾಯತರು ಆಂಧ್ರಪ್ರದೇಶದ ಮೂಲದಿಂದ ಬಂದವರೆಂಬುದಕ್ಕೆ ಸಾಕ್ಷಿಯಾಗಿದೆ. ಇಲ್ಲಿಗೆ ಬಂದನಂತರವೂ ಇಂದಿಗೂ ಶ್ರೀಶೈಲಮಲ್ಲಿಕಾರ್ಜುನನ ಅನುಯಾಯಿಗಳಾಗಿ

ಮನೆಯ ಆರಾಧ್ಯದೈವವಾಗಿ ಆರಾಧಿಸುವವರಲ್ಲಿ ಲಾಳಗೊಂಡ ಲಿಂಗಾಯತರು ಮತ್ತು ಇತರ ಲಿಂಗಾಯತ ಸಮುದಾಯದವರು ಒಳಗೊಂಡಿದ್ದಾರೆ.

**ವಿರೂಪಾಕ್ಷೇಶ್ವರ**

ದಕ್ಷಿಣಭಾರತದ ಬಳ್ಳಾರಿಜಿಲ್ಲೆಯ ಸುಪ್ರಸಿದ್ಧ ಸ್ಥಳವಾದ ಹಂಪಿಯ ಸ್ಮಾರಕಗಳಲ್ಲಿ ವಿರೂಪಾಕ್ಷ ದೇವಾಲಯವು ಒಂದು. ಇದನ್ನು ಪಂಪಾಪತಿ ದೇವಸ್ಥಾನವೆಂತಲೂ ಕರೆಯುತ್ತಾರೆ. ಈ ದೇವಾಲಯವು ವಿಜಯನಗರ ಸಾಮ್ರಾಜ್ಯದ ಆಡಳಿತಗಾರ ದೇವರಾಯನ ಮುಖ್ಯಸ್ಥನಾದ ಲಕ್ಕಣ್ಣ ದಂಡೇಶನಿಂದ ನಿರ್ಮಾಣವಾಗಿದೆ. ಈ ದೇವಾಲಯದ ವಿರೂಪಾಕ್ಷೇಶ್ವರನು ಶಿವನ ಪ್ರತಿರೂಪವಾಗಿದ್ದು ಪ್ರತಿವರ್ಷ ಫೆಬ್ರವರಿಯಂದು ಇದರ ರಥೋತ್ಸವವು ನಡೆಯುತ್ತದೆ. ವಿಜಯನಗರ ಸಾಮ್ರಾಜ್ಯದ ಅರಸರ ಆಳ್ವಿಕೆಯ ಕಾಲದಲ್ಲಿ ಸುಭಿಕ್ಷವನ್ನು ಹೊಂದಿದ ಈ ನಾಡಿನಲ್ಲಿ ಚಿನ್ನಾಭರಣಗಳನ್ನು ಸೇರುಗಳಿಂದ ಅಳೆಯುತ್ತಿದ್ದರು ಎಂಬ ಪ್ರತೀತಿ ಇದೆ.

**ನಂಜುಂಡೇಶ್ವರ**

ಈ ದೇವಾಲಯವು ಮೈಸೂರು ಜಿಲ್ಲೆಯ ನಂಜನಗೂಡಿನಲ್ಲಿದೆ. ಗೌತಮ ಋಷಿಯು ಸ್ವಲ್ಪಕಾಲ ಇಲ್ಲಿಯೇ ಇದ್ದು ಶಿವನ ವಿಗ್ರಹರೂಪವಾದ ಲಿಂಗವನ್ನು ಸ್ಥಾಪಿಸಿದನೆಂದು ನಂಬಲಾಗಿದೆ. ಆದರೆ ಮೂಲತಃ ಈ ದೇವಾಲಯವನ್ನು ೯ ನೇ ಶತಮಾನದಲ್ಲಿ ಗಂಗ ಆಡಳಿತಗಾರರು ಕಟ್ಟಿದರು. ದೇವಸ್ಥಾನದ ದಂತಕತೆಯಂತೆ ಶಿವನು ಅಮೃತದ ಮೀನನ್ನು ಅಮರತ್ವದ ಮಕರದ ಜಂಟಿ ಅನ್ವೇಷಣೆಯಲ್ಲಿ ದೇವತೆಗಳು ಮತ್ತು ಅಸುರರ ಕಾಳಗದಲ್ಲಿ ವಿಷವು ಉಂಟಾಗಿ ಈ ವಿಷವನ್ನು ಶಿವನು ಸೇವಿಸುತ್ತಾನೆ. ಆಗ ಪಾರ್ವತಿಯು ವಿಷವು ದೇಹಕ್ಕೆ ಹರಡದಂತೆ ಗಂಟಲನ್ನು ಬಿಗಿಯಾಗಿ ಹಿಡಿಯುತ್ತಾಳೆ. ಆದ್ದರಿಂದ ನೀಲಿ ಬಣ್ಣ ಉಂಟಾಗಿ ನೀಲಕಂಠನಾಗಿ ಅಂದರೆ ನಂಜುಂಡೇಶ್ವರನಾಗಿ(ವಿಷವನ್ನು ಉಂಡ ಈಶ್ವರ) ನಂಜನಗೂಡಿನಲ್ಲಿ ನೆಲೆಸಿದ್ದಾನೆ.

ನಂಜನಗೂಡು ಪ್ರಮುಖ ಶೈವ ಸ್ಥಳವಾಗಿದೆ. ಈ ದೇವಾಲಯವು ದ್ರಾವಿಡ ಶೈಲಿಯಲ್ಲಿ ರಚನೆಯಾಗಿದ್ದು ಮೂಲತಃ ಗಂಗರು ನಿರ್ಮಿಸಿದಂತೆ ಕಂಡುಬರುತ್ತದೆ. ನಂತರ ಮೈಸೂರಿನ ಅರಸರು ಇದನ್ನು ನವೀಕರಿಸಿ ೧೮೪೫ ರಲ್ಲಿ ಎತ್ತರವಾದ ಗೋಪುರವನ್ನು ಕೃಷ್ಣರಾಜ ಒಡೆಯರ್ ರವರು ನಿರ್ಮಿಸಿದ್ದಾರೆ. ಅಲ್ಲದೆ ಈ ಸ್ಥಳದಲ್ಲಿ ಶೈವ ಸಂತರ ೬೬ ವಿಗ್ರಹಗಳು, ನೂರಕ್ಕಿಂತ ಹೆಚ್ಚು ಲಿಂಗಗಳು ದೊರಕುತ್ತವೆ. ಈಶ್ವರನ ಭಕ್ತರಾದ ಲಿಂಗಾಯತ ಸಮುದಾಯದವರು ಒಂದೇ ಕಡೆ ವಿವಿಧ ಈಶ್ವರ ಲಿಂಗಗಳು ನಂಜನಗೂಡಿನಲ್ಲಿ ದೊರೆಯುವ ಕಾರಣ ತಮ್ಮ ಇಷ್ಟಲಿಂಗಗಳ ದರ್ಶನಕ್ಕಾಗಿ ಮತ್ತು ಪೂಜೆ ಸಲ್ಲಿಸುವುದಕ್ಕಾಗಿ ಹೋಗುವುದು ವಾಡಿಕೆ. ಅಲ್ಲದೆ ಇಲ್ಲಿನ ಸುತ್ತಮುತ್ತಲಿನ ದೊಡ್ಡಬಳ್ಳಾಪುರ,

ಚಾಮರಾಜನಗರ ಬೆಂಗಳೂರು, ಮೈಸೂರಿನಲ್ಲಿ ನೆಲೆಸಿರುವ ವಿವಿಧ ಲಿಂಗಾಯತ ಸಮುದಾಯದವರಲ್ಲದೇ ಲಾಳಗೊಂಡಲಿಂಗಾಯತರು ನಂಜನಗೂಡಿನ ನಂಜುಂಡೇಶ್ವರನನ್ನು ಆರಾಧ್ಯದೈವವಾಗಿ ಆರಾಧಿಸುವರು.

**ಬನಶಂಕರಿ**

ಬನಶಂಕರಿ ದೇವಾಲಯವು ಬದಾಮಿಬನಶಂಕರಿಯೆಂದೇ ಪ್ರಸಿದ್ದಿಯಾಗಿದೆ. ಇದು ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲೂಕಿನ ಬನಶಂಕರಿಯಲ್ಲಿದೆ. ಈ ದೇವಾಲಯದ ಇತಿಹಾಸದ ಪ್ರಕಾರ ನಿರಂತರ ಯುದ್ಧಗಳಿಂದ ೨ ಭಾರಿ ನಿರ್ಾಮವಾಯಿತು. ಪ್ರಸ್ತುತ ದೇವಾಲಯದ ಅವಶೇಷಗಳ ಪ್ರಕಾರ ರಾಷ್ಟ್ರಕೂಟರು ಮೂಲ ರಚನೆ ಮಾಡಿದ್ದರೆನ್ನಲಾಗಿದೆ. ರಾಷ್ಟ್ರಕೂಟ ಮತ್ತು ಕಲ್ಯಾಣಚಾಲುಕ್ಯರ ಕಾಲದಲ್ಲಿ ಬನಡಾ ದೇವಿ ಎಂದು ಪೂಜಿಸಲಾಗುತ್ತಿತ್ತು. ನಂತರ ವಿಜಯನಗರದ ಅಚ್ಚುತ ರಾಯನ ಆಳ್ವಿಕೆಯಲ್ಲಿ ನವೀಕರಿಸಿ ಹೊಸವಿಗ್ರಹವನ್ನು ಸ್ಥಾಪಿಸಲಾಯಿತು. ನಂತರ ಮುಸ್ಲಿಮರ ಆಕ್ರಮಣದಿಂದ ನಾಶಹೊಂದಿದ್ದು ಪ್ರಸ್ತುತ ದೇವಾಲಯವನ್ನು ಮರಾಠರು ಕಟ್ಟಿದ್ದು, ೧೯ ನೇ ಶತಮಾನದ ಆರಂಭದಲ್ಲಿ ಇದನ್ನು ಬನಶಂಕರಿ ಎಂದು ಕರೆಯಲಾಯಿತು. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಬನಶಂಕರಿ ಅಥವಾ ಶಕಂಬರಿ ಶಿವ ದೇವರ ಪತ್ನಿ ಪಾರ್ವತಿಯ ರೂಪವಾಗಿದೆ. ಆದ್ದರಿಂದ ಈ ದೇವಾಲಯಕ್ಕೆ ಬನಶಂಕರಿ ಎಂಬ ಹೆಸರು ಬಂದಿದೆ. ಪ್ರಾಚೀನ ದೇವಾಲಯವು ದ್ರಾವಿಡ ಶೈಲಿಯ ವಾಸ್ತುಶಿಲ್ಪವನ್ನು ಪ್ರತಿನಿಧಿಸುತ್ತದೆ. ಇದರ ವಾರ್ಷಿಕ ಉತ್ಸವವು ಜನವರಿ ಅಥವಾ ಫೆಬ್ರವರಿಯಲ್ಲಿ ನಡೆಯುತ್ತದೆ.

**ಯಲ್ಲಮ್ಮ**

ಈ ಯಲ್ಲಮ್ಮ ದೇವಿಯ ದೇವಾಲಯವು ಬೆಳಗಾಂ ಜಿಲ್ಲೆಯ ಸವದತ್ತಿ ಪಟ್ಟಣದಿಂದ ೫ ಕಿ ಮೀ ದೂರದಲ್ಲಿದೆ. ಈ ರೇಣುಕಾಯಲ್ಲಮ್ಮ ದೇವಿಯ ಇತಿಹಾಸವು ೧೫೧೪ ರಲ್ಲಿ ರೇಬಾಗ್ನ ಬೊಮಪ್ಪನಾಯ್ಕ ಇವರು ನಿರ್ಮಿಸಿದರು. ಪುರಾತತ್ವಶಾಸ್ತ್ರದ ಸಾಕ್ಷಿಪ್ರಕಾರ ರಾಷ್ಟ್ರಕೂಟ ಅಥವಾ ಚಾಲುಕ್ಯರ ಅವಧಿಯ ಮಧ್ಯದಲ್ಲಿ ೮ನೇ ಶತಮಾನದಿಂದ ಮಧ್ಯ ೧೧ನೇ ಶತಮಾನದಲ್ಲಿ ಅಸ್ಥಿತ್ವದಲ್ಲಿತ್ತು. ದೇವಸ್ಥಾನವು ದೇವಾಲಯದ ದೇವರನ್ನು ಅರ್ಪಿಸುವ ಪುರಾತನ ದೇವದಾಸಿ ಪದ್ಧತಿಯೊಂದಿಗೆ ಸಂಬಂಧಿಸಿದೆ. ಈ ದೇವಿಯನ್ನು ಕನ್ನಡ ಭಾಷೆಯಲ್ಲಿ ೭ ಮಕ್ಕಳ ತಾಯಿಯೆಂದು ಕರೆಯುತ್ತಾರೆ. ಈ ಯಲ್ಲಮ್ಮ ದೇವಿಯ ಆರಾಧಕರಲ್ಲಿ ಲಿಂಗಾಯತ ಸಮುದಾಯದವರನ್ನೂ ಕಾಣಬಹುದು. ದೊಡ್ಡಬಳ್ಳಾಪುರ ಜಿಲ್ಲೆಯ ಕುರುಬರಹಳ್ಳಿಯಲ್ಲಿನ ಕೆಲವು ಲಾಳಗೊಂಡ ಸಮುದಾಯದವರು ತಮ್ಮ ಮನೆಗಳಲ್ಲಿ ಸವದತ್ತಿಯಲ್ಲಮ್ಮನನ್ನು ಪೂಜಿಸುವುದನ್ನು ಕಾಣಬಹುದು.

**ಅಕ್ಕಮಹಾದೇವಿ**

ಅಕ್ಕಮಹಾದೇವಿಯು ಶಿವಮೊಗ್ಗ ಜಿಲ್ಲೆಯ ಉಡುತಡಿಯಲ್ಲಿ ಕ್ರಿ ಶ ೧೧೩೦ ರಿಂದ ೧೧೬೦ ರ ವರೆಗೆ ಜನಿಸಿದ್ದರೆನ್ನಲಾಗಿದೆ. ಕನ್ನಡ ಭಾಷೆಯ ಆರಂಭಿಕ ವಚನಕಾರರಲ್ಲಿ ಇವರು ಒಬ್ಬರು, ೧೨

ನೇ ಶತಮಾನದ ಬಸವಣ್ಣ, ಅಲ್ಲಮ ಪ್ರಭು, ಸಿದ್ಧರಾಮರು ನೀಡಿದ ಗೌರವಾರ್ಥಕವಾದ ಅಕ್ಕ(ಹಿರಿಯ ಸಹೋದರಿ) ಎಂಬ ನುಡಿಯಿಂದ ಮಹಾದೇವಿಯು ಅಕ್ಕಮಹಾದೇವಿಯಾದಳು. ಸಾಕ್ಷಾತ್ ಶಿವ(ಚನ್ನಮಲ್ಲಿಕಾರ್ಜುನ)ನನ್ನು ತನ್ನ ಪತಿಯನ್ನಾಗಿ ಮನದಲ್ಲೇ ಸ್ವೀಕರಿಸಿ, ಚನ್ನಮಲ್ಲಿಕಾರ್ಜುನನ ನೆಲೆಯಾದ ಆಂಧ್ರದ ಶ್ರೀ ಶೈಲಕ್ಕೆ ಪ್ರಯಾಣ ಬೆಳೆಸುತ್ತಾಳೆ. ಧರ್ಮದ ಉದ್ಧಾರಕ್ಕಾಗಿ ಬಸವಣ್ಣ, ಅಲ್ಲಮಪ್ರಭುಗಳ ಜೊತೆಗೆ ಸಾಮಾಜಿಕ ಕ್ರಾಂತಿಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಳು.

**ಮಲ್ಲಮ್ಮ**

ಮಲ್ಲಮ್ಮ ಅಥವಾ ಹೇಮರೆಡ್ಡಿ ಮಲ್ಲಮ್ಮ ಎಂದೇ ಖ್ಯಾತಳಾದ ಮಲ್ಲಮ್ಮಳು ಶ್ರೀ ಶೈಲ ಸಮೀಪ ರಾಮಾಪುರ ಗ್ರಾಮದಲ್ಲಿ ನಾಗರೆಡ್ಡಿ ಮತ್ತು ಗೌರಮ್ಮಾ ದಂಪತಿಯ ಮಗಳಾಗಿ ಜನಿಸಿದಳು. ಇವಳ ಚರಿತ್ರೆಯು ೧೪ನೇ ಶತಮಾನದ್ದಾಗಿದೆ. ಚನ್ನಮಲ್ಲಿಕಾರ್ಜುನನ ಕೃಪೆಯಿಂದ ಜನಿಸಿದ ಮಲ್ಲಮ್ಮಳು ಅಪಾರ ಶಿವಭಕ್ತೆಯಾಗಿದ್ದ ಮಲ್ಲಮ್ಮಳು ಅನೇಕ ಪವಾಡ ಗೈದು ಸಮಾಜಮುಖಿ ಕೆಲಸಗಳನ್ನು ಮಾಡಿ ಜನರಿಗೆ ಬೇಡಿದ್ದನ್ನು ಕೊಡುವ ಕಾಮದೇನು ಕಲ್ಪವೃಕ್ಷವಾಗಿ ಬೆಳೆದು ನಿಲ್ಲುತ್ತಾಳೆ.

**ಮಲ್ಲಯ್ಯ**

ಈ ದೇವಾಲಯವು ಯಾದಗಿರಿ ಜಿಲ್ಲೆಯ ಮೈಲಾಪುರ ಎಂಬ ಹಳ್ಳಿಯಲ್ಲಿದೆ. ಯಾದಗಿರಿಯಿಂದ ೧೪ ಕಿ ಮೀ ದೂರದಲ್ಲಿದೆ. ಇದು ಹಿಂದೂ ದೇವಾಲಯವಾಗಿದ್ದು ವಿಜಯನಗರ ಸಾಮ್ರಾಟರ ಆಳ್ವಿಕೆಯಲ್ಲಿ ಕಟ್ಟಲ್ಪಟ್ಟಿತು ಈ ಮಲ್ಲಯ್ಯನನ್ನು ಮೈಲಾಪುರ ಮಲ್ಲಣ್ಣ ಹಾಗೂ ಖಂಡೋಬ ಎಂದೂ ಕರೆಯಲಾಗುತ್ತದೆ ಈ ಮಲ್ಲಯ್ಯನ ಇತಿಹಾಸವನ್ನು ನೋಡಿದಾಗ ಮೈಲಾರಲಿಂಗೇಶ್ವರನ ಉಗಮಕ್ಕೂ ಈ ಮಲ್ಲಯ್ಯನ ಉಗಮಕ್ಕೂ ಸಂಬಂಧವನ್ನು ಕಾಣಬಹುದು.

**ಕೇದಾರಲಿಂಗೇಶ್ವರ**

ಕೇದಾರನಾಥ ದೇವಾಲಯವು ಪ್ರಸಿದ್ಧ ಶಿವನಿಗೆ ಅರ್ಪಿತವಾದ ಹಿಂದೂ ಹಾಗೂ ಪುರಾತನ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ದೇವಾಲಯವಾಗಿದೆ. ಈ ದೇವಾಲಯವು ಉತ್ತರಖಾಂಡ ರಾಜ್ಯದ ಮಂದಾಕಿನಿ ನದಿಯ ತೀರದ ಕೇದಾರದಲ್ಲಿದ್ದು, ಈ ದೇವಾಲಯವನ್ನು ಪಾಂಡವರು ಕಟ್ಟಿದರು ಮತ್ತು ಆದಿ ಶಂಕರಾಚಾರ್ಯರು ಪುನರುಜ್ಜೀವನಗೊಳಿಸಿದರು ಎನ್ನಲಾಗಿದೆ. ಈ ದೇವಾಲಯವು ೧೨ ಜ್ಯೋತಿರ್ಲಿಂಗಗಳಲ್ಲಿ ಅತ್ಯಂತ ಎತ್ತರವಾಗಿದೆ. ಕೇದಾರನಾಥ ಎಂಬ ಪದವು ಕ್ಷೇತ್ರದ ಅಧಿಪತಿ ಅಂದರೆ ಸಂಸ್ಕೃತ ಪದಗಳಾದ ಕೇದಾರಾ (ಕ್ಷೇತ್ರ) ಮತ್ತು ನಾತ (ದೇವರು) ಎಂಬುದಾಗಿದೆ. ಈ ಕೇದಾರನಾಥ ಪೀಠವು ಪುರಾತನ ಪೀಠವಾಗಿದ್ದು ಇಲ್ಲಿನ ಗುರುಗಳಾದ ಏಕೋರಾಮಾರಾಧ್ಯರ ಶಿಷ್ಯನಾದ ನಾ(ಲಾ)ಳಗೊಂಡೇಶ್ವರನು ಲಾಳಗೊಂಡ ಸಮುದಾಯದ ಗುರುವಾಗಿ, ಆರ್ಯರ ಆಕ್ರಮಣದ ಕಾಲದಲ್ಲಿ ಸಮುದಾಯದ ರಕ್ಷಣೆಗಾಗಿ ದಕ್ಷಿಣದೆಡೆಗೆ ಚಲಿಸಲು ಆದೇಶಿಸಿದ್ದನು.

ನಂತರ ಗುರುಗಳ ಆದೇಶದಂತೆ ನಾಳಗೊಂಡೇರ್ಶವರನು ಐಕ್ಯಹೊಂದಿದನು ಈ ಸ್ಥಳದಲ್ಲಿ ಭಾಣಾಸುರನ ಮಗಳು ಉಷಾದೇವಿಯು ನಾಳಗೊಂಡೇಶ್ವರ ದೇವಾಲಯವನ್ನು ಕಟ್ಟಿಸಿದಳು. ಕೇದಾರಕ್ಕೆ ಬರುವ ಜನರು ಈ ದೇವಾಲಯವನ್ನು ದರ್ಶನಮಾಡುತ್ತಾರೆ. ಭಾರತ ದೇಶದ ವಿವಿಧ ಸಮುದಾಯದ ಅಪಾರ ಭಕ್ತ ಸಮೂಹವು ಈ ಕೇದಾರನಾಥನ ಭಕ್ತರಾಗಿ ಸೇವೆ ಸಲ್ಲಿಸುವರು.

ಈ ಮೇಲ್ಕಂಡ ದೇವಸ್ಥಾನಗಳ ಜೊತೆಗೆ ಆದಿಬಸವಣ್ಣ, ಹಲಬನೂರುಬಸವಣ್ಣ, ಕಂಬಳೇಶ್ವರ, ಸೋಮಲಿಂಗೇಶ್ವರ, ಕರಿಲಿಂಗೇಶ್ವರ, ಬಗ್ಗೂರುಬಸವಣ್ಣ, ಬಂಡೆಬಸವಣ್ಣ, ಬೂದಿಹಾಳ್‌ಬಸವಣ್ಣ, ಬೆಟ್ಟದಬಸವೇಶ್ವರ,ಬೋಗಾವತಿಬಸವೇಶ್ವರ, ದಂಡಗೊಂಡಬಸವೇಶ್ವರ, ಒಕ್ಕುಂಡಿಬಸವೇಶ್ವರ, ಈರಣ್ಣ, ಪೋತಲಿಂಗೇಶ್ವರ, ಶಾಂತೇಶ್ವರ, ಸೂಗೂರೇಶ್ವರ ವೀರಭದ್ರ, ಮಹಾಂಕಾಳಮ್ಮ, ಹುಲಿಗೆಮ್ಮ, ದೇವಮ್ಮ, ಅಕ್ಕಿಯಮ್ಮ, ರಾಮಅಕ್ಕಮ್ಮ, ಸೋಮಪ್ಪ, ಕ್ಯಾತೇಶ್ವರ, ಮಲೇಶ್ವರ, ಗೊಂಡಪ್ಪ, ಹನುಮಂತಜಡಿತಾತ, ಮರಿತಾತ ಇತ್ಯಾದಿಗಳು. ಶ್ರೀಶೈಲ, ಬಾಳೆಹೊನ್ನೂರು ಪಂಚಪೀಠಗಳು ಲಾಳಗೊಂಡರ ಗಾಢವಾದ ಪ್ರಭಾವವನ್ನು ಬೀರಿವೆ.

ಪ್ರಕೃತಿ, ಕುರಿದನ ಪಾಲನೆ ದೈವಗಳನ್ನು ಪ್ರೀತಿಯಿಂದ ಆರಾಧಿಸುತ್ತಾ ಬಂದಿದ್ದಾರೆ. ಇವು ಇವರ ಸಂಸ್ಕೃತೀಕರಣದ ಮಜಲುಗಳನ್ನು ಗುರುತಿಸುತ್ತವೆ. ಇಂದು ವೈಷ್ಣವರಾದ ಲಾಳಗೊಂಡರು ಶೈವಧರ್ಮಗಳನ್ನೇ ಪೂಜಿಸತೊಡಗಿದ್ದಾರೆ. ವೈಷ್ಣವ ದೈವಾರಾಧನೆ ತುಂಬಾ ಕಡಿಮೆಯಾಗುತ್ತಿದೆ. ಶೈವ, ವೈಷ್ಣವ ದೈವಗಳ ಪೂಜಾವಿಧಾನಗಳಲ್ಲಿಯು ಲಿಂಗಧಾರಣೆಯಿಂದಾಗಿ ವ್ಯತ್ಯಾಸವಾಗಿದೆ. ಕುರಿಯ ದೈವ ಮೈಲಾರಲಿಂಗನಿಗಿಂತಲೂ ದನದದೈವ ಬಸವಣ್ಣನಿಗೆ (ನಂದಿಗೆ) ಹೆಚ್ಚಿನ ಪ್ರಾಶಸ್ತ್ಯ ಲಭ್ಯವಾಗಿದೆ. ನೇಮಕ್ಕೆ ಮಾತ್ರ ಹಳೆಯ ದೈವಗಳು ಉಳಿದುಕೊಂಡಿವೆ. ಹೊಸ ದೈವಗಳು ಹಳೆ ದೈವಗಳ ಸ್ಥಾನಗ್ರಹಣ ಮಾಡಿಕೊಂಡಿವೆ. ಇತ್ತೀಚೆಗೆ ೧೨ನೇ ಶತಮಾನದ ಬಸವೇಶ್ವರರ ಪ್ರಭಾವಕ್ಕೆ ಲಾಳಗೊಂಡರು ಒಳಗಾಗುತ್ತಲಿದ್ದಾರೆ.

**ಕೃಷಿ ಸಂಬಂಧಿತ ಆಚರಣೆಗಳು**

ಕೃಷಿಯ ಪ್ರಾರಂಭದ ಮೂಲವು ಆದಿವಾಸಿ ಮಾನವನ ಅರಣ್ಯವಾಸಿ ಕಾಲದ ಸಮಯದಲ್ಲೇ ಉಗಮವಾಯಿತೆಂದರೆ ತಪ್ಪಾಗಲಾರದು ಆದಿಮಾನವ ತನ್ನ ಆಹಾರಕ್ಕಾಗಿ ಕಾಡಿನ ಉತ್ಪನ್ನಗಳ ಮೇಲೆ ಅವಲಂಬಿತನಾಗಿ ಗೆಡ್ಡೆಗೆಣಸು, ಹಣ್ಣುಹಂಪಲು ತಿನ್ನುತ್ತಾ ಮತ್ತು ಪ್ರಾಣಿಗಳ ಹಸಿಮಾಂಸ ತಿನ್ನುತ್ತಾ ಅಲೆಮಾರಿಯಾಗಿ ತಿರುಗುತ್ತಿದ್ದನು. ಕಾಡಿನ ಉತ್ಪನ್ನಗಳು ಪ್ರಕೃತಿಯಲ್ಲಿನ ವಾತಾವರಣ ಬದಲಾವಣೆಯನ್ನು ಅವಲಂಬಿಸಿದ್ದು ಎಲ್ಲಾ ಕಾಲದಲ್ಲಿಯೂ ಎಲ್ಲಾ ಉತ್ಪನ್ನಗಳು ದೊರೆಯದೇ ಇದ್ದ ಸಂದರ್ಭದಲ್ಲಿ ಹಾಗೂ ಆದಿಮಾನವ ಸಾಮೂಹಿಕ ಜೀವನ ಪದ್ಧತಿಯನ್ನು ಪ್ರಾರಂಭಿಸಿದ ನಂತರ ತನಗೆ ಬೇಕಾದ ಆಹಾರ ಪದಾರ್ಥಗಳನ್ನು ಬಿತ್ತಿಬೆಳೆಯುವುದನ್ನು ಕಲಿತನು. ಕೃಷಿಗಾಗಿ ಕಾಡನ್ನು ಸ್ವಚ್ಚಗೊಳಿಸಿ ಭೂಮಿಯನ್ನು ಉಳಿಮೆಮಾಡಿ ಬೀಜಗಳನ್ನು ಬಿತ್ತಿ ಆಹಾರ ಪದಾರ್ಥಗಳನ್ನು

ಬೆಳೆಯ ತೊಡಗಿದನು. ನಂತರದ ದಿನಗಳಲ್ಲಿ ಈ ಕೃಷಿಗೆ ಅಂಟಿಕೊಂಡ ಮಾನವ ಜೀವನ ಪದ್ಧತಿ ವಿಶಾಲವಾದಂತೆ ನಾಗರಿಕತೆ ಬೆಳೆದಂತೆ ಹೆಚ್ಚುಹೆಚ್ಚು ಕೃಷಿಮಾಡಲು ಭೂಮಿಯನ್ನು ಆಕ್ರಮಿಸಿ ಅದರ ಮೇಲೆ ಹಿಡಿತ ಸಾಧಿಸ ತೊಡಗಿದನು ಹಾಗೂ ಆಹಾರಕ್ಕಾಗಿ ಧಾನ್ಯಗಳನ್ನು ಬೆಳೆಯುತ್ತಿದ್ದ ಮಾನವ ವ್ಯವಹಾರಿಕ ದೃಷ್ಟಿಯಿಂದಲೂ ಕೃಷಿಯನ್ನು ಮಾಡತೊಡಗಿದನು ಬರಬರುತ್ತಾ ಕೃಷಿಯು ಆಧುನಿಕ ಪದ್ಧತಿಯನ್ನು ಪಡೆದುಕೊಂಡಿದೆ.

ಭಾರತದೇಶ ಮೂಲತಃ ಕೃಷಿಪ್ರಧಾನ ದೇಶ ಭಾರತೀಯರ ಬಹುತೇಕ ಉದ್ಯೋಗ ಕೃಷಿ, ಕೃಷಿಯೇ ದೇಶದಬೆನ್ನೆಲುಬು, ಅಂತೆಯೇ ಲಾಳಗೊಂಡರ ಮೂಲವೃತ್ತಿ ಕೃಷಿ ಜೊತೆಗೆ ಪಶುಪಾಲನೆ, ಇವರ ಕೃಷಿಚಟುವಟಿಕೆಗಳನ್ನು ಸಮೀಕ್ಷಿಸಿದಾಗ ಲಾಳಗೊಂಡರ ಬದುಕಿನಲ್ಲಿ ಕೃಷಿಯು ಹಬ್ಬದ ಆಚರಣೆಯಂತೆ, ಸಂತೋಷ ಸಂಭ್ರಮದಿಂದ ಕೃಷಿ ಕಾರ್ಯವನ್ನು ಕೈಗೊಳ್ಳುತ್ತಾರೆ. ಕೃಷಿಬದುಕು ಎನ್ನುವುದು ಆಚರಣೆಗಳ ಸಮೂಹವೇ ಆಗಿದೆ, ವರ್ಷದ ೧೨ ತಿಂಗಳು ಒಂದಲ್ಲ ಒಂದು ಕೃಷಿ ಚಟುವಟಿಕೆಯಲ್ಲಿ ರೈತರು ಪಾಲ್ಗೊಂಡಿರುತ್ತಾರೆ. ಹಬ್ಬ ಹಾಗೂ ಆಚರಣೆಗಳು ಜನಜೀವನದ ಕಾಲಬದ್ಧ ಸಂಭ್ರಮ ಹಾಗೂ ಸಂಕೇತಗಳು. ವಿಷೇಶವಾಗಿ ಮುಂಗಾರು ಹಂಗಾಮಿನ ಜೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜಮಾಸಗಳಲ್ಲಂತೂ ಭೂಮಿಪೂಜೆಯು ಸಮೃದ್ಧಸಂಗತಿಗಳನ್ನು ಗರ್ಭೀಕರಿಸಿಕೊಂಡಿರುವಂತವು.

ಲಾಳಗೊಂಡ ಸಮುದಾಯದ ಸದಸ್ಯರಲ್ಲಿ ೯೨% ರಷ್ಟು ಕುಟುಂಬಗಳು ಗ್ರಾಮವಾಸಿಗಳೆನಿಸಿದ್ದಾರೆ. ಕೇವಲ ೮%ರಷ್ಟು ಪಟ್ಟಣವಾಸಿಗಳಾಗಿದ್ದಾರೆ. ಭೂಹಿಡುವಳಿ ಹಿನ್ನೆಲೆಯಲ್ಲಿ ಈ ಸಮುದಾಯದವರನ್ನು ಗುರುತಿಸಿದರೆ ೮೮% ಭೂಸಹಿತ ಕುಟುಂಬಗಳಿವೆ. ಇದರಲ್ಲಿ ೫೯%ರಷ್ಟು ಖುಷ್ಕಿ ಭೂಹಿಡುವಳಿದಾರರು (೨೫.೦೧ ಎಕರೆಗಿಂತ ಹೆಚ್ಚು ಭೂಮಿ ಹೊಂದಿರುವವರು), ೨೦%ರಷ್ಟು ಅರೆ ಮಧ್ಯಮ ಹಿಡುವಳಿದಾರರು (೧೦.೦೧ ರಿಂದ ೨೫ ಎಕರೆ ಭೂಮಿ ಹೊಂದಿರುವವರು). ೨೫% ರಷ್ಟು ಮಧ್ಯಮ ಹಿಡುವಳಿದಾರರು (೫.೦೧ ರಿಂದ ೧೦ ಎಕರೆ ಭೂಮಿ ಹೊಂದಿರದವರು). ೧೩% ಅತಿ ಸಣ್ಣ ಹಿಡುವಳಿದಾರರು (೦.೫ ರಿಂದ ೨.೫೦ ಎಕರೆ ಭೂಮಿ ಹೊಂದಿದವರು), ಇದ್ದಾರೆ. ೧೨% ರಷ್ಟು ಕುಟುಂಬಗಳು ಭೂರಹಿತವಾಗಿವೆ. ದೊಡ್ಡಹಿಡುವಳಿದಾರರನ್ನು ಹೊರತುಪಡಿಸಿ ಇತರ ವರ್ಗದ ಭೂಹಿಡುವಳಿದಾರ (ಅಂದರೆ ಅರೆಮಧ್ಯಮ ಹಾಗೂ ಮಧ್ಯಮಹಿಡುವಳಿದಾರರು) ಕೃಷಿವೃತ್ತಿ ಸ್ಥಿತಿಯು ಸಾಲ-ಸೂಲಗಳಿಂದ ಕೂಡಿದೆ. ಹೊಟ್ಟೆಬಟ್ಟೆಗೆ ತೊಂದರೆ ಇಲ್ಲವೆನ್ನುವಂತಿದೆ. ಇವರೂ ಮಧ್ಯಮ ವರ್ಗಕ್ಕೆ ಸೇರಿದ ಬಕಾರಣ ಸರಕಾರದ ಕೃಷಿಸಹಾಯ ಇತರ ನೆರವು ಪಡೆಯದ ವಸ್ತುಸ್ಥಿತಿಯಾಗಿದೆ. ಇನ್ನು ಸಣ್ಣ ಹಾಗೂ ಅತಿಸಣ್ಣ ಭೂಹಿಡುವಳಿದಾರರ ಕೃಷಿವೃತ್ತಿ ಸ್ಥಿತಿ ಹೇಳಿಕೊಳ್ಳುವಂತಿಲ್ಲ. ಕೃಷಿ ಉತ್ಪನ್ನಕ್ಕೆ ಸರಿಯಾದ ವೆಚ್ಚ ನಿಭಾಯಿಸದೆ, ಕೆಲವೊಂದು ಸಾರಿ ಭೂಉಳುಮೆ ಮಾಡುವುದನ್ನು ತೊರೆದು, ಜಮೀನು ಬೀಳುಬಿಟ್ಟ ಉದಾಹರಣೆಗಳು ಕಂಡುಬರುತ್ತವೆ. ಈ ಸಮುದಾಯದ ಸಣ್ಣ ಹಾಗೂ ಅತಿಸಣ್ಣ

ಭೂಹೀನ ಕುಟುಂಬ ಸದಸ್ಯರು ಕೆಲವು ಜಮೀನ್ದಾರಿಗಳಲ್ಲಿ ಕೃಷಿ ಕಾರ್ಮಿಕ ವೃತ್ತಿಯನ್ನು ಅವಲಂಬಿಸಿ, ಆ ಸೇವೆಯಿಂದ ಬಂದ ಉತ್ಪನ್ನದಲ್ಲಿ ಬದುಕು ನೂಕುತ್ತಿದ್ದಾರೆ. ಇಂದಿಗೂ ವಿರಳವಾಗಿ ಈ ಸಮುದಾಯದ ಭೂಹೀನ ಹಾಗೂ ಸಣ್ಣ ಮತ್ತು ಅತೀಸಣ್ಣ ಹಿಡುವಳಿದಾರರು ಆರ್ಥಿಕವಾಗಿ ಸಬಲವಾದ ಕೃಷಿಕುಟುಂಬಗಳಲ್ಲಿ ಸಂಬಳದಾರ(ವರ್ಷ ಒಪ್ಪಂದ ಕೃಷಿ ಕಾರ್ಮಿಕ) ರಾಗಿ ಸೇವೆ ಹೊಂದಿರುವುದು ಕಂಡುಬರುತ್ತದೆ. ಆರ್ಥಿಕ ದೃಷ್ಟಿಯಲ್ಲಿ ಕೆಲವು ಕುಟುಂಬಗಳು ಸರಕಾರದ ದೃಷ್ಟಿಯಲ್ಲಿ ಮಾಧ್ಯಮ ವರ್ಗದವರಾಗಿದ್ದರಿಂದ ಇವರೂ ಮಧ್ಯಮ ವರ್ಗಕ್ಕೆ ಸೇರುತ್ತಾರೆ. ಇವರ ಮುಂದಿನ ಪೀಳಿಗೆಯವರು ಶಿಕ್ಷಣ ವೆಚ್ಚವನ್ನು ಹೊರೆಯಾಗಿ ಅನುಭವಿಸುತ್ತಾ, ಬಹುತೇಕ ಕುಟುಂಬಗಳಲ್ಲಿ ಕಾಲೇಜು ಶಿಕ್ಷಣ ವಂಚಿತರಾಗುತ್ತಿದ್ದಾರೆ. ಉನ್ನತ ಶಿಕ್ಷಣದ ಗುರಿಯಂತೂ ಆರ್ಥಿಕ ಅನಾನುಕೂಲತೆಯಿಂದ ಕನಸೇ ಆಗಿರುತ್ತದೆ.

ಲಾಳಗೊಂಡರ ಕೃಷಿಚಟುವಟಿಕೆಯು ಮುಂಗಾರುಮಳೆ ಪ್ರಾರಂಭದ ಹಂತದಿಂದ ಶುರುವಾಗುತ್ತದೆ. ಪ್ರತಿವರ್ಷದ ಏಪ್ರಿಲ್, ಮೇ ತಿಂಗಳುಗಳಲ್ಲಿ ಮುಂಗಾರು ಮಳೆ ಭೂಮಿಗೆ ಬಿದ್ದ ನಂತರ ಬಸವಜಯಂತಿಯ ದಿನದಂದು ಮೊದಲ ಬೇಸಾಯವನ್ನು ಮನೆಯಲ್ಲಿನ ಸದಸ್ಯರ ನಾಮಬಲವನ್ನು ಪಂಚಾಂಗ ಕೇಳಿಸಿ ಆ ವರ್ಷದ ಹೆಸರುಬಲ ಬಂದ ಸದಸ್ಯನಿಂದ ಬಸವಣ್ಣ(ಹೆತ್ತು)ನಿಗೆ ಪೂಜೆ ಮಾಡಿಸಿ ಹೊಲದಲ್ಲಿ ಬೇಸಾಯ ಮಾಡಿಸಿ ಭೂಮಿಯ ನಾಮಕಾವಸ್ಥೆ ಊಳುಮೆಯನ್ನು ಪ್ರಾರಂಬಿಸುತ್ತಾರೆ. ನಂತರ ಭೂಮಿಯನ್ನು ಶುಚಿಗೊಳಿಸಿ ಮಳೆಯಿಂದ ಭೂಮಿ ಹದವಾದ ನಂತರ ಬಿತ್ತನೆ ಕಾರ್ಯವನ್ನು ಪ್ರಾರಂಬಿಸುವ ಪದ್ಧತಿ ಇಂದಿಗೂ ಲಾಳಗೊಂಡರಲ್ಲಿ ಕಾಣಬಹುದು. ನಂತರ ಮಣ್ಣೆತ್ತಿನ ಅಮವಾಸ್ಯೆಯಿಂದ ಆರಂಭವಾಗುವ ಭೂಮಿ ಪೂಜೆ ಪ್ರಕ್ರಿಯೆಗಳು ಭೂಮಿಯ ನಿಸರ್ಗಮುಖಿ ಬೆಳವಣಿಗೆಯೊಂದಿಗೆ ಕರಳುಬಳ್ಳಿಯ ಸಂಬಂಧವನ್ನು ಹೊಂದಿವೆ. ಭೂಮಿಯನ್ನು ಭೂ ಮಾತೆಯೆಂದು ಕಾಣುವ ರೈತ ಅವಳನ್ನು ಭೂದೇವಿಯಾಗಿ, ಅವಳ ಮಗನಾಗಿ, ಬಿತ್ತುವ ಬೆಳೆಯುವ, ಕೊಯ್ಯುವ, ಗೂಡು ಬಡಿಯುವ, ತೆನೆಮುರಿಯುವ, ಕಣಮಾಡುವ, ತೆನೆತುಳಿಸುವ, ತೂರುವ, ತುಂಬುವ ವೇಳೆಯಲ್ಲಿ ಭೂತಾಯಿಗೆ ಪೂಜೆಸಲ್ಲಿಸುವ ಕಾರ್ಯವನ್ನು ಮಾಡುತ್ತಾಬಂದಿದ್ದಾರೆ. ಒಂದು ವೇಳೆ ಭೂಮಿ ಫಲವತ್ತತೆ ನೀಡದಿದ್ದರೆ ಭೂತಾಯಿ ಮುನಿಸಿಕೊಂಡಿರುವಳು ಎಂದು ಈ ಎಲ್ಲಾ ಆಚರಣೆಗಳು ಶಾಸ್ತ್ರೋಕ್ತವಾಗಿ ವೇದ ಕಾಲದಿಂದಲೂ ರೂಡಿಯಲ್ಲಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ವ್ಯವಸಾಯದ ಪ್ರಮುಖ ಘಟ್ಟವಾದ ಸುಗ್ಗಿಯ ಸಂದರ್ಭದ ಕಣ, ಹಂತಿ, ರಾಶಿ ಇವುಗಳ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವ್ಯವಸಾಯ ಕಾರ್ಯವು ಪ್ರತಿಯೊಂದು ವಿದ್ಯಮಾನಗಳನ್ನು ದೈವೀ ನೆಲೆಯಲ್ಲೇ ಪರಿಭಾವಿಸುವ ಕೃಷಿಕನಿಗೆ ಧರ್ಮಕ್ಕಿಂತ ದೇವರು ದೊಡ್ಡವನು. ಭೂಮಿ ಉಳುಮೆ ಮಾಡುವುದರಿಂದ ಹಿಡಿದು ಬಿತ್ತನೆ, ಬೆಳೆ ರಕ್ಷಣೆ, ಕಾಲಕಾಲಕ್ಕೆ ಮಳೆ ಸುರಿದು

ಬೆಳೆ ಸಮೃದ್ಧವಾಗಿರಲು ಬೆಳೆಗಳಿಗೆ ಹಾಗೂ ದನಗಳಿಗೆ ಬರುವ ರೋಗರುಜಿನೆಗಳನ್ನು ದೂರಮಾಡಲು ತನ್ನ ಕುಟುಂಬಕ್ಕೆ ಯಾವುದೇ ದಕ್ಕೆ ಬಾರದಿರಲು ಹೀಗೆ ಒಂದೊಂದು ಕೆಲಸ ಕಾರ್ಯಗಳಿಗೆ ಒಂದೊಂದು ದೇವರನ್ನು ಸೃಷ್ಟಿಸಿಕೊಂಡು, ಸಂದರ್ಭಕ್ಕನುಗುಣವಾಗಿ ಅವುಗಳ ಆರಾಧನೆ ವಿಧಿಗಳನ್ನು ನಿಷ್ಠೆಯಿಂದ ನಡೆಸುತ್ತಾ ಬಂದಿದ್ದಾನೆ. ಈ ನಿಷ್ಠೆಯೇ ಆತನ ಬದುಕಿನ ಶ್ರೀ ರಕ್ಷೆಯಾಗಿದೆ. ಹೀಗಾಗಿ ಕೃಷಿಯು ಮನುಷ್ಯ ಪ್ರಯತ್ನಕ್ಕಿಂತ ದೈವೀ ನೆಲೆಯಲ್ಲೇ ನಿಧಾನವಾಗಿ ಬೆಳೆದು ಬಂತು. ರೈತ ಲಾಭ ಹಾನಿಗಳನ್ನು ತನ್ನದಾಗಿಸಿಕೊಳ್ಳದೇ ದೇವರ ಮೇಲೆ ಜಾರಿಸುತ್ತಾ ಕೈಗೆ ಬಂದಿದ್ದರಲ್ಲಿ ದಾನ ದಾಸೋಹ ಮಾಡುವುದರಲ್ಲಿ ಧನ್ಯತಾ ಭವವನ್ನು ಹೊಂದುತ್ತಾನೆ. ಇಷ್ಟೆಲ್ಲಾ ದೈವಿಕ ಭಾವನೆಗಳ ಮೂಲಕ ಭೂಮಿಯಲ್ಲಿ ಕೃಷಿ ಚಟುವಟಿಕೆಗಳನ್ನು ರೂಪಿಸಿಕೊಂಡು ಕೃಷಿಕ ತಾನು ಉತ್ತಿ–ಬಿತ್ತಿದ ಬೆಳೆಯನ್ನು ಒಕ್ಕುವುದರಲ್ಲಿಯೂ ಕೂಡ ಅನೇಕ ಸಂಪ್ರದಾಯಗಳನ್ನು ರೂಡಿಸಿಕೊಂಡಿದ್ದಾನೆ. ಅವುಗಳಲ್ಲಿ ಕಣ ಸಂಸ್ಕೃತಿ ಮೇಟಿ ಕಂಬ ನೆಡುವುದು, ಹಂತಿ, ರಾಶಿ ಮಾಡುವುದು ಇತ್ಯಾದಿ ಚಟಿವಟಿಕೆಗಳು ಕೃಷಿಯಲ್ಲಿ ಮಹತ್ವದ್ದಾಗಿದೆ.

**ಕಣದ ಉಪಯೋಗ**

ಆಧುನಿಕರಣ ಮತ್ತು ಜಾಗತೀಕರಣದ ಪ್ರಭಾವದಿಂದಾಗಿ ಇಂದು ಕಣ ಸಂಸ್ಕೃತಿಯು ಕಾಣದಾಗಿದೆ. ನಿಜವಾದ ಕೃಷಿಕ ಕಣವನ್ನೇ ಅವಲಂಬಿಸಿರುತ್ತಾನೆ. ಇಡೀ ತನ್ನ ವರ್ಷದ ಭೂಮಿಗೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಈ ಕಣದಿಂದಲೇ ಆರಂಭವಾಗುತ್ತಿದ್ದವು. ಕಣ ಮಾಡುವ ಕೆಲಸವು ಸಾಮಾನ್ಯವಾಗಿ ರೈತರು ಸೋಮುವಾರ ಕಳೆದು ಮಂಗಳವಾರದಂದು ಇಲ್ಲವೆ ಶುಕ್ರವಾರದಂದು ಹಮ್ಮಿಕೊಳ್ಳುತ್ತಾರೆ. ಈ ದಿನಗಳು ಶುಭಮಹೂರ್ತಗಳಿಂದ ಆರಂಭವಾಗುತ್ತವೆ ಎಂಬುದು ಕೃಷಿ ಚಟುವಟಿಕೆಯಲ್ಲಿರುವ ನಂಬಿಕೆ. ಸಾಮಾನ್ಯವಾಗಿ ಈ ಕಣ ಸಂಸ್ಕೃತಿಯು ಬನ್ನೀ ಗಿಡದ ಸುತ್ತಲೇ ನಡೆಯುತ್ತದೆ. ಅಂದರೆ ಕಣ ಮಾಡುವ ಜಾಗದಲ್ಲಿ ಬನ್ನಿ ಗಿಡ ಇದ್ದರೆ ತುಂಬಾ ಒಳ್ಳೆಯದು ಆ ಬನ್ನಿ ಗಿಡಕ್ಕೆ ಒಂದು ಕಟ್ಟೆಯನ್ನು ನಿರ್ಮಿಸಲಾಗುತ್ತದೆ. ಕಣ ಮಾಡುವ ಜಾಗವು ಸಮತಟ್ಟಿನಿಂದ ಕೂಡಿರಬೇಕು ಮತ್ತು ಬಿರುಸಾದ ನೆಲವಿರ ಬೇಕು ಕಣಮಾಡಲು ಪ್ರಶಸ್ತ ದಿನಗಳನ್ನು ನೋಡುವುದು ಉಂಟು. ಸಾಮಾನ್ಯವಾಗಿ ಶ್ರಾವಣ ಅಥವಾ ಪುಷ್ಯ ನಕ್ಷತ್ರಗಳಲ್ಲಿ ಈ ಪ್ರಕ್ರಿಯೇ ನಡೆಯುತ್ತದೆ. ಎಲ್ಲವೂ ದೈವದಿಂದಲೇ ನೋಡುವ ನಮ್ಮ ಕೃಷಿಕರು ತಾವು ಮಾಡಲಿರುವ ಕಣದಲ್ಲಿ ಐದು ಸಮಾನ ಮಣ್ಣಿನ ಗುಂಪುಗಳನ್ನು ಮಾಡಿ ಅವುಗಳಿಗೆ ಅರಿಶಿನ ಕುಂಕುಮ ಬಳಿದು ನೈವೇಧ್ಯ ಮಾಡುವುದರ ಮೂಲಕ ಪೂಜೆ ಮಾಡಲಾಗುತ್ತದೆ. ಇಲ್ಲಿ ಕಣದಲ್ಲಿರುವ ಬನ್ನಿ ಗಿಡವು ಎಲ್ಲಾ ಚಟಿವಟಿಕೆಗಳಿಗೂ ಪ್ರಧಾನವಾಗಿರುತ್ತದೆ.

**ಮೇಟಿ ಕಂಬ ನೆಡುವ ವಿಧಾನ**

ಶ್ರಾವಣ ಅಥವಾ ಪುಷ್ಯ ನಕ್ಷತ್ರದಲ್ಲಿ ತಯಾರಾಗುವ ಕಣದಲ್ಲಿ ರಾಶಿಯನ್ನು ಮಾಡುವ ಸಂದರ್ಭದಲ್ಲಿ ಪ್ರಧಾನವಾಗಿ ಬೇಕಾಗಿದ್ದುದು ಮೇಟಿಕಂಬ. ರಾಶಿಮಾಡುವ ಇಡೀ ವ್ಯವಸಾಯದ ಕೇಂದ್ರ ಬಿಂದುವಾದಂತೆ ಸಮೃದ್ಧಿಯ ಸಂಕೇತವನ್ನಾಗಿಯೂ ಅದನ್ನು ಬಳಸುತ್ತಾರೆ. ಮೇಟಿಕಂಬವನ್ನು ತಯಾರಿಸಲು ಬನ್ನಿ ಅಥವಾ ಆರಿ ಮರದ ತುಂಡನ್ನು ಬಳಸುವರು. ಈ ಕಂಬವನ್ನು ಕರ್ನಾಟಕದ ವಿವಿಧ ಕಡೆಗಳಲ್ಲಿ ವಿವಿಧ ರೀತಿಯಾಗಿ ಬಳಸುವರು. ಹೆಚ್ಚಾಗಿ ಪೂಜೆಗೆ ಅರ್ಹವಾದ ಮರವನ್ನೇ ಬಳಸುವರು. ಇದು ೬ ಅಡಿ ಉದ್ದ ೧೦ ರಿಂದ ೧೨ ಅಂಗುಲ ದಪ್ಪವಾಗಿರುತ್ತದೆ. ನೆತ್ತಿಯ ಮೇಲೆ ಕವಲಾಗಿರುತ್ತದೆ. ಒಂದರಿಂದ ಒಂದುವರೆ ಅಡಿ ಉದ್ದದ ಕುಣಿ ತೆಗೆದು ಈ ಮೇಟಿಯನ್ನು ನೆಡಲಾಗುತ್ತದೆ. ಮೇಟಿಯ ಪೂಜೆಯು ಕೂಡ ಮಹತ್ವದ್ದಾಗಿದೆ. ಸಿಹಿ ಅಡುಗೆಯನ್ನು ಮಾಡುವುದರ ಮೂಲಕ ಅದರ ಅನುಷ್ಠಾನ ಮಾಡಲಾಗುತ್ತದೆ. ಈ ಮೇಟಿಯನ್ನು ಊಳಲು ತೋಡಿರುವ ಕುಣಿಯ ಮಣ್ಣನ್ನು ಹತ್ತಿರದ ರಸ್ತೆಗೆ ಅಡ್ಡಲಾಗಿ ೫ ಸಣ್ಣಸಣ್ಣ ಗುಂಪುಗಳನ್ನಾಗಿ ಸುರಿಯುತ್ತಾರೆ. ಇದು ರೈತನ ಸಂವಹನ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ಸಂವಹನ ಮಾಧ್ಯಮಗಳಿಲ್ಲದ ದಿನದಲ್ಲಿ ಇಂದಿನ ಸುಸ್ವಾಗತ ಬೋರ್ಡಿನಂತೆ ಕೆಲಸ ಮಾಡುತ್ತದೆ. ಈ ಮಣ್ಣಿನ ದಿನ್ನೆಗಳನ್ನು ನೋಡಿದೊಡನೆಯೇ ಇಲ್ಲಿ ಕಣದ ಕಾರ್ಯ ನೆಯುತ್ತಿದೆ ಎಂದು ಭಾವಿಸಿಕೊಮಡು ಆಯಾಗಾರರು ಕಣಕ್ಕೆ ಬಂದು ತಮ್ಮ ಪಾಲಿನ ಆಯಾವನ್ನು ಪಡೆದುಕೊಳ್ಳುತ್ತಿದ್ದರು. ಕಣದ ಮೇಟಿಯು ಶಾಶ್ವತವಾಗಿರಬೇಕು ಎಂಬ ಆಶಯದೊಂದಿಗೆ ತರಿ ಮರದ ತುಂಡನ್ನು ಬಳಸಲಾಗುತ್ತಿತ್ತು. ಶಾಶ್ವತ ಮೇಟಿಗಲ್ಲು ಸುಮಾರು ೧೦ ವರ್ಷಗಳವರೆಗೆ ಏನು ಆಗುತ್ತಿರಲ್ಲಿಲ್ಲ. ರೋಲರ್ ಕಲ್ಲುಗಳು ಬಂದ ಮೇಲೆ ಈ ಮೇಟಿಯ ಪ್ರಭಾವ ಬಹಳ ಕಡಿಮೆ ಆಗಿರುವುದುಂಟು. ಈ ಕುರಿತಂತೆ ಸುಮಾರು ೫೦-೬೦ ವರ್ಷಗಳ ಹಿಂದೆಯೇ ಶಾಶ್ವತ ಮೇಟಿಗಳನ್ನು ಉಪಯೋಗಿಸುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ.

**ಹಂತಿಕಟ್ಟುವ ವಿಧಾನ**

ಹಂತಿ ಎನ್ನುವ ಪದವು ಪಂತಿ, ಪಂಗ್ತಿ, ಹಣತಿ, ಬಂತಿ, ಹಂತಿ ಆಗಿ ಪರಿ ವರ್ತನೆಗೊಂಡಿದೆ ಅಂದರೆ ಸಾಲು ಎಂದು ಅರ್ಥವನ್ನು ನೀಡುತ್ತದೆ. ಕೃಷಿ ಸಂಸ್ಕೃತಿಯಲ್ಲಿ ಇದನ್ನು ಪಂತಿ ಗಟ್ಟು, ಹಂತಿಗಟ್ಟು ಎಂದು ಬಳಸುವುದುಂಟು. ಹಂತಿಕಟ್ಟು ಎನ್ನುವುದು ತೆನೆಗಳನ್ನು ತುಳಿಸುವುದಕ್ಕಾಗಿ ದನಗಳನ್ನು ಸಾಲಾಗಿ ಕಟ್ಟು (ಕನ್ನಡ ನಿಘಂಟು, ೫೦೬೨-೫೦೬೩) ಎಂದಾಗುತ್ತದೆ. ತೆನೆಯನ್ನು ತುಳಿಸುವುದು ಅಂದರೆ ಇಲ್ಲಿ ಎತ್ತುಗಳೇ ಪ್ರಧಾನವಾಗಿರುತ್ತವೆ. ಅಷ್ಟೇ ಅಲ್ಲ ಈ ಭಾಗದಲ್ಲಿ ಗೊಡ್ಡು ಬಿದ್ದ ಹಸು, ಎಮ್ಮೆಗಳನ್ನು ಬಳಸುವುದುಂಟು ಕರ್ನಾಟಕದ ಉತ್ತರ ಭಾಗದಲ್ಲಿ ಕೇವಲ ಎತ್ತು ಹಾಗೂ ಪಳಗದ ಹೋರಿಗಳನ್ನು ಬಳಸುವುದುಂಟು.

ಹಂತಿ ಎಂದರೆ ಕಣದಲ್ಲಿ ನೆಟ್ಟ ಮೇಟಿ ಕಂಬವನ್ನು ಕೇಂದ್ರವಾಗಿಸಿಕೊಂಡು ಎತ್ತುಗಳು ಅದರ ಸುತ್ತಲೂ ಸುತ್ತುವ ರೀತಿ ಸರಳವಾಗಿ ಹೇಳುವುದಾದರೆ ತೆನೆಯಿಂದ ಕಾಳುಗಳನ್ನು ಬೇರ್ಪಡಿಸುವ ವಿಧಾನ. ಈ ರೀತಿಯಾಗಿ ಎತ್ತುಗಳು ಸುತ್ತುವಾಗ ಅವುಗಳ ಗೊರಸಿಗೆ ತೆನೆ, ಕಾಯಿ ಸಿಕ್ಕು ಕಾಳುಗಳು ಬೇರ್ಪಡುತ್ತವೆ. ಹಂತಿ ಕಟ್ಟುವುದು ಸಾಮಾನ್ಯವಾಗಿ ಮುಂಗಾರಿನ ಜೋಳ, ಹಿಂಗಾರಿನ ಬಿಳಿ ಜೋಳ ಬಹುಮುಖ್ಯವಾದವು. ನಂತರದ ಸ್ಥಾನ ಗೋದಿ ರಾಶಿ ಮತ್ತು ಸಜ್ಜೆ ರಾಶಿಯನ್ನು ಮಾಡಲು ಪಂಕ್ತಿಯನ್ನು ಕಟ್ಟುವುದು ಬಳಕೆಲ್ಲಿದೆ. ಈ ಹಂತಿ ಕಟ್ಟುವಿಕೆಯು ಸಾಮಾನ್ಯವಾದ ರಾಶಿಯನ್ನುಂಟು ಮಾಡುತ್ತಿರಲಿಲ್ಲ ಮೊದಲು ೧೦೦ ಚೀಲ ೨೦೦ ಚೀಲದ ರಾಶಿಯನ್ನು ೧೦೦ ಎತ್ತುಗಳು ತುಳಿದು ರಾಶಿ ಮಾಡುತ್ತಿದ್ದ ಬಗ್ಗೆ ಮಾಹಿತಿ ಸಿಗುತ್ತದೆ. ಇಂತಹ ರಾಶಿಗೆ ತಿಂಗಳುಗಟ್ಟಲೆ ತಮ್ಮ ಎತ್ತು ಬಂಡಿಗಳ ಸಮೇತ ಬೀಗರು ನೆಂಟರು ಸ್ನೇಹಿತರು ಮತ್ತು ಮುಯ್ಯಾಕಾರರು ಭಾಗಿಯಾಗುತ್ತಿದ್ದರು. ಕೃಷಿಕರದು ಶ್ರಮದ ಜೊತೆಗೆ ಕ್ರಮವರಿತ ಜೀವನ. ಮೇಟಿಗೆ ಕಟ್ಟುವ ಎತ್ತುಗಳು ಹೆಚ್ಚಾಗಿ ಹಳೆಯ ಮತ್ತು ನಡುವಯಸ್ಸಿನವು ಇದಕ್ಕೆ ಪ್ರಭಲ ಕಾರಣವಿದೆ. ಹಳೇ ಎತ್ತುಗಳು ಹೆಜ್ಜೆಯನ್ನು ಅರಿತಿರುವುದರಿಂದ ಸರಾಗವಾಗಿ ನಡೆಯಲಾಗುವುದಿಲ್ಲ. ಆಗಂತ ಅವುಗಳನ್ನು ಬಿಡದೆ ಮೇಟಿಗೆ ಹತ್ತಿರವಿರುವುದರಿಂದ ಕೊನೆ ಎತ್ತು ಎರಡು ಸುತ್ತು ಸುತ್ತಿ ಬಂದರೆ ಮೇಟಿಯ ಪಕ್ಕದಲ್ಲಿರುವ ಎತ್ತು ಒಂದೇ ಸುತ್ತು ಸುತ್ತಿದಂತಾಗುತ್ತದೆ. ಸಾಮಾನ್ಯವಾಗಿ ಒಂದು ಚಕ್ರದ ಗತಿಯನ್ನು ಗಮನಿಸಿದರೆ. ಇದರ ಸ್ಪಷ್ಟ ಅರ್ಥ ಬರಬಹುದು ಆದ ಕಾರಣ ಮೇಟಿ ಪಕ್ಕದಲ್ಲಿ ವಯಸ್ಸಾದ ಎತ್ತುಗಳನ್ನು ಕಟ್ಟಲಾಗುತ್ತಿತ್ತು.

**ರಾಶಿ ಪೂಜಾ ವಿಧಾನ**

ರಾಶಿ ಅಥವಾ ಧಾನ್ಯ ಮತ್ತು ಬೆಳೆ ಪೂಜೆ ಅವುಗಳಿಗೆ ಆತ್ಮವಿದೆ ಎನ್ನುವ ನೆಲೆಯಿಂದ ಹುಟ್ಟಿಕೊಂಡದ್ದು ಆದಿವಾಸಿ ಸಮುದಾಯಗಳಲ್ಲಿ ಒಂದು ಹೊಲದಲ್ಲಿ ಸಮೃದ್ಧ ಬೆಳೆ ಇದ್ದರೆ ಅದರಲ್ಲಿ ಧಾನ್ಯ ಮಾತೃವಿನ ಆತ್ಮವಿದೆ ಎನ್ನುವ ನಂಬಿಕೆ ಇದೆ. ಈ ಮಾತೃ ಬೆಳೆ ಕಟಾವು ಮಾಡುವವರೆಗೂ ಎತ್ತಲೂ ಕದಲುವುದಿಲ್ಲ. ಇಷ್ಟೆಲ್ಲಾ ಕೃಷಿ ಆಚರಣೆಗಳು ಭೂಮಿಯ ಮಡಿಲಿನಲ್ಲಿ ನಡೆದ ಮೇಲೆ ಧಾನ್ಯ ರಾಶಿಗೆ ಕಣದಲ್ಲಿ ಪೂಜೆ ಪುನಸ್ಕಾರಗಳು ಜರುಗುತ್ತವೆ. ತೂರಿದ ರಾಶಿಯನ್ನು ಎರಡು ಹೆಸರಿನಿಂದ ಗುರುತಿಸುತ್ತಾರೆ. ಮೇಟಿ ಕಂಬಂಕ್ಕೆ ಗುಂಪು ಹಾಕಿದ ರಾಶಿಯನ್ನು ತನು ರಾಶಿ ಅಥವಾ ತೆಲಿ ರಾಶಿ ಎಂದು ಕರೆಯುತ್ತಾರೆ. ಫಸಿಲಿನ ಶುದ್ಧ ಮತ್ತು ಮುಖ್ಯವಾದ ಪ್ರಥಮ ರಾಶಿ ಇದು ತೂರಿದ ಭಾಗದಲ್ಲಿ ಅಂದರೆ ಮೆಟ್ಟಿನ ಕೆಳಗಡೆ ಮುಖ್ಯರಾಶಿ ೩/೧ ಭಾಗದಷ್ಟು ಉಳಿಸುತ್ತಾರೆ. ಇದಕ್ಕೆ ದಾನ ಧರ್ಮದ ರಾಶಿ, ಭೂಧಾನ ರಾಶಿ ಎಂದು ಕರೆಯುತ್ತಾರೆ. ಈ ವಿಂಗಡಣೆಯು ತುಂಭಾ ಸಾಂಕೇತಿಕವಾಗಿದೆ. ಉತ್ಪಾದನೆಯ ಸಮಾನ ಹಂಚಿಕೆಯನ್ನು ಇಲ್ಲಿ ಗಮನಿಸಬಹುದು ದಾನ ಧರ್ಮದ ರಾಶಿಯನ್ನು ಒಕ್ಕಲಿಗ ಮುಟ್ಟುವುದಿಲ್ಲ ದಾನ ಧರ್ಮ ಮಾಡಿ ಉಳಿದರೆ. ಅದನ್ನು ಕಣದಲ್ಲಿ ದುಡಿದ ಹೊಲೆ ಮಕ್ಕಳಿಗೆ ಬಿಟ್ಟು ಬಿಡುತ್ತಾರೆ. ತನ್ನ ಪಾಲಿನ ಉತ್ಪನ್ನವನ್ನು ಮಾತ್ರ

ತಾನೊಯ್ಯುತ್ತಾನೆ. ಕಂಬಕ್ಕೆ ರಾಶಿ ಹಾಕಿದ ಜೋಳದ ಗುಂಪಿಯ ಮೇಲೆ ಸೂರ್ಯ ಚಂದ್ರರನ್ನು ನವಗ್ರಹಗಳನ್ನು ಬಿಡಿಸಿರುತ್ತಾರೆ. ಹೂವು ಪತ್ರಿಗಳನ್ನು ರಾಶಿಯ ಮೇಲೆ ಚೆಲ್ಲುತ್ತಾರೆ. ರಾಶಿ ಸುತ್ತಾ ಮರೆ ಕೋಲಿನಿಂದ ಗೆರೆ ಹಾಕಿ ಅದರಲ್ಲಿ ಒಲೆಯ ಬೂದಿ ತಂದು ಸುತ್ತಲೂ ಪಂಕ್ತಿಯ ರೀತಿ ಹಾಕುತ್ತಾರೆ ಇದಕ್ಕೆ ಕರಿಕಟ್ಟುವುದು ಎಂತಲೂ ಕರೆಯುತ್ತಾರೆ. ಯಾವ ದುಷ್ಟ ಶಕ್ತಿಗಳೂ ತೊಂದರೆ ಮಾಡದಿರಲಿ ಎನ್ನುವ ಭಯದ ಭಾವನೆ ಇಲ್ಲಿದೆ.

**ವಕ್ತೃಗಳ ವಿವರ**

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ವಿಳಾಸ |
|---|---|---|---|---|
| ೧. | ಶೇಖರಪ್ಪ | ೭೯ | ವ್ಯವಸಾಯ | ಹಂಪಾಪಟ್ಟಣ,ಬಳ್ಳಾರಿ |
| ೨. | ಶಂಕರಪ್ಪ | ೬೫ | ಪೂಜಾರಿ | ಕೊಡಿಮಂಚೆನಹಳ್ಳಿ, ಬೆಂಗಳೂರು |
| ೩. | ಲಕ್ಷ್ಮಮ್ಮ | ೭೦ | ಗ್ರಾಮಪಂಚಾಯ್ತಿ ಮಾಜಿ ಅಧ್ಯಕ್ಷೆ | ಕುರುಬರಹಳ್ಳಿ |
| ೪. | ಉಮಾಪತಿ | ೫೫ | ಕೃಷಿಕ | ಸಿರಿಗೇರಿ |
| ೫. | ಚನ್ನಬಸಪ್ಪ | ೪೭ | ಪೋಲೀಸ್ | ಹುನುಗುಂದ |
| ೬. | ಶಿವುಕುಮಾರ್ | ೬೨ | ಕೃಷಿಕ | ಗುಲಬರ್ಗ |
| ೭. | ಶಶಿಕಲಾ | ೫೨ | ಗೃಹಿಣಿ | ಹರಪನಹಳ್ಳಿ |

**ಆಧಾರ ಗ್ರಂಥಗಳು**


ಟೇಲರ್ ಇ ಬಿ, *ಪುರಾತನ ಸಂಸ್ಕೃತಿ*, (ಜೆ ಪಿ ಘುಟ್ನಮ್ಸ್ ಸನ್ಸ್, ನ್ಯೂಯಾರ್ಕ:೧೮೭೧).

ಮೇತ್ರಿ ಕೆ ಎಂ ಮತ್ತು ಮೃತ್ಯುಂಜಯ ರುಮಾಲೆ, *ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ* (ಗುರು ಕಂಪ್ಯೂಟರ್ಸ್ ಕಾಳಮ್ಮ ಬೀದಿ, ಬಳ್ಳಾರಿ:೨೦೦೮).

ಬೌಕರ್ ಜೆ ಡಬ್ಲ್ಯೂ, *ದಿ ಸೈನ್ಸ್ ಆಫ್ ಗಾಡ್*, (ಕ್ಲಾರೆಂಡನ್ ಪ್ರೆಸ್,ಆಕ್ಸ್ಫರ್ಡ:೧೯೭೩:೭).

ರಿಟ್ಜರ್ ಜಿ, *ಕಾಂಟೆಂಪ್ರರಿ ಸೋಷಿಯಾಲಾಜಿಕಲ್ ಥಿಯರಿ ಅಂಡ್ ಇಟ್ಸ್ ಕ್ಲಾಸಿಕಲ್ ರೂಟ್ಸ್*, (ದಿ ಬೇಸಿಕ್ಸ್, ಮೆಗ್ರಾಯಿಲ್, ಬೋಸ್ಟನ್ ಎಮ್ ಎ:೨೦೦೬).

ವೀರಭದ್ರಗೌಡ, *ಲಾಳಗೊಂಡ ಲಿಂಗಾಯತರು*, ಎಂ ಎಂ ಕಲಬುರ್ಗಿ, *ಲಿಂಗಾಯತ* (ಸಿ ಎಸ್ ಎಂ ವಿ ಎಜುಕೇಶನ್ ಸೊಸೈಟಿ, ಇಳಕಲ್:೨೦೦೯).

ಶಶಿಕಲಾ (೫೫), ವಕ್ತೃಗಳು, ಹರಪನಹಳ್ಳಿ ದಾವಣಗೆರೆ ಜಿಲ್ಲೆ.

ಶೇಖರಪ್ಪ (೮೦) ಹಂಪಾಪಟ್ಟಣ, ಹಗರಿಬೋಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲಾ

Buchan, Craig (November 7–10, 2004). Paper No. 207-8 - Linking Subduction Initiation, Accretionary Orogenesis And Supercontinent Assembly. 2004 Denver Annual Meeting. Geological Society of America. Retrieved 2010-01-18.

## ಅಧ್ಯಾಯ: ಐದು

## ಲಾಳಗೊಂಡ ಸಮುದಾಯದ ಪ್ರಸ್ತುತ ಸ್ಥಿತಿಗಳು

೫.೧. ಲಾಳಗೊಂಡ ಸಮುದಾಯದ ಜಿಲ್ಲಾವಾರು ಜನಸಂಖ್ಯೆ

೫.೨. ಲಾಳಗೊಂಡ ಸಮುದಾಯದ ಜಿಲ್ಲಾವಾರು ಕುಟುಂಬಗಳ ಶೇಕಡ ಪ್ರಮಾಣ

೫.೩. ಲಾಳಗೊಂಡ ಸಮುದಾಯದ ವಯೋಮಾನದ ಪ್ರಮಾಣ

೫.೪. ಲಾಳಗೊಂಡ ಸಮುದಾಯದ ವೈವಾಹಿಕ ಸ್ಥಿತಿಗತಿ

೫.೫. ಲಾಳಗೊಂಡ ಸಮುದಾಯದ ವಾಸದ ನೆಲೆಯ ಸ್ವರೂಪ

೫.೬. ಲಾಳಗೊಂಡ ಸಮುದಾಯದ ಕೃಷಿಭೂಮಿ ವಿವರ

೫.೭. ಲಾಳಗೊಂಡ ಸಮುದಾಯದ ಜೀವನಾಧಾರ ವೃತ್ತಿಗಳು

೫.೮. ಲಾಳಗೊಂಡ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ

೫.೯. ಲಾಳಗೊಂಡ ಸಮುದಾಯದ ಮೂಲಭೂತ ಸೌಲಭ್ಯಗಳು

## ಅಧ್ಯಾಯ: ಐದು

# ಲಾಳಗೊಂಡ ಸಮುದಾಯದ ಪ್ರಸ್ತುತ ಸ್ಥಿತಿಗಳು

ಮಾನವ ಸಮಾಜ ನಿಂತ ನೀರಾಗದೇ, ಹರಿಯುವ ನೀರಿನಂತೆ ನಿತ್ಯಪರಿವರ್ತನಾ ಶೀಲವಾದದ್ದು, ಈ ಪರಿವರ್ತನೆಯಿಂದಲೇ ಅನೇಕ ನಾಗರಿಕತೆಗಳು ಏಳು –ಬೀಳನ್ನು ಕಂಡು ಸ್ಥಿತ್ಯಂತರಕ್ಕೆ ಒಳಗಾಗಿ ಆಧುನಿಕತೆಯತ್ತಾ ನಡೆದುಕೊಂಡು ಬಂದಿದೆ. ಆದಿಮಾನವನು ಪೂರ್ವದಲ್ಲಿ ಅಲೆಮಾರಿಯಾಗಿ ಆಹಾರಕ್ಕಾಗಿ ಬೇಟೆಯಾಡುತ್ತಾ, ಪ್ರಾಣಿ–ಪಕ್ಷಿ, ಗೆಡ್ಡೆ–ಗೆಣಸುಗಳನ್ನು ತಿನ್ನುತ್ತಾ ಬದುಕುತ್ತಿದ್ದನು. ನಂತರ ಒಂದೆಡೆ ನೆಲೆನಿಂತು ತನ್ನದೇ ಆದ ಕುಟುಂಬ, ಸಮುದಾಯ ಮತ್ತು ಸಮಾಜವನ್ನು ನಿರ್ಮಿಸಿಕೊಂಡು ಸಮಾಜ ಮತ್ತು ಸಂಸ್ಕೃತಿಯನ್ನು ಕಟ್ಟಿಕೊಂಡನು. ನಿಧಾನಗತಿಯಲ್ಲಿ ಸಮಾಜವು ಬೆಳೆದಂತೆ ಅನೇಕ ರೂಢಿಗಳು, ನೈತಿಕಮೌಲ್ಯಗಳು, ಆಚಾರ–ಪದ್ಧತಿಗಳು ಮತ್ತು ಅನೌಪಚಾರಿಕ ಶಿಕ್ಷಣದಿಂದ ಸಮಾಜ ಸರಳತೆಯಿಂದ ಕೂಡಿತ್ತು. ಭಾರತೀಯ ಸಮಾಜದಲ್ಲಿ ಬುಡಕಟ್ಟುಗಳಿಗೆ, ಅಲೆಮಾರಿಗಳಿಗೆ ಯಾವುದೇ ರೀತಿಯ ತೊಂದರೆಗಳು ಇರಲಿಲ್ಲ. ಆರ್ಯರು ಭಾರತಕ್ಕೆ ಬಂದ ನಂತರ ಸಮಾಜದಲ್ಲಿ ಅನೇಕ ಪರಿವರ್ತನೆಗಳು ಕಂಡುಬಂದವು. ಅನೇಕ ಸಮುದಾಯಗಳು ಆರ್ಯರ ಆಕ್ರಮಣಕ್ಕೆ ತುತ್ತಾಗಿ ಜೀವನೋಪಾಯಕ್ಕಾಗಿ ಉತ್ತರಭಾರತದಿಂದ ದಕ್ಷಿಣಭಾರತಕ್ಕೆ ವಲಸೆ ಬಂದರು. ಕೆಲವರು ಅವರ ದಾಸರಾಗಿ ಅಲ್ಲಿಯೇ ಉಳಿದರು. ಭಾರತೀಯ ಸಂಸ್ಕೃತಿಯಲ್ಲಿ ಮತ್ತೊಂದು ತಿರುವು ಕಂಡಿತೆಂದರೆ ಅದು ಭಾರತಕ್ಕೆ ಯುರೋಪಿಯನ್ನರ ಆಗಮನ, ಅವರ ಅನೇಕ ಹೊಸಹೊಸ ಆವಿಷ್ಕಾರಗಳು ಇಡೀ ವಿಶ್ವವನ್ನೇ ಒಂದು ಕಪಿಮುಷ್ಠಿಯಲ್ಲಿ ಇಡಿಯುವಂತೆ ಕಂಡವು. ಇದರ ಪರಿಣಾಮ ಭಾರತೀಯರು ಬ್ರಿಟಿಷರ ದಾಸ್ಯಕ್ಕೆ ಒಳಗಾದರು. ಅದೂವರೆಗೂ ತಮ್ಮದೇ ಆದ ಮೌಲ್ಯ, ಆಚಾರ, ರೂಢಿಗಳನ್ನು ಉಳಿಸಿಕೊಂಡಿದ್ದ ಇವರು ಬ್ರಿಟಿಷರ ಕೈಗೊಂಬೆಗಳಾದರು. ಬುಡಕಟ್ಟುಗಳು ಕಾಡನ್ನು ತ್ಯಜಿಸುವಂತಾಯಿತು, ಬ್ರಿಟಿಷರು ಭಾರತೀಯರನ್ನು ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ಕೆಳಸ್ತರಕ್ಕೆ ತಳ್ಳುತ್ತಾ ಶಿಷ್ಟ ಸಂಸ್ಕೃತಿ ಎಂದು ತಮ್ಮ ಸಂಸ್ಕೃತಿಯನ್ನು ಹೇರಲ್ಪಟ್ಟರು, ಭಾರತದಲ್ಲಿ ವರ್ಣವ್ಯವಸ್ಥೆ ಮತ್ತು ಜಾತಿವ್ಯವಸ್ಥೆಗಳಲ್ಲಿ ಸಾಮಾಜಿಕವಾಗಿ ಏಣಿ–ಶ್ರೇಣಿಗಳು ನಿರ್ಮಾಣಗೊಂಡಿದ್ದವು. ಉಳ್ಳವರು ಸಮಾಜವನ್ನು ಆಳುತ್ತಿದ್ದರು, ಇದರ ಉಪಯೋಗವನ್ನು ಪಡೆದ ಬ್ರಿಟಿಷರು ಅವರನ್ನು ತಮ್ಮ ಗುಲಾಮರನ್ನಾಗಿಸಿಕೊಂಡು ಕೆಳವರ್ಗದ ಜನರನ್ನು ಶೋಷಣೆಗೆ ಒಳಪಡಿಸಿದ್ದರು. ವರ್ಗಸಮಾಜದಿಂದ

ರೂಪಿತಗೊಂಡಿರುವ ಈ ವಿದ್ಯಮಾನಗಳು ಪ್ರಬಲ ಜಾತಿವ್ಯವಸ್ಥೆ ಹಾಗೂ ವೈವಿಧ್ಯಮಯ ಸಂಸ್ಕೃತಿಯಿಂದ ರೂಪಗೊಂಡಿರುವುದು ಭಾರತೀಯ ಸಮಾಜವು ಸ್ಥಿತ್ಯಂತರಕ್ಕೆ ಕಾರಣವಾಗಿರುವುದನ್ನು ಕಾಣಬಹುದು.

ಆರ್ಯರ ಆಕ್ರಮಣದಿಂದ ಬೇಸತ್ತು ದಕ್ಷಿಣದೆಡೆಗೆ ಬಂದ ಅನೇಕ ದ್ರಾವಿಡ ವಂಶಗಳು ಅಲ್ಲಲ್ಲಿ ನೆಲೆಯೂರಿ ಜೀವನ ಸಾಗಿಸತೊಡಗಿದರು ಮತ್ತು ಕೆಲವೊಂದು ತಮ್ಮ ಮೂಲ ಸಂಸ್ಕೃತಿಗಳನ್ನು ಕಳೆದುಕೊಂಡು, ಕೆಲವೊಂದನ್ನು ಎರವಲಾಗಿ ಪಡೆದು ಬದುಕತೊಡಗಿದರು. ಇಂತಹ ವಿದ್ಯಮಾನದಲ್ಲಿ ಅನೇಕ ಸಮುದಾಯಗಳು ದಕ್ಷಿಣಭಾರತದಲ್ಲಿದ್ದ ರಾಜರ ಆಳ್ವಿಕೆಯಲ್ಲಿ ಊರ ಸತ್ತೆ ಪಡೆದು ಗೌಡ್ಕಿಯನ್ನು ಮಾಡತೊಡಗಿದರು. ಗ್ರಾಮಗಳಲ್ಲಿ ತಮ್ಮನ್ನು ಗುರುತಿಸಿಕೊಂಡು ಒಂದೆಡೆ ನೆಲೆನಿಂತರು ನಂತರ ಬಂದ ಬ್ರಿಟಿಷರು ಇಡೀ ಭಾರತವನ್ನು ತಮ್ಮ ಅಧೀನಕ್ಕೆ ವಶಪಡಿಸಿಕೊಂಡರು. ವಿಭಿನ್ನ ಸಾಮಾಜಿಕ ಪರಿಸರದ ಹಿನ್ನೆಲೆಯೊಂದಿಗೆ ಭಾರತಕ್ಕೆ ಬಂದು ಇಲ್ಲಿ ತಮ್ಮ ರಾಜಕೀಯ ಅಧಿಕಾರವನ್ನು ಭದ್ರಗೊಳಿಸುವ ಹವಣಿಕೆಯಲ್ಲಿದ್ದ ಚಾಣಕ್ಷ ಮತಿಗಳಾದ ಬ್ರಿಟಿಷರು ಇಲ್ಲಿನ ವಿಚಿತ್ರ ಹಾಗೂ ವಿಶಿಷ್ಟ ಸಾಮಾಜಿಕ ಸಂಸ್ಥೆಗಳನ್ನು ಅವು ಎಲ್ಲಿಯವರೆಗೆ ತಮ್ಮ ಸಾಂಪ್ರದಾಯಿಕ ಆಡಳಿತ ವೈಖರಿಗೆ ಅಡ್ಡಿಯಾಗುವುದಿಲ್ಲವೋ ಅಲ್ಲಿಯವರೆಗೆ ಹಾಗೆಯೇ ಬಿಟ್ಟು ಬಿಟ್ಟರು. ಯಾವಾಗ ಅನೇಕ ಬುಡಕಟ್ಟುಗಳು ಹಾಗೂ ಕೆಲವು ಸಮುದಾಯಗಳು ಗೂಢಾಚಾರಿ ಕೆಲಸವನ್ನು ಮಾಡುತ್ತಿದ್ದುದನ್ನು ಕಂಡುಕೊಂಡು ಅವುಗಳ ಪತನಕ್ಕೆ ಹೊಸ ತಂತ್ರವನ್ನು ಹೂಡಿದರು. ಅವರು ಪರಿಚಯಿಸಿದ ಹೊಸ ಮಾದರಿಯ ಔಪಚಾರಿಕ ಶಿಕ್ಷಣವನ್ನು ಪಡೆಯಲು ಯಾರು ಜಾತಿಯನ್ನಾಗಲಿ, ಧರ್ಮವನ್ನಾಗಲಿ ತ್ಯಾಗ ಮಾಡಬೇಕಾಗಿರಲಿಲ್ಲ. ಜಾತಿಯ ವಿಚಾರದಲ್ಲಿ ಬ್ರಿಟಿಷರು ತಟಸ್ಥಧೋರಣೆ ತೋರಿದರು. ಕ್ಲಿಷ್ಟ ಭಾರತೀಯ ಸಮಾಜವನ್ನು ಅರ್ಥಮಾಡಿಕೊಳ್ಳಲು ಜಾತಿ ಅಧ್ಯಯನ ಅನಿವಾರ್ಯವಾಯಿತು. ಜಾತಿ ಅಧ್ಯಯನಕ್ಕಾಗಿ ಹಲವು ಮಾನವಶಾಸ್ತ್ರಜ್ಞರನ್ನು, ಸಮಾಜಶಾಸ್ತ್ರಜ್ಞರನ್ನು ನೇಮಿಸಿದರು. ಇದರ ಫಲವಾಗಿ ಹಲವಾರು ಜಾತಿ ಅಧ್ಯಯನಗಳು ಆರಂಭವಾದವು. ಅವರು ಜಾರಿಗೆಗೊಳಿಸಿದ ಏಕರೂಪ ಪೌರಕಾನೂನು ಹಾಗೂ ಅಪರಾಧ ಸಂಹಿತಿಗಳು ಇಲ್ಲಿನ ಜಾತಿ ಪಂಚಾಯಿತಿಯನ್ನು ಮೊಟುಕುಗೊಳಿಸಿದವು. ಒಂದೇ ಮಾದರಿಯ ಕಾನೂನು ಹಾಗೂ ನ್ಯಾಯಾಲಯ ವ್ಯವಸ್ಥೆ ಜಾರಿಗೆ ಬಂದವು. ನಗರೀಕರಣದಿಂದಾಗಿ ಅನನ್ಯ ಜಾತಿಗಳು ಒಂದೆಡೆ ನೆಲೆನಿಂತು ಬಾಳುವಂತಾಯಿತು. ಜಾತಿಯುಲ್ಲಿ ಗಣನೀಯುವಾಗಿ ಪರಿವರ್ತನೆಗಳಾದವು. ಬ್ರಿಟಿಷರು ಸ್ಥಾಪಿಸಿದ ಕ್ರೈಸ್ತ ಮಷಿನರಿಗಳು ಹಲವು ಆಮಿಷಗಳನ್ನೊಡ್ಡಿ ಮತಾಂತರ ಹೊಂದುವಂತೆ ಮಾಡಿದರು. ಇದರಿಂದ ತಮ್ಮ ಮೂಲವನ್ನೆ ಕಳೆದುಕೊಂಡು ಹಲವು ಸಮುದಾಯಗಳು ಬೇರೆ ಸಂಸ್ಕೃತಿಯನ್ನು ಅಳವಡಿಸಿಕೊಂಡು ಇಂದು ಅತಂತ್ರ ಸ್ಥಿತಿಯಲ್ಲಿವೆ. ಅವುಗಳಲ್ಲಿ ಅನೇಕ ಬುಡಕಟ್ಟುಗಳು ಅಲೆಮಾರಿಗಳು ಇದ್ದಾರೆ. ಪ್ರಬಲ ವರ್ಗಗಳು ಆಳ್ವಿಕೆಯ ಕಾಲದಿಂದ ಬುಡಕಟ್ಟು ಅವೈಜ್ಞೆಗೆ ಒಳಗಾಗುತ್ತಲೇ ಬಂದಿವೆ. ತಮ್ಮ ಮೂಲ ಕಸುಬು, ಕುಲವನ್ನು ಬಿಟ್ಟು ಹೊರಗಿನ ಸಮುದಾಯಗಳ ಸಾಂಸ್ಕೃತಿಕ ಹೇರುವಿಕೆಯಿಂದ ತಮ್ಮ ಪ್ರಾಧಾನ್ಯತೆಯನ್ನು ಕಳೆದುಕೊಂಡಿವೆ.

ಫ್ರಾನ್ಸಿಸ್ ಬೂಖನಾನ್ ಹೇಳುವಂತೆ ಲಾಳಗೊಂಡರು ಕರ್ನಾಟಕದ ಬುಡಕಟ್ಟಿನ ಮೂಲದವರು. ಈ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಸ್ಥಿತಿಗತಿಗಳನ್ನು ತಿಳಿದುಕೊಂಡು ಸೂಕ್ತವಾದ ನೈಜ ಚಿತ್ರವನ್ನು ಆಧರಿಸಿ ಯೋಜನೆಗಳನ್ನು ರೂಪಿಸುವ ಅವಶ್ಯಕತೆ ಇದೆ. ಆದರೆ ಕರ್ನಾಟಕದಲ್ಲಿ ಲಾಳಗೊಂಡರು ವೀರಶೈವ ಲಿಂಗಾಯತದಲ್ಲಿ ಸೇರಿರುವುದರಿಂದ ಇವರಿಗೆ ಪ್ರತ್ಯೇಕವಾದ ಯೋಜನೆಗಳನ್ನು ರೂಪಿಸಲು ಈ ಅಧ್ಯಯನ ಅವಶ್ಯಕವಾಗಿದೆ.

ಲಾಳಗೊಂಡರನ್ನು ವೀರಶೈವ ಲಿಂಗಾಯತದಲ್ಲಿ ಗುರುತಿಸುವುದರಿಂದ ಇವರು ಕರ್ನಾಟಕದಾದ್ಯಂತ ಮುಖ್ಯವಾಗಿ ೧೪ ಜಿಲ್ಲೆಗಳಲ್ಲಿ ಚದುರಿ ಹೋಗಿದ್ದಾರೆ. ಕರ್ನಾಟಕದ ಮೀಸಲಾತಿ ಪಟ್ಟಿಯಲ್ಲಿ ೩ಬಿ ವೀರಶೈವ ಲಿಂಗಾಯತ ಎಂದು ಗುರುತಿಸಲಾಗಿದೆ. ಈ ಸಮುದಾಯದ ಜನಸಂಖ್ಯೆ ಹೇರಳವಾಗಿದ್ದರೂ ಸಹ ವೀರಶೈವದಲ್ಲಿ ಅನೇಕ ಸಮುದಾಯಗಳು ಸೇರಿರುವುದರಿಂದ ಗುರುತಿಸುವಿಕೆ ಕಷ್ಟಕರ. ಆದರೆ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಸರಿಯಾಗಿ ಗ್ರಹಿಸಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಒಟ್ಟು ೧೪ ಜಿಲ್ಲೆಗಳಲ್ಲಿ ನೆಲೆಸಿರುವ ಲಾಳಗೊಂಡ ಸಮುದಾಯದ ಜನಸಂಖ್ಯೆಯನ್ನು ಕ್ಷೇತ್ರಕಾರ್ಯದಿಂದ ಗುರುತಿಸಲಾಗಿದೆ ಹಾಗೂ ಪ್ರತ್ಯೇಕವಾಗಿ ೨೧೯ ಲಾಳಗೊಂಡ ಸಮುದಾಯದ ವ್ಯಕ್ತಿಅಧ್ಯಯನವನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯು ಅವರ ಬದುಕಿನ ಪ್ರಸ್ತುತ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಸಮುದಾಯದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಸ್ಥಿತಿಗತಿಗಳನ್ನು ಪ್ರಶ್ನಾವಳಿ ಮೂಲಕ ಸಂಗ್ರಹಿಸಿ ಕೋಷ್ಟಕಗಳ ಮೂಲಕ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಕೋಷ್ಟಕ: ೫.೧. ಸಮೀಕ್ಷೆಗೆ ಒಳಪಟ್ಟ ಒಟ್ಟು ಕುಟುಂಬಗಳು ಮತ್ತು ಲಾಳಗೊಂಡ ಲಿಂಗಾಯತರ ಲಿಂಗವಾರು ಜನಸಂಖ್ಯೆ (೨೦೧೫-೧೬)**

| ಒಟ್ಟು ಕುಟುಂಬಗಳು | ೮೭೪೩ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೨೨,೯೭೬ | ೫೪.೯೪ |
| ಮಹಿಳೆಯರು | ೧೮,೮೪೨ | ೪೫.೦೫ |
| ಒಟ್ಟು ಜನಸಂಖ್ಯೆ | ೪೧,೮೧೮ | ೧೦೦% |

ಲಾಳಗೊಂಡರ ಪ್ರಸ್ತುತ ಸ್ಥಿತಿ-ಗತಿಗಳ ಕುರಿತು ತಿಳಿಯಲು ಅಧ್ಯಾಯ ಒಂದರಲ್ಲಿ ತಿಳಿಸಿರುವಂತೆ ಇಡೀ ಕರ್ನಾಟಕವನ್ನು ಅಧ್ಯಯನ ವ್ಯಾಪ್ತಿಯನ್ನಾಗಿ ಇಟ್ಟುಕೊಂಡು ಜಿಲ್ಲೆಗಳಲ್ಲಿನ ಒಟ್ಟು ೮೭೪೩ ಕುಟುಂಬಗಳನ್ನು ಮಾದರಿ ಸಮೀಕ್ಷೆಗೆ ಒಳಪಡಿಸಲಾಗಿದೆ. ಈ ಸಮೀಕ್ಷೆಯ ಅನ್ವಯ ಒಟ್ಟು ೮೭೪೩

ಕುಟುಂಬಗಳಲ್ಲಿನ ಜನಸಂಖ್ಯೆ ೪೧,೮೧೮ ಇದ್ದು, ಇದರಲ್ಲಿ ೨೨,೯೭೬ ಪುರುಷರು ಹಾಗೂ ೧೮,೮೪೨ ಮಹಿಳೆಯರಿದ್ದಾರೆಂದು ಕೋಷ್ಟಕ ೫.೧ರಲ್ಲಿ ತೋರಿಸಲಾಗಿದೆ. ಮತ್ತೆ ಹಲವು ಕುಟುಂಬಗಳು ಈ ಸಮೀಕ್ಷೆಯಿಂದ ಹೊರ ಉಳಿದಿವೆ. ಕರ್ನಾಟಕದಲ್ಲಿ ೨೦೦೧ ರ ಜನಗಣತಿ ವರದಿ ಪ್ರಕಾರ ಲಾಳಗೊಂಡ ಸಮುದಾಯದ ೭೮೬೪ ಒಟ್ಟು ಕುಟುಂಬಗಳು ನೆಲೆಸಿವೆ. ಈ ಸಮುದಾಯದ ಕುರಿತು ಮೊದಲು ಕೆ ಎಂ ಮೇತ್ರಿ ಇವರ ವರದಿಯನ್ನು ಹೊರತುಪಡಿಸಿ ಯಾವುದೇ ಅಂಕಿ ಅಂಶಗಳು ದೊರೆಯದೇ ಇರುವುದರಿಂದ ಇಂದಿನ ಸಮೀಕ್ಷೆಯನ್ನು ತುಲನಾತ್ಮಕವಾಗಿ ನೋಡಿದಾಗ ಜನಸಂಖ್ಯೆ ಹೆಚ್ಚಳವಾಗಿದೆ ಎಂದು ತಿಳಿಯಬಹುದು ಮತ್ತು ಈ ಸಮುದಾಯದ ಹಲವರು ಉದ್ಯೋಗಾಕಾಂಕ್ಷೆಯಿಂದಾಗಿ ಕರ್ನಾಟಕದ ವಿವಿಧ ಪಟ್ಟಣಗಳಿಗೆ ಮತ್ತು ಹೊರರಾಜ್ಯಗಳಿಗೆ ಸಂಚರಿಸಿರುವುದು ಕಂಡುಬರುತ್ತದೆ. ಸಮೀಕ್ಷೆಯನ್ನು ಅವಲೋಕಿಸಿದಾಗ ಈಗಿರುವ ಜನಸಂಖ್ಯೆಗಿಂತ ಹೆಚ್ಚಾಗಿದ್ದುದು ಕಂಡು ಬಂದಿದ್ದು, ಅಕಾಲಿಕ ಮಳೆ ಮತ್ತು ಸೌಲಭ್ಯಗಳ ಕೊರತೆಯಿಂದ ಈ ಸಮುದಾಯಗಳು ಬೇರೆಬೇರೆ ಉದ್ಯೋಗಗಳಲ್ಲಿ ಬೆರೆತು ಹೋಗಿರುವುದನ್ನು ಗ್ರಹಿಸಬಹುದು. ಪ್ರಸ್ತುತ ಕೋಷ್ಟಕದ ಅನ್ವಯದಂತೆ ಪುರುಷರ ಮತ್ತು ಮಹಿಳೆಯರ ಲಿಂಗಾನುಪಾತದಲ್ಲಿ ಅತಿಯಾದ ಏರಿಳಿತ ಕಂಡುಬರುವುದಿಲ್ಲ.

**ಕೋಷ್ಟಕ: ೫.೧.೧ ಕಲಬುರ್ಗಿ(ಗುಲಬರ್ಗ) ಜಿಲ್ಲಾವಾರು ಜನಸಂಖ್ಯೆ ಹಂಚಿಕೆ**

| ಒಟ್ಟು ಕುಟುಂಬಗಳು | ೨೦೨ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೬೨೦ | ೬೦.೩೧ |
| ಮಹಿಳೆಯರು | ೪೦೮ | ೩೯.೬೮ |
| ಒಟ್ಟು ಜನಸಂಖ್ಯೆ | ೧೦೨೮ | ೧೦೦ |

ಗುಲಬರ್ಗ ಜಿಲ್ಲೆಯನ್ನು ಇಂದು ಕಲಬುರ್ಗಿ ಎಂದು ಕರೆಯಲಾಗುತ್ತದೆ. ಕಲಬುರ್ಗಿಯು ಉತ್ತರ ಕರ್ನಾಟಕದ ಮುಖ್ಯ ನಗರವಾಗಿದ್ದು ಕೇಂದ್ರಾಡಳಿತ ಮುಖ್ಯ ಕಛೇರಿಗಳನ್ನು ಒಳಗೊಂಡ ಕರ್ನಾಟಕದ ನಾಲ್ಕು ವಲಯಗಳಲ್ಲಿ ಒಂದು. ಇದು ರಾಷ್ಟ್ರಕೂಟರು, ಚಾಲುಕ್ಯ ಅರಸರುಗಳು ಆಳ್ವಿಕೆಗೆ ಒಳಪಟ್ಟಿದ್ದು ಚಾಲುಕ್ಯರು ಸುಮಾರು ಇನ್ನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ನಂತರ ಬಹುಮನಿ ಸುಲ್ತಾನರು, ಮೊಗಲರ ಆಳ್ವಿಕೆಗೂ ಒಳಪಟ್ಟಿತ್ತು. ಕಲಬುರ್ಗಿ ಜಿಲ್ಲೆಯು ಕರ್ನಾಟಕ ರಾಜ್ಯದ ರಾಜಧಾನಿ ಬೆಂಗಳೂರಿನಿಂದ ೬೨೩ ಕಿ ಮೀ ದೂರ ಮತ್ತು ಹೈದರಾಬಾದ್ ನಿಂದ ೨೨೦ ಕಿ ಮೀ ದೂರದಲ್ಲಿದೆ. ಸ್ವಾತಂತ್ರ್ಯ ಬರುವ ಮೊದಲು ಹೈದರಾಬಾದ್ ನಿಜಾಮರು ಈ ಜಿಲ್ಲೆಯ ಆಳ್ವಿಕೆ ನಡೆಸುತ್ತಿದ್ದರು. ೧೯೫೬ ರಲ್ಲಿ ಮೈಸೂರು ಪ್ರಾಂತ್ಯದಡಿಗೊಳಪಡಿಸಲಾಯಿತು. ಇಲ್ಲಿನ ಶರಣ ಬಸವೇಶ್ವರ ದೇವಸ್ಥಾನವು ಐತಿಹಾಸಿಕ ಪ್ರಸಿದ್ಧಿಪಡೆದಿದೆ. ಈ ಜಿಲ್ಲೆಯು ಒಟ್ಟು ೭ ತಾಲೂಕುಗಳನ್ನು

ಹೊಂದಿದ್ದು, ಕನ್ನಡ ಮತ್ತು ಉರ್ದು ಭಾಷೆಯನ್ನು ಹೆಚ್ಚಾಗಿ ಮಾತನಾಡುವರು ೨೦೧೧ ರ ಜನಗಣತಿಯ ಪ್ರಕಾರ ಕಲಬುರ್ಗಿಯ ಒಟ್ಟು ಜನಸಂಖ್ಯೆ ೨೫,೬೪,೮೯೨ ಇದ್ದು ಪುರುಷರ ಸಂಖ್ಯೆ ಮಹಿಳೆಯರಿಗಿಂತ ಅಧಿಕವಾಗಿದೆ.

ಕೋಷ್ಟಕ ೫.೨ ಪ್ರಕಾರ ಒಟ್ಟು ೨೦೨ ಲಾಳಗೊಂಡ ಕುಟುಂಬಗಳಿದ್ದು. ೧೦೨೮ ಜನಸಂಖ್ಯೆಯಲ್ಲಿ ಪುರುಷರು ೬೨೦, ಮಹಿಳೆಯರು ೪೦೮ ಇದ್ದಾರೆ. ಕಲಬುರ್ಗಿ ಜಿಲ್ಲೆಯು ಹೆಚ್ಚು ಉಷ್ಣತೆಯಿಂದ ಕೂಡಿದ ಪ್ರದೇಶ ಗರಿಷ್ಟ ತಾಪಮಾನ ೪೫ ರಿಂದ ೪೭ ಡಿಗ್ರಿಯವರೆಗೂ ಇರುತ್ತದೆ. ಮಳೆಯಾದಾರಿತ ಕೃಷಿ ಭೂ ಪ್ರದೇಶವನ್ನು ಅಧಿಕವಾಗಿ ಹೊಂದಿರುವ ಕಲಬುರ್ಗಿಯ ಜನರು ತೊಗರಿ, ಹತ್ತಿ, ಕಬ್ಬುಗಳನ್ನು ಹೆಚ್ಚಾಗಿ ಬೆಳೆಯುವರು. ಇಲ್ಲಿನ ಲಾಳಗೊಂಡ ಸಮುದಾಯದವರು ಬಸವೇಶ್ವರನ ಆರಾಧಕರು ಮತ್ತು ಶ್ರೀ ಶೈಲ ಪೀಠದ ಅನುಯಾಯಿಗಳು ಹೆಚ್ಚಾಗಿದ್ದಾರೆ.

**ಕೋಷ್ಟಕ: ೫.೧.೨ ಕೊಪ್ಪಳ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| | | |
|---|---|---|
| ಒಟ್ಟು ಕುಟುಂಬಗಳು | ೨೧೦ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೪೬೬ | ೫೧.೦೯ |
| ಮಹಿಳೆಯರು | ೪೪೬ | ೪೮.೯೦ |
| ಒಟ್ಟು ಜನಸಂಖ್ಯೆ | ೯೧೨ | ೧೦೦ |

ಕೊಪ್ಪಳ ಜಿಲ್ಲೆಯು ೧೯೯೭ರಲ್ಲಿ ರಚಿತವಾದದ್ದು. ಬಳ್ಳಾರಿ ಜಿಲ್ಲೆಯಿಂದ ವಿಭಜಿತವಾದ ಕೊಪ್ಪಳವು ತುಂಗಭದ್ರ ನದಿಯ ರೇಖೆಯಿಂದ ಬಳ್ಳಾರಿಯೊಂದಿಗೆ ಗಡಿರೇಖೆಯನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ಕೈಗಾರಿಕೆ ಮತ್ತು ಭತ್ತದ ಉತ್ಪಾದನೆಯಿಂದ ಪ್ರಸಿದ್ಧಿ ಪಡೆದಿದ್ದು, ಪುರಾತನದಲ್ಲಿ ಜೈನಧರ್ಮದ ನೆಲೆಯಾಗಿತ್ತು ಎಂಬುದಕ್ಕೆ ಇಲ್ಲಿರುವ ಜೈನ ಬಸದಿಯು ನಿದರ್ಶನವಾಗಿದೆ. ಬಾದಾಮಿ, ಕಲ್ಯಾಣ ಚಾಲುಕ್ಯರ ಮತ್ತು ವಿಜಯನಗರದ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವಾಗಿ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಈ ರೀತಿಯ ಚಾರಿತ್ರಿಕ ಹಿನ್ನೆಲೆ ಹೊಂದಿರುವ ಈ ಜಿಲ್ಲೆಯಲ್ಲಿ ವಿಜಯನಗರ ಅರಸರ ಆನೆಗೊಂದಿ ಮೂಲನೆಲೆಯು ಸೇರ್ಪಡೆಗೊಂಡಿದೆ. ಇದರ ವ್ಯಾಪ್ತಿಯಲ್ಲಿ ಕಾರಟಗಿಯಲ್ಲಿ ಭತ್ತ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲಾಗಿದ್ದು ತುಂಗಭದ್ರ ಆಣೆಕಟ್ಟಿನಿಂದ ಕೃಷಿಗೆ ನೀರಾವರಿ ಸೌಲಭ್ಯ ನೀಡಲಾಗಿದೆ. ಇದರಿಂದ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದ್ದು, ಜಮೀನು ಹೊಂದಿದ ಮತ್ತು ಕೃಷಿ ಕೌಶಲ್ಯ ಹೊಂದಿರುವ ವರ್ಗದವರೇ ಈ ಸೌಲಭ್ಯ ಪಡೆಯುತ್ತಿರುವರು.

ಲಾಳಗೊಂಡ ಸಮುದಾಯಗಳು ಇಲ್ಲಿ ನೀರಾವರಿ ಕೃಷಿ ವ್ಯವಸಾಯದಿಂದಾಗಿ ಆರ್ಥಿಕ ಭದ್ರತೆ ಕಂಡುಕೊಂಡಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿನ ಲಾಳಗೊಂಡರಿಗೆ ಹೋಲಿಸಿದರೆ ಇವರು ಹೆಚ್ಚು ಆರ್ಥಿಕವಾಗಿ

ಸದೃಢರಾಗಿರುವರು. ಇವರಲ್ಲಿನ ಕೆಲವು ಹಿರಿಯ ವಕ್ತೃಗಳನ್ನು ವಿಚಾರಿಸಿದಾಗ ಪೂರ್ವಿಕರು ವಿಜಯನಗರದ ಪತನ ನಂತರ ಬಹು ಕಾಲದಿಂದ ಇಲ್ಲಿಯೇ ನೆಲೆಸಿರುವರು ಎಂದು ತಿಳಿದು ಬರುತ್ತದೆ. ಮತ್ತೆ ಕೆಲವರು ಆಂಧ್ರಪ್ರದೇಶ ಮತ್ತು ತಮಿಳುನಾಡಿನಿಂದ ವಲಸೆ ಬಂದಿರುವುದಾಗಿಯು ತಿಳಿಯುತ್ತದೆ. ಸಮೀಕ್ಷೆಯಂತೆ ಒಟ್ಟು ೯೧೨ ಕುಟಂಬಗಳಲ್ಲಿ ೪೬೬ ಪುರುಷರು, ೪೪೬ ಮಹಿಳೆಯರು ಇದ್ದಾರೆ. ಕೊಪ್ಪಳ ಜಿಲ್ಲೆಯ ಗಂಗಾವತಿಯಲ್ಲಿ ಭತ್ತದ ಬೆಳೆ ಹೆಚ್ಚಾಗಿರುವುದರಿಂದ ಹಲವರು ಭತ್ತದ ವ್ಯಾಪಾರದಲ್ಲಿಯೂ ತೊಡಗಿದ್ದಾರೆ.

**ಕೋಷ್ಟಕ: ೫.೧.೩ ಗದಗ ಜಿಲ್ಲೆಯ ಜಿಲ್ಲಾವಾರು ಜನಸಂಖ್ಯೆ ಹಂಚಿಕೆ**

| ಒಟ್ಟು ಕುಟುಂಬಗಳು | ೧೬೩ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೪೭೫ | ೫೪.೨೮ |
| ಮಹಿಳೆಯರು | ೪೦೭ | ೪೬.೫೧ |
| ಒಟ್ಟು ಜನಸಂಖ್ಯೆ | ೮೭೮ | ೧೦೦ |

ಗದಗ ಜಿಲ್ಲೆಯು ಉತ್ತರ ಕರ್ನಾಟಕದ ಒಂದು ಜಿಲ್ಲೆ. ಪುರಾತನ ಕಾಲದಲ್ಲಿ ಗದಗನ್ನು ಕೃತಪುರ ಎಂದು ಕರೆಯಲಾಗುತ್ತಿತ್ತು. ಗದಗ ಜಿಲ್ಲೆಯು ೧೯೯೨ ಕ್ಕೂ ಮೊದಲು ಧಾರವಾಡ ಜಿಲ್ಲೆಯ ಭಾಗವಾಗಿತ್ತು ೧೯೯೨ ರಲ್ಲಿ ಸರಕಾರ ಗದಗ ಜಿಲ್ಲೆಯನ್ನು ರಚಿಸಿ ಶಿರಹಟ್ಟಿ, ನರಗುಂದ, ಮುಂಡರಗಿ, ರೋಣ, ಗಜೇಂದ್ರಗಡಗಳನ್ನು ಒಳಗೊಂಡ ಒಟ್ಟು ೫ ತಾಲೂಕುಗಳನ್ನು ಗದಗ ಜಿಲ್ಲಾ ವ್ಯಾಪ್ತಿಯಲ್ಲಿ ರಚಿಸಿತು. ಗದಗ ಜಿಲ್ಲೆಯು ಪುರಾತನ ಕವಿಗಳಿಗೆ ಪ್ರಸಿದ್ಧ. ಕುಮಾರವ್ಯಾಸ, ಪಂಪ, ಲಕ್ಷ್ಮೀಶರು ಮೂಲತಃ ಗದಗ ಜಿಲ್ಲೆಯವರು. ಚನ್ನವೀರಕಣಿವಿ, ಆಲೂರುವೆಂಕಟರಾಯರು ಸಹ ಈ ಜಿಲ್ಲೆಗೆ ಸೇರಿದವರು. ಗದಗ ಪಟ್ಟಣ ಜೈನ ದೇವಾಲಯಗಳಾದ ಪಾರ್ಶ್ವನಾಥ ಮತ್ತು ಮಹಾವೀರನಿಗೆ ಅರ್ಪಿತವಾಗಿವೆ. ಭಾರತ ರತ್ನ ಪಡೆದ ಭೀಮಸೇನ್ ಜೋಶಿ ಇದೇ ಜಿಲ್ಲೆಯವರು. ಗದಗನಲ್ಲಿ ಮಲಪ್ರಭ ಮತ್ತು ತುಂಗಭದ್ರಾ ಎರಡು ಪ್ರಮುಖ ನದಿಗಳು ಹರಿಯುತ್ತವೆ.ಇಲ್ಲಿನ ಪ್ರಮುಖ ಬೆಳೆಗಳು ಜೋಳ, ಸಜ್ಜಿ, ಸೇಂಗ, ಸೂರ್ಯಕಾಂತಿ, ಈರುಳ್ಳಿಗಳಾಗಿವೆ. ೨೦೧೧ ರ ಜನಗಣತಿಯ ಪ್ರಕಾರ ಒಟ್ಟು ೧೦,೬೫,೨೩೫ ಜನ ಸಂಖ್ಯೆಯನ್ನು ಹೊಂದಿದೆ. ಗದಗ ಜಿಲ್ಲೆಯು ಮೂಲತಃ ಉತ್ತರ ಕನಾಟಕದ ಭಾಗವಾದ್ದರಿಂದ ಬಿಸಿಲು ಹೆಚ್ಚಿರುವ ಮಳೆಯಾಧಾರಿತ ಕೃಷಿಯನ್ನು ಒಳಗೊಂಡಿರುವದರಿಂದ ಕೆಲವು ಬಾರಿ ಅನಾವೃಷ್ಟಿಯಿಂದಾಗಿ ಜನರು ಜಾನುವಾರುಗಳ ರಕ್ಷಣೆ ಮತ್ತು ತಮ್ಮ ಜೀವನವನ್ನು ಅರಸಿ ಬೇಸಿಗೆಕಾಲದಲ್ಲಿ ನಗರಗಳತ್ತ ಹಾಗೂ ನೀರಿನ ಪ್ರದೇಶಗಳ ಕಡೆಗೆ ಗುಳೆ ಹೋಗುವುದು ಉಂಟು. ಪ್ರಗತಿಯಲ್ಲಿ ಪ್ರತಿಯೊಂದು ರಂಗದಲ್ಲೂ ಇನ್ನೂ ಹಿಂದುಳಿದಿರುವ ಜಿಲ್ಲೆ ಇದಾಗಿದೆ

ಎಂದು ಹೇಳಬಹುದು. ಇಲ್ಲಿನ ಜನರ ಆರ್ಥಿಕ ಪರಿಸ್ಥಿತಿ ಮಟ್ಟ ಇನ್ನು ಸುಧಾರಿಸಿಲ್ಲವಾದ್ದರಿಂದ ಉನ್ನತ ವ್ಯಾಸಂಗವನ್ನು ಪಡೆಯಲು ಕಷ್ಟ ಬೀಳುವ ಪರಿಸ್ಥಿತಿ ಕಂಡು ಬರುತ್ತದೆ.

ಕೋಷ್ಟಕ ೫.೪ ನ ಅನ್ವಯ ಗದಗ ಜಿಲ್ಲೆಯಲ್ಲಿ ಲಾಳಗೊಂಡ ಸಮುದಾಯದವರ ಒಟ್ಟು ಕುಟುಂಬಗಳು ೧೬೩, ಒಟ್ಟು ಜನಸಂಖ್ಯೆ ೮೭೮ ಇದ್ದು, ಅದರಲ್ಲಿ ಪುರುಷರು ೪೭೫, ಮಹಿಳೆಯರು ೪೦೭ ಇರುತ್ತಾರೆ. ಪುರುಷರು ಅಧಿಕವಾಗಿದ್ದು ಒಟ್ಟು ಜನಸಂಖ್ಯೆಯ ಶೇಕಡ ೫೪.೨೮, ಮಹಿಳೆಯರು ಶೇಕಡ ೪೬.೫೧ ಇದ್ದಾರೆ. ಲಾಳಗೊಂಡ ಸಮುದಾಯಕ್ಕೆ ಸೇರಿದ ಶರಣೆ ಸಿಂದಿಗೇರಿ ನೀಲಮ್ಮ ಇವರು ಲಿಂಗೈಕ್ಯವಾದ ಸ್ಥಳ ಗದಗ ಜಿಲ್ಲೆಯ ಕದಡಿ ಗ್ರಾಮದಲ್ಲಿ ಇಲ್ಲಿ ಪ್ರತೀ ವರ್ಷ ಶ್ರಾವಣ ಮಾಸದಲ್ಲಿ ನೀಲಮ್ಮನ ಜಾತ್ರೆ ಜರುಗುವುದು ಅನೇಕ ಲಾಳಗೊಂಡ ಸಮುದಾಯದವರು ಈ ಜಾತ್ರೆಯಲ್ಲಿ ಪಾಲ್ಗೊಳ್ಳುವರು ಈ ಕದಡಿ ಮಠಕ್ಕೆ ಕುಡುಒಕ್ಕಲಿಗರು, ಕುರುಬರು, ಲಿಂಗಾಯತರು ಹೆಚ್ಚಾಗಿ ನಡೆದುಕೊಳ್ಳುವರು. ಮೂಲತಃ ಪುರುಷ ಪ್ರಧಾನ ಸಮುದಾಯವಾದ್ದರಿಂದ ಮಹಿಳೆಯರ ಸಂಖ್ಯೆ ಕಡಿಮೆ ಇರುವುದಕ್ಕೆ ಕಾರಣವಾಗಿದೆ. ಗ್ರಾಮೀಣ ವಾಸಿಗಳೇ ಹೆಚ್ಚಾಗಿರುವ ಲಾಳಗೊಂಡರಲ್ಲಿ ಶೈಕ್ಷಣಿಕ ಪ್ರಗತಿ ಪುರುಷ ಮತ್ತು ಮಹಿಳೆಯರಲ್ಲಿ ಹೆಚ್ಚಾಗಿ ಪದವಿ ಮಟ್ಟಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ. ಕೃಷಿ ಚಟುವಟಿಕೆಯಲ್ಲೂ ಲಾಳಗೊಂಡರು ಹಿಂದುಳಿದ್ದಿದ್ದಾರೆ. ಕಾರಣ ಅಕಾಲಿಕ ಮಳೆ ಹಾಗೂ ನೀರಾವರಿ ಸೌಲಭ್ಯ ಇಲ್ಲದಿರುವುದು. ಸಾಮಾಜಿಕ ಸ್ಥಾನಮಾನಗಳಲ್ಲಿ ಇನ್ನೂ ಸುಧಾರಿಸುವ ಮಟ್ಟದಲ್ಲೇ ಇರುವುದು ಕಂಡುಬರುತ್ತದೆ.

**ಕೋಷ್ಟಕ: ೫.೧.೪ ಚಿತ್ರದುರ್ಗ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| ಒಟ್ಟು ಕುಟುಂಬಗಳು | ೨೧೮ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೫೩೫ | ೫೭.೭ |
| ಮಹಿಳೆಯರು | ೩೯೧ | ೪೨.೨ |
| ಒಟ್ಟು ಜನಸಂಖ್ಯೆ | ೯೨೬ | ೧೦೦ |

ಚಿತ್ರದುರ್ಗ ಜಿಲ್ಲೆಯು ಕದಂಬ, ವಿಜಯನಗರ, ಹಾಗೂ ಹೈದರಾಲಿ, ಟಿಪ್ಪು ಕಾಲದಿಂದಲೂ ರಾಜಕೀಯ ಇತಿಹಾಸ ಇರುವುದನ್ನು ಕಾಣಬಹುದು. ಹಳೆ ಮೈಸೂರು ಭಾಗಕ್ಕೆ ಒಳಪಟ್ಟಿದ್ದ ಚಿತ್ರದುರ್ಗವು ಬಯಲು ಸೀಮೆಯಾಗಿದ್ದು, ರಾಜ್ಯದಲ್ಲಿ ಕಡಿಮೆ ಮಳೆ ಬೀಳುವ ಪ್ರದೇಶವೆಂದು ಗುರುತಿಸಲಾಗಿದೆ. ಜಿಲ್ಲೆಯಲ್ಲಿ ಚಿನ್ನಹಗರಿ ಮತ್ತು ವೇದಾವತಿ ಎಂಬ ತುಂಗಾಭದ್ರ ನದಿಯ ಉಪನದಿಗಳು ಹರಿದರೂ ಬರಪೀಡಿತ ಪ್ರದೇಶವಾಗಿದೆ. ಹವಮಾನ ವೈಪರೀತ್ಯಗಳು ಈ ನದಿಗಳು ಬತ್ತಿಹೋಗಲು ಕಾರಣವಾಗಿವೆ. ಹಾಗಾಗಿ ಲಾಳಗೊಂಡ ಸಮುದಾಯದವರು ಸಹ ಇತರೆ ಸಮುದಾಯಗಳಂತೆ ಬೇರೆಬೇರೆ ಉದ್ಯೋಗಗಳಿಗೆ ಅವಲಂಬಿತರಾಗಿ ಜೀವನ ಸಾಗಿಸುತ್ತಿದ್ದಾರೆ ಚಿತ್ರದುರ್ಗ ಜಿಲ್ಲೆಯು ಮಳೆಯಾಶ್ರಿತ

ಪ್ರದೇಶವಾಗಿರುವುದರಿಂದ ಕಡಿಮೆ ಮಳೆ ಬೀಳುವುದರಿಂದ ಕೃಷಿಯು ಅನಾವೃಷ್ಟಿಗೆ ಒಳಗಾಗಿ ಬದುಕು ದುಸ್ಥಿರವಾಗಿದೆ. ಪಾರಂಪರಿಕ ಪಶುಪಾಲನೆಗೆ ಪೂರಕವಾಗಿದ್ದ ಗೋಮಾಳಗಳ ಅವನತಿ, ಮತ್ತು ರಕ್ಷಣಾ ಇಲಾಖೆಗಳ ಭೂಸ್ವಾಧೀನ ಪ್ರಕ್ರಿಯೆಗಳು ಲಾಳಗೊಂಡರ ಪಶುಪಾಲನೆಯಂತಹ ಕಾರ್ಯಗಳಿಗೂ ಅಡ್ಡಿಯಾಗಿವೆ. ಇಲ್ಲಿನ ಈ ಸಮುದಾಯದ ಜನರು ತಮ್ಮ ಸುತ್ತಮುತ್ತಲಿನ ಜಿಲ್ಲೆಗಳ ತಮ್ಮ ಸಮುದಾಯದವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದಾರೆ.

**ಕೋಷ್ಟಕ: ೫.೧.೫ ತುಮಕೂರು ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| ಒಟ್ಟು ಕುಟುಂಬಗಳು | ೫೩ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೧೧೮ | ೫೦.೮ |
| ಮಹಿಳೆಯರು | ೧೧೪ | ೪೯.೧ |
| ಒಟ್ಟು ಜನಸಂಖ್ಯೆ | ೨೩೨ | ೧೦೦ |

ಹಳೆಯ ಮೈಸೂರು ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದ ತುಮಕೂರು ಜಿಲ್ಲೆಯ ವಿಜಯನಗರೋತ್ತರ ಕಾಲದಲ್ಲಿನ ಬಹಳಷ್ಟು ಸಂಸ್ಥಾನಗಳು ಈ ಜಿಲ್ಲೆಯಲ್ಲಿವೆ. ಮಧುಗಿರಿ, ಬಸ್ಮಂಗಿದುರ್ಗ, ಹಾಗಲವಾಡಿ, ಚಿಕ್ಕನಾಯಕನಹಳ್ಳಿ, ರತ್ನಗಿರಿ, ಶಿರಾ, ಪಾವಗಡ ಇತ್ತಯಾದಿಗಿರಿದುರ್ಗಗಳು ಇದಕ್ಕೆ ಸಾಕ್ಷಿಯಾಗಿವೆ. ಸೀಬೆಯಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯ ಮತ್ತೊಂದು ನಿದರ್ಶನವಾಗಿ ಕಂಡುಬರುವುದು. ಬೆಂಗಳೂರಿನ ಗಡಿಯಂಚಿನ ಜಿಲ್ಲೆಯಾಗಿರುವ ತುಮಕೂರು ಕ್ಷಿಪ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವುದು. ೨೦೧೧ ರ ಜನಗಣತಿಯ ಪ್ರಕಾರ ತುಮಕೂರು ಜಿಲ್ಲೆಯಲ್ಲಿ ಒಟ್ಟು ೨೬,೮೧,೪೪೯ ಜನ ಸಂಖ್ಯೆಯನ್ನು ಕಾಣಬಹುದು. ಇಂದು ಲಾಳಗೊಂಡರ ಒಟ್ಟು ಕುಟುಂಬಗಳು ೫೩, ಪುರುಷರು ೧೧೮, ಮಹಿಳೆಯರು ೧೧೪ ಇದ್ದಾರೆ. ಮತ್ತು ಈ ಜಲ್ಲೆಯಲ್ಲಿ ಲಾಳಗೊಂಡಸಮುದಾಯದವರನ್ನು ವೀರಶೈವ ಲಿಂಗಾಯತರಲ್ಲಿ ಬೆರೆತು ಹೋಗಿರುವುದರಿಂದ ಇವರನ್ನು ಲಾಳಗೊಂಡ ಎಂದು ಗುರುತಿಸುವದು ಕಷ್ಟಕರವಾಗಿತ್ತು. ಪೂರ್ವಿಕರ ಇತಿಹಾಸ ಸಂಸ್ಕೃತಿ, ಆಚಾರ ಪದ್ಧತಿಗಳನ್ನು ಅರಿತು ಅವರುಗಳಿಗೆ ಮನವರಿಕೆ ಮಾಡಲಾಯಿತು. ಇವರು ಹೆಚ್ಚಾಗಿ ವೀರಭದ್ರೇಶ್ವರ, ನಂಜುಂಡೇಶ್ವರ, ಬಸವೇಶ್ವರನ ಆರಾಧಕರಾಗಿದ್ದು ಪ್ರತಿಷ್ಠಿತ ಶ್ರೀ ಸಿದ್ಧಗಂಗಾ ಮಠದ ಅನುಯಾಯಿಗಳಾಗಿಯು ಬೆರೆತು ಹೋಗಿದ್ದಾರೆ. ತುಮಕೂರು ಜಿಲ್ಲೆಯು ಹೆಚ್ಚಾಗಿ ಮಳೆಯಾದಾರಿತ ಕುಷ್ಕಿ ಭೂ ಪ್ರದೇಶವಾಗಿದ್ದು ವಾಣಿಜ್ಯ ಬೆಳೆಗಳು ಹೆಚ್ಚು, ಅದರಲ್ಲೂ ತೆಂಗಿನ ಬೆಳೆಯೆ ಹೆಚ್ಚಾಗಿದೆ. ಮತ್ತು ಬೆಂಗಳೂರಿಗೆ ಹತ್ತಿರದ ಜಿಲ್ಲೆಯಾದ್ದರಿಂದ ವಲಸಿಗರ ಪ್ರಮಾಣ ಹೆಚ್ಚಾಗಿದೆ. ನಗರೀಕರಣದ ಅಭಿವೃದ್ಧಿಯಿಂದಾಗಿ ಹಲವರು ವ್ಯಾಪಾರ, ವ್ಯವಹಾರಗಳಲ್ಲಿ ತೊಡಗಿಕೊಂಡಿದ್ದಾರೆ. ವೈವಾಹಿಕ ಆಚರಣೆ, ಸಾಂಸ್ಕೃತಿಕ ಹಬ್ಬ ಆಚರಣೆಗಳ

ಪದ್ಧತಿಗಳನ್ನು ಸಹ ಬದಲಾದ ಸಮಾಜದ ಪರಿಸ್ಥಿತಿಗೆ ತಕ್ಕಂತೆ ಹೊಂದಾಣಿಕೆ ಮಾಡಿಕೊಳ್ಳತ್ತಿರುವದನ್ನು ನಾವು ಕಾಣಬಹುದು. ಕೆಲವು ಕುಟುಂಬಗಳು ಬೆಂಗಳೂರಿನ ದೊಡ್ಡ ಪಟ್ಟಣಗಳಿಗೆ ವಲಸೆ ಹೋದುದರಿಂದ ಅವುಗಳ ಅಧ್ಯಯನ ಸಂಶೋಧನಾ ಸಮೀಕ್ಷೆಯ ಮಿತಿಯಲ್ಲಿ ಬಂದಿರುವುದಿಲ್ಲ.

**ಕೋಷ್ಟಕ: ೫.೧.೬ ದಾವಣಗೆರೆ ಜಿಲ್ಲೆಯ ಜಿಲ್ಲಾವಾರು ಜನಸಂಖ್ಯೆ ಹಂಚಿಕೆ**

| | | |
|---|---|---|
| ಒಟ್ಟು ಕುಟುಂಬಗಳು | ೯೦ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೨೩೬ | ೫೦.೨ |
| ಮಹಿಳೆಯರು | ೨೩೪ | ೪೯.೭ |
| ಒಟ್ಟು ಜನಸಂಖ್ಯೆ | ೪೭೦ | ೧೦೦% |

ದಾವಣಗೆರೆಯು ಕರ್ನಾಟಕದ ಒಂದು ಜಿಲ್ಲೆಯಾಗಿದ್ದು, ಈ ಜಿಲ್ಲೆಯು ಮೊದಲಿನ ಜಿಲ್ಲೆಗಳಾದ ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ, ಜಿಲ್ಲೆಗಳಿಂದ ಕೆಲವೊಂದು ತಾಲ್ಲೂಕುಗಳನ್ನು ಸೇರಿಸಿಕೊಂಡು ಜಿಲ್ಲೆಯಾಗಿ ಪರಿವರ್ತಿತವಾಗಿದೆ. ಚಿತ್ರದುರ್ಗ, ಹಾವೇರಿ, ಶಿವಮೊಗ್ಗ, ಬಳ್ಳಾರಿ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳೊಂದಿಗೆ ಗಡಿ ಹೊಂದಿರುವುದನ್ನು ಕಾಣುತ್ತೇವೆ. ಇದು ಅರ್ಧಭಾಗ ನೀರಾವರಿ ಪ್ರದೇಶ ಉಳಿದರ್ಧ ಪ್ರದೇಶ ಮಳೆಯಾಶ್ರಿತವಾಗಿದೆ. ದಾವಣಗೆರೆ ಜಿಲ್ಲೆಯಲ್ಲಿ ಲಿಂಗಾಯತ, ಕುರುಬ, ನಾಯಕ, ಸಮುದಾಯಗಳು ಬಹುಸಂಖ್ಯಾತವಾಗಿರುವುದರೊಂದಿಗೆ ಹಕ್ಕಿಪಿಕ್ಕಿ, ಹಂಡಿಜೋಗಿ, ಪಿಂಜಾರ್, ಗೊಂಡರು, ಕೊರಚ, ಭೋವಿ ಅಲ್ಪಸಂಖ್ಯಾತ ಸಮುದಾಯಗಳನ್ನು ಕಾಣಬಹುದಾಗಿದೆ. ಲಾಳಗೊಂಡ ಸಮುದಾಯದವರು ಹರಪನಹಳ್ಳಿ, ಬಾಗಳಿ, ದೊಣ್ಣೆಹಳ್ಳಿ, ದಾವಣಗೆರೆ ನಗರಗಳಲ್ಲಿ ಹೆಚ್ಚಾಗಿ ನೆಲೆಸಿರುವರು.

ಕೋಷ್ಟಕ ೫.೭.ತಿಳಿಸುವಂತೆ ಲಾಳಗೊಂಡ ಸಮುದಾಯದ ಒಟ್ಟು ೪೭೦ ಕುಟುಂಬಗಳು ಕಂಡುಬರುತ್ತವೆ. ಕೃಷಿ ಇವರ ಪ್ರಧಾನ ವೃತ್ತಿಯಾದರು ಶೈಕ್ಷಣಿಕ ಅಭಿವೃದ್ಧಿಯಿಂದಾಗಿ ವಿದ್ಯಾಭ್ಯಾಸದಲ್ಲಿ ಉನ್ನತಿ ಸಾಧಿಸಿದ ಹಲವರು ವಿವಿಧ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರು ಈಶ್ವರನ ದೈವ ಭಕ್ತರು, ಶ್ರೀ ಗುರುಕೊಟ್ಟೂರೇಶ್ವರನ ಆರಾಧಕರು ಹೆಚ್ಚಾಗಿದ್ದು, ವೀರಭದ್ರೇಶ್ವರನನ್ನೂ ಪೂಜಿಸುವರು. ಪೂರ್ವಿಕರು ಅವಿಭಾಜಿತ ಆಂಧ್ರಪ್ರದೇಶದಿಂದ ವಲಸೆ ಬಂಧವರಾಗಿದ್ದು, ಇಂದಿಗೂ ನಮ್ಮ ಮೂಲದವರು ಆಂಧ್ರದ ಕಡೆಯಿಂದ ಬಂದವರು ಎಂದು ಹೇಳುವ ಹಿರಿಯರನ್ನು ನಾವು ಇಲ್ಲಿ ಕಾಣಬಹುದು ದಾವಣಗೆರೆ ಜಿಲ್ಲೆಯ ಈ ಸಮುದಾಯದವರಲ್ಲಿ ೨೩೬ ಪುರುಷರು ಮತ್ತು ೨೩೪ ಮಹಿಳೆಯರು ಇರುವುದನ್ನು ಕಾಣುಬಹುದು.

**ಕೋಷ್ಟಕ: ೫.೧.೭ ಧಾರವಾಡ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| | | |
|---|---|---|
| ಒಟ್ಟು ಕುಟುಂಬಗಳು | ೧೨೪ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೩೦೪ | ೫೧.೭ |
| ಮಹಿಳೆಯರು | ೨೮೪ | ೪೮.೨ |
| ಒಟ್ಟು ಜನಸಂಖ್ಯೆ | ೫೮೮ | ೧೦೦ |

ಧಾರವಾಡ ಜಿಲ್ಲೆಯು ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವೆಂಬ ಹೆಗ್ಗಳಿಕೆ ಪಾತ್ರವಾಗಿದೆ. ದ.ರಾ.ಬೇಂದ್ರೆಯವರ ಕಾಲದಿಂದಲೂ ವಿದ್ಯಾನಗರಿ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದ್ದು, ಕಿತ್ತೂರಿನ ಆಳ್ವಿಕೆಗೆ ಒಳಪಟ್ಟಿದ್ದ ಧಾರವಾಡ ಪ್ರದೇಶವು ಇದರ ಅವನತಿಯ ನಂತರ ಬ್ರಿಟೀಷರ ಕಾಂಟೋನ್ಮೆಂಟಾಗಿ ಪರಿವರ್ತಿತವಾಗಿ ಆಡಳಿತದ ಮುಖ್ಯ ಕೇಂದ್ರವಾಯಿತು. ಬ್ರಿಟಿಷರ ಸ್ಮಾರಕಗಳು ಇಂದಿಗೂ ಜೀವಂತವಾಗಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳುವಳಿಯ ಕಾರ್ಯಚಟುವಟಿಕೆಗಳ ಮುಖ್ಯ ಕೇಂದ್ರವಾಗಿತ್ತು.

ಕರ್ನಾಟಕ ಏಕೀಕರಣ ಮತ್ತು ರಾಜ್ಯ ಪುನರ್ವಿಂಗಡಣೆ ಆಗುವವರೆಗೂ ಈ ಜಿಲ್ಲೆಯು ಬಾಂಬೆ ಪ್ರಸಿಡೆನ್ಸಿಯ ಭಾಗವಾಗಿತ್ತು. ೨೦೧೧ರ ಜನಗಣತಿ ಪ್ರಕಾರ ೧.೮೪೭,೦೨೩ ಜನಸಂಖ್ಯೆ ಈ ಜಿಲ್ಲೆಯಲ್ಲಿದ್ದು, ಅದರಲ್ಲಿ ಲಾಳಗೊಂಡರ ಜನಸಂಖ್ಯೆ ಪ್ರತ್ಯೇಕವಾಗಿ ಮುಂದಿನ ಕೋಷ್ಟಕದಲ್ಲಿ ತಿಳಿಸಲಾಗಿದೆ. ಲಾಳಗೊಂಡ ಸಮುದಾಯದ ೧೨೪ ಕುಟುಂಬಗಳಿದ್ದು ೩೦೪ ಜನ ಪುರುಷರು ಮತ್ತು ೨೮೪ ಜನ ಮಹಿಳೆಯರಿರುವರು. ಇವರು ಬಾಗಲಕೋಟೆ, ಬಳ್ಳಾರಿ, ರಾಯಚೂರು ಭಾಗದಿಂದ ವಲಸೆ ಬಂದವರಾಗಿದ್ದು, ಧಾರವಾಡ, ಕಲಘಟಗಿ, ಮಾರಡಗಿ, ಹುಬ್ಬಳ್ಳಿಗಳಲ್ಲಿ ನೆಲೆಸಿರುವರು.

**ಕೋಷ್ಟಕ: ೫.೧.೮ ಬಳ್ಳಾರಿ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| | | |
|---|---|---|
| ಒಟ್ಟು ಕುಟುಂಬಗಳು | ೩೩೪೨ | |
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೯೩೧೬ | ೫೫.೭೫ |
| ಮಹಿಳೆಯರು | ೭೩೯೪ | ೪೪.೨೪ |
| ಒಟ್ಟು ಜನಸಂಖ್ಯೆ | ೧೬೭೧೦ | ೧೦೦% |

ಬಳ್ಳಾರಿ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟ ಪ್ರದೇಶವಾಗಿದ್ದು ಅದು ಪತನಗೊಂಡ ನಂತರ ಅನೇಕ ಪಾಳೆಪಟ್ಟುಗಳ ಆಳ್ವಿಕೆಗೆ ಮತ್ತು ಅಂತಿಮವಾಗಿ ಮದ್ರಾಸ್ ಪ್ರಸಿಡೆನ್ಸಿಯ

ಕಾಂಟೋನ್‌ಮೆಂಟ್ ಆಗಿತ್ತು. ಕರ್ನಾಟಕದ ಏಕೀಕರಣದ ಪ್ರಯತ್ನದ ಫಲವಾಗಿ ೧೯೫೬ರಲ್ಲಿ ಕರ್ನಾಟಕಕ್ಕೆ ಸೇರ್ಪಡೆಗೊಂಡಿದೆ. ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಬಳ್ಳಾರಿ ಗಣಿ ಉದ್ಯಮದಿಂದ ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿದೆ. ತೆಲಂಗಾಣ ಮತ್ತು ಆಂಧ್ರಪ್ರದೇಶದ ಗಡಿ ಅಂಚಿನ ಜಿಲ್ಲೆಯಾಗಿದ್ದು, ತೆಲುಗಿನ ಸಂಸ್ಕೃತಿಯ ಪ್ರಭಾವ ಅಧಿಕವಾಗಿರುವುದನ್ನು ಕಾಣುತ್ತೇವೆ. ೨೦೧೧ರ ಜಗಣತಿಯ ಪ್ರಕಾರ ೨,೪೫೨,೫೯೫ ಜನಸಂಖ್ಯೆ ಹೊಂದಿದೆ. ಇದರಲ್ಲಿ ಬೇಡರು, ಭೋವಿ, ಲಿಂಗಾಯಿತರು, ರೆಡ್ಡಿಗಳು, ಕುರುಬರು, ಮುಸ್ಲಿಂರು ಅಧಿಕ ಪಾಲುಹೊಂದಿದ್ದಾರೆ. ಇದಲ್ಲದೆ ಅನೇಕ ಅಲೆಮಾರಿ ಸಮುದಾಯಗಳು ಪೂರ್ವಿಕ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅಲೆಮಾರಿ ಸಮುದಾಯಗಳು ಅಲ್ಪಸಂಖ್ಯಾತವಾಗಿದ್ದು ಹಕ್ಕಿಪಿಕ್ಕಿ, ಬುಡ್ಗಜಂಗಮ, ಸಿಂಧೋಳ್ ಸಮುದಾಯಗಳು ಪ್ರಮುಖವಾಗಿವೆ. ಲಾಳಗೊಂಡ ಸಮುದಾಯದ ೩೩೪೨ ಕುಟುಂಬಗಳು ಒಟ್ಟು ೧೬,೭೧೦ ಜನಸಂಖ್ಯೆಯು ಬಳ್ಳಾರಿ ಜಿಲ್ಲೆಯಾದ್ಯಂತ ಹೇರಳವಾಗಿ ಪಸರಿಸಿರುವುದನ್ನು ನಾವು ಸಮೀಕ್ಷೆಯಿಂದ ತಿಳಿಯಲಾಗಿದೆ. ತುಂಗಭದ್ರಾ ಜಲಾನಯನದಿಂದಾಗಿ ಬಳ್ಳಾರಿ ಭಾಗದ ಲಾಳಗೊಂಡ ಸಮುದಾಯದ ಕೆಲವು ಕುಟುಂಬಗಳು ಭತ್ತದ ವ್ಯವಸಾಯ ಮಾಡುತ್ತಿದ್ದು, ಇನ್ನೂ ಈ ಕುಟುಂಬಗಳಲ್ಲಿ ಅನೇಕರು ಕೃಷಿಯನ್ನೇ ನಂಬಿದ್ದರು ಕುಷ್ಕಿ ಭೂಮಿ, ಮಳೆಯಾದಾರಿತ ವ್ಯವಸಾಯ, ಅನಾವೃಷ್ಟಿಯಂತಹ ಪ್ರಾಕೃತಿಕ ವಿಕೋಪಗಳಿಂದಾಗಿ ಆರ್ಥಿಕ ಪರಿಸ್ಥಿತಿ ಇನ್ನೂ ಅದೋಗತಿಯಲ್ಲೇ ಇದೆ. ಇತ್ತೀಚಿನ ಗಣಿಗಾರಿಕೆ, ಔದ್ಯೋಗಿಕತೆಯಿಂದಾಗಿ ಜನರು ಉದ್ಯೋಗಗಳನ್ನು ಪಡೆದು ಆರ್ಥಿಕ ಪರಿಸ್ಥಿತಿ ಸುಧಾರಿಸಿದ್ದರೂ ಲಾಳಗೊಂಡರು ತಮ್ಮ ಮೂಲ ಕಸುಬಾದ ಕೃಷಿಯನ್ನು ತ್ಯಜಿಸುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇತ್ತೀಚೆಗೆ ಕೆಲವು ಲಾಳಗೊಂಡರು ರಾಜಕೀಯದಲ್ಲಿ ಭಾಗವಹಿಸುತ್ತಿರುವುದು ಕಂಡುಬರುತ್ತದೆ.

**ಕೋಷ್ಟಕ: ೫.೧.೯ ಬಾಗಲಕೋಟೆ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| | | |
|---|---|---|
| ಒಟ್ಟು ಕುಟುಂಬಗಳು | ೧೦೩ | |
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೨೨೩ | ೫೨.೭ |
| ಮಹಿಳೆಯರು | ೨೦೦ | ೪೭.೨ |
| ಒಟ್ಟು ಜನಸಂಖ್ಯೆ | ೪೨೩ | ೧೦೦ |

ವಿಜಯಪುರ ಜಿಲ್ಲೆಯನ್ನು ವಿಭಜಿಸಿ ಈ ಜಿಲ್ಲೆಯನ್ನು ರಚಿಸಲಾಗಿದ್ದು, ರಾಜ್ಯಗಳ ಪುನರ್ ವಿಂಗಡನೆ ಆಗುವ ಮುನ್ನ ಈ ಪ್ರದೇಶವು ಮುಂಬೈ ರಾಜ್ಯದ ಭಾಗವಾಗಿತ್ತು. ರಾಷ್ಟ್ರಕೂಟರು, ಬದಾಮಿ ಚಾಲುಕ್ಯರು ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕುರುಹುಗಳಾಗಿ ಕೂಡಲಸಂಗಮ, ಬದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ ದೇವಾಲಯಗಳನ್ನು ಕಾಣಬಹುದು. ಚಾರಿತ್ರಿಕ

ಹಿನ್ನೆಲೆಯಲ್ಲಿ ಸಾಂಸ್ಕೃತಿಕವಾಗಿರುವ ಬಾಗಲಕೋಟೆ ಜಿಲ್ಲೆಯು, ಇಂದು ಕರ್ನಾಟಕ ಪ್ರವಾಸಿ ತಾಣಗಳಲ್ಲಿ ಮಹತ್ವದ ಸ್ಥಾನಪಡೆದಿದೆ. ಪಂಚನದಿಗಳ ಬೀಡಾಗಿದ್ದ ವಿಜಯಪುರದಿಂದ ಪ್ರಾಕೃತಿಕ ಸಂಪತ್ತಿನ ಹಂಚಿಕೆಯೊಂದಿಗೆ ಸ್ವಯತ್ತ ಜಿಲ್ಲೆಯು ೨೦೧೧ರ ಜನಗಣತಿಯ ಅನ್ವಯ ೧,೮೮೯,೭೫೨ ಜನಸಂಖ್ಯೆ ಇದೆ. ಇದರಲ್ಲಿ ಅಧ್ಯಯನದ ಸಮೀಕ್ಷೆಯಿಂದ ೪೨೫ ಲಾಳಗೊಂಡ ಕುಟುಂಬಗಳನ್ನು ಕಾಣಬಹುದು. ಈ ಸಮುದಾಯದ ಕುಟುಂಬಗಳು ಬಾಗಲಕೋಟೆ ನಗರ, ಬೇವೂರು, ಹುನುಗುಂದ, ಇಳಕಲ್, ಬೋಡನಾಯಕನದಿನ್ನಿ, ಚೌಡಾಪುರ, ಮುಧೋಳ್‌ಗಳಲ್ಲಿ ಕಾಣಬಹುದು.

**ಕೋಷ್ಟಕ: ೫.೧.೧೦ ಬೆಳಗಾವಿ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| ಒಟ್ಟು ಕುಟುಂಬಗಳು | ೪೮ | |
|---|---|---|
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೧೦೬ | ೫೧.೪ |
| ಮಹಿಳೆಯರು | ೧೦೦ | ೪೮.೫ |
| ಒಟ್ಟು ಜನಸಂಖ್ಯೆ | ೨೦೬ | ೧೦೦ |

ಬೆಳಗಾವಿ ಜಿಲ್ಲೆಯು ರಾಜ್ಯಪುನರ್ ವಿಂಗಡೆನೆಯಾಗುವುದಕ್ಕಿಂತಲೂ ಮುಂಚಿತವಾಗಿ ಬೊಂಬಾಯಿ ಪ್ರಸಿಡೆನ್ಸಿಯ ಆಳ್ವಿಕೆಗೆ ಒಳಪಟ್ಟಿತ್ತು. ಮರಾಠರ ಮತ್ತು ಕಿತ್ತೂರು ರಾಜ್ಯಗಳಿಗೆ ಒಳಪಟ್ಟಿದ್ದ ಅನೇಕ ಸ್ಥಳಗಳು ಬೆಳಗಾವಿ ಜಿಲ್ಲೆಯಲ್ಲಿವೆ. ಭಾಷಾವಾರು ಪ್ರಾಂತ್ಯ ವಿಂಗಡಣೆಯಿಂದ ಕರ್ನಾಟಕಕ್ಕೆ ಸೇರಿದ ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕು ಎಂದು ಮರಾಠಿಗರು ಇಂದಿಗೂ ಹೋರಾಟಗಳು ನಡೆಯುತ್ತಲಿವೆ. ಬೆಳಗಾವಿ ಅರೆಮಲೆನಾಡ ಪ್ರದೇಶದಿಂದ ಕೂಡಿದ್ದು, ಖಾನಾಪುರ ತಾಲೂಕಿನ ಸಹ್ಯಾದ್ರಿಪರ್ವತ ಶ್ರೇಣಿಯು ಕರ್ನಾಟಕ, ಗೋವಾ, ಮಹಾರಾಷ್ಟ್ರ ರಾಜ್ಯಗಳ ಸಂಗಮವಾಗಿದೆ. ಇಲ್ಲಿನ ಭೀಮನಗಡ ಕೋಟೆಯು ಶಿವಾಜಿ ಆಳ್ವಿಕೆಗೆ ಬೆಳಗಾವಿ ಒಳಪಟ್ಟಿತ್ತು ಎಂದು ತಿಳಿಯಲು ನೆರವಾಗುವುದು. ಬೆಳಗಾವಿ ಜಿಲ್ಲೆಯಲ್ಲಿ ಕತ್‌ಕರಿ, ಗೌಳಿ, ಧನಗಾರ್‌ಗೌಳಿ ಎಂಬ ಹೆಸರಿನ ಪಾರೆಸ್ಟ್ ನೊಮ್ಯಾಡಿಕ್ ಸಮುದಾಯಗಳನ್ನು ಕಾಣಬಹುದಾಗಿದೆ. ಈ ಜಿಲ್ಲೆಯಲ್ಲಿ ನೆಲೆನಿಂತಿರುವ ಬುಡಕಟ್ಟು ಸಮುದಾಯಗಳು ಅಂದಿನ ಕಿತ್ತೂರು ರಾಜ್ಯದ ಆಡಳಿತದಲ್ಲಿ ಆಪ್ತವರ್ಗಗಳಾಗಿದ್ದವು ಎಂದು ತಿಳಿದುಬರುತ್ತದೆ. ೨೦೧೧ರ ಜನಗಣತಿಯಂತೆ ೪,೭೭೯,೬೬೧ ಜನಸಂಖ್ಯೆ ಬೆಳಗಾವಿ ಜಿಲ್ಲೆಯಲ್ಲಿದ್ದು, ಬೆಳಗಾಂ ನಗರದಲ್ಲಿ ಲಾಳಗೊಂಡ ಸಮುದಾಯದವರು ಕಡಿಮೆ ಸಂಖ್ಯೆಯಲ್ಲಿದ್ದಾರೆ ಮತ್ತು ವಲಸೆ ಬಂದು ನೆಲೆಸಿದವರೇ ಹೆಚ್ಚು ಹಾಗೂ ಇವರುಗಳು ಉದ್ಯೋಗಗಳನ್ನು ಅರಸಿ ಬಂದವರಾಗಿದ್ದಾರೆ. ಬೆಳಗಾವಿ ಜಿಲ್ಲೆಯು ಕೃಷಿಕವಾಗಿ ಮತ್ತು ಶೈಕ್ಷಣಿಕವಾಗಿ ಮೂಂಚೂಣೆಯಲ್ಲಿದೆ. ಬೆಳಗಾಂ ಜಿಲ್ಲೆಯ ಬೈಲಹೊಂಗಲ, ಸವದತ್ತಿ, ಕಿತ್ತೂರುಗಳಲ್ಲಿ ಲಾಳಗೊಂಡ ಸಮುದಾಯದವರನ್ನು ಕಾಣಬಹುದು. ಬೆಳಗಾವಿ ಜಿಲ್ಲೆಯಲ್ಲಿನ ಈ ಸಮುದಾಯದವರು ಆರ್ಥಿಕ, ಶೈಕ್ಷಣಿಕ ಮತ್ತು ಸಮಾಜಿಕವಾಗಿ ಸದೃಢರಾಗಿದ್ದಾರೆ.

**ಕೋಷ್ಟಕ: ೫.೧.೧೧ ಬೆಂಗಳೂರು ಗ್ರಾಮಾಂತರ ಜಿಲ್ಲಾವಾರು ಜನಸಂಖ್ಯೆ ಹಂಚಿಕೆ**

| ಒಟ್ಟು ಕುಟುಂಬಗಳು | ೧೫೮೬ | |
|---|---|---|
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೪೯೭೩ | ೫೨.೭೭ |
| ಮಹಿಳೆಯರು | ೪೪೫೦ | ೪೭.೨೨ |
| ಒಟ್ಟು ಜನಸಂಖ್ಯೆ | ೯೪೨೩ | ೧೦೦ |

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕರ್ನಾಟಕದ ೩೦ ಜಿಲ್ಲೆಗಳಲ್ಲಿ ಒಂದು, ೧೯೮೬ ರಲ್ಲಿ ಬೆಂಗಳೂರನ್ನು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮತ್ತು ಬೆಂಗಳೂರುನಗರ ಜಿಲ್ಲೆ ಎಂದು ವಿಭಜನೆ ಮಾಡಲಾಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ೨ ವಿಭಾಗವಾಗಿದ್ದು ೪ ತಾಲ್ಲೂಕುಗಳು, ೩೫ ಹೋಬಳಿಗಳನ್ನು ಒಳಗೊಂಡಿದೆ. ೨೦೧೧ ರ ಜನಗಣತಿಯ ಪ್ರಕಾರ ೯,೮೭,೨೫೭ ಜನಸಂಖ್ಯೆಯನ್ನು ಒಳಗೊಂಡಿದೆ. ಈ ಜಿಲ್ಲೆಯ ಬಹುಸಂಖ್ಯಾತ ಜನರ ಉದ್ಯೋಗ ಕೃಷಿ. ಆದರೆ ದೇವನಹಳ್ಳಿ ತಾಲ್ಲೂಕಿನ ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಅಭಿವೃದ್ಧಿಯಿಂದಾಗಿ ಸುತ್ತಲಿನ ಸುಮಾರು ಭೂಮಿಯು ವ್ಯಾಪಾರಿ ಮತ್ತು ವಾಸದ ಕಟ್ಟಡಗಳಿಗಾಗಿ ನಿವೇಶನಗಳಾಗಿ ಕೃಷಿ ಭೂಮಿಯು ಬಳಕೆಯಾಗಿದೆ. ಇದರಿಂದಾಗಿ ಹಲವು ಕೃಷಿಕರು ಕೃಷಿಯನ್ನು ತ್ಯಜಿಸುವಂತಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಜನರು ಮುಖ್ಯವಾಗಿ ತೋಟಗಾರಿಕಾ ಬೆಳೆಗಳಾದ ಗೋಡಂಬಿ, ದ್ರಾಕ್ಷಿ, ರೇಷ್ಮೆ, ಬೆಳೆಗಳು ಮತ್ತು ಖುಷ್ಕಿ ಜಮೀನಿನಲ್ಲಿ ರಾಗಿ, ಶೇಂಗಾ, ಕಬ್ಬು ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುವರು ಮತ್ತು ಇವರು ಕೃಷಿ ಅವಲಂಬಿತರಾಗಿದ್ದರೂ ಕೈಗಾರೀಕರಣ, ಹೈನುಗಾರಿಕೆ, ರೇಷ್ಮೆಸಾಕಾಣಿಕೆ, ನೇಕಾರಿಕೆಯಲ್ಲಿನ ಉದ್ಯೋಗಗಳು ಅವರ ಆರ್ಥಿಕ ಸ್ವಾವಲಂಬನೆಗೆ ಸಹಕಾರಿಯಾಗಿವೆ. ಈ ಜಿಲ್ಲೆಯಲ್ಲಿ ವಿವಿಧ ಸಮುದಾಯದವರು ನೆಲೆಸಿರುವಂತೆ ಲಾಳಗೊಂಡ ಸಮುದಾಯದವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸುಮಾರು ಹಳ್ಳಿ ನಗರಗಳಲ್ಲಿ ನೆಲೆಸಿದ್ದು ಹೇರಳವಾಗಿ ದೊಡ್ಡಬಳ್ಳಾಪುರ ತಾಲೂಕಿನ ಕುರುಬರ ಹಳ್ಳಿ, ನಾಗಸಂದ್ರ, ರಾಮಯ್ಯನ ಪಾಳ್ಯ, ಮಲ್ಲಾತನ ಹಳ್ಳಿ, ದೇವನಹಳ್ಳಿ ತಾಲೂಕಿನ ಕೋಡಿಮಂಚೇನ ಹಳ್ಳಿ, ಆವುತಿ, ಮುದ್ದನಾಯಕನ ಹಳ್ಳಿ, ಮತ್ತು ನೆಲಮಂಗಲ ತಾಲೂಕಿನ ತೊರೆನಾಗಸಂದ್ರ ನರಸೀಪುರ ಅಗ್ರಹಾರ, ಅಬ್ಬಿಗೆರೆ ಮತ್ತು ಶಿವಕೋಟೆ ಮುಂತಾದ ಹಳ್ಳಿಗಳಲ್ಲಿ ಹೇರಳವಾಗಿ ಕಂಡುಬರುತ್ತಾರೆ.

ಕೋಷ್ಟಕ: ೫.೧೨ ಪ್ರಕಾರ ಒಟ್ಟು ೧೫೮೬ ಕುಟುಂಬಗಳಲ್ಲಿ ಒಟ್ಟು ೯೪೨೩ ಜನಸಂಖ್ಯೆ ಇದ್ದು ಅದರಲ್ಲಿ ಪುರುಷರು ೪೯೭೩, ಮಹಿಳೆಯರು ೪೪೫೦ ಇದ್ದು, ಪುರುಷರಿಗಿಂತ ಮಹಿಳೆಯರ ಸಂಖ್ಯೆ ಕಡಿಮೆ ಇರುತ್ತದೆ. ಈ ಜಿಲ್ಲೆಯಲ್ಲಿ ವಿಷಾದದ ಸಂಗತಿಯೆಂದರೆ ಲಾಳಗೊಂಡ ಸಮುದಾಯದವರು ಸುಲಭವಾಗಿ ತಮ್ಮನ್ನು ತಾವು ಲಾಳಗೊಂಡರೆಂದು ಒಪ್ಪಿಕೊಳ್ಳಲು ನಿರಾಕರಿಸುತ್ತಾರೆ.

ಕೆಲವರಿಗೆ ತಮ್ಮನ್ನು ಲಾಳಗೊಂಡರೆಂದು ಕರೆಸಿಕೊಳ್ಳುತ್ತಿದ್ದರು ಅದರ ಹಿನ್ನೆಲೆ ತಿಳಿದಿರುವುದಿಲ್ಲ. ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಲಾಳಗೊಂಡ ಲಿಂಗಾಯತರಿಗೂ ಉತ್ತರ ಕರ್ನಾಟಕದ ಲಾಳಗೊಂಡ ಸಮುದಾಯದವರ ನಡುವೆ ಭಿನ್ನತೆಯನ್ನು ಕಾಣಬಹುದು ಉದಾಹರಣೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬರುವ ಲಾಳಗೊಂಡರು ಬಂಡಾರವನ್ನು ಮತ್ತು ವಿಭೂತಿ ಎರಡನ್ನೂ ಉಪಯೋಗಿಸುವರು. ಆದರೆ ಉತ್ತರ ಕರ್ನಾಟಕದ ಲಾಳಗೊಂಡರು ಬರಿ ವಿಭೂತಿಯನ್ನು ಮಾತ್ರ ಬಳಸುವರು ಹಾಗೂ ಉತ್ತರಕರ್ನಾಟಕದ ಲಾಳಗೊಂಡರು ಗಂಡು ದೇವರಾದ ಈಶ್ವರನ ಆರಾಧಕರು, ಹೆಣ್ಣು ದೇವರನ್ನು ಪೂಜೆ ಮಾಡುವುದಿಲ್ಲ ಆದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಲಾಳಗೊಂಡ ಸಮುದಾಯದವರು ಈಶ್ವರನ ಆರಾಧನೆಯ ಜೊತೆಗೆ ಹೆಣ್ಣು ದೇವರಾದ ಸವದತ್ತಿ ಯಲ್ಲಮ್ಮನ ಆರಾಧಕರಾಗಿದ್ದು ಭಂಡಾರವನ್ನೂ ಉಪಯೋಗಿಸುವರು. ಪ್ರಾನ್ಸಿಸ್ ಬೂಖನಾನ್ ಹೇಳಿರುವಂತೆ ನೇಯ್ಗೆಯ ಉದ್ಯಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಮುಂಚೂಣಿಯಲ್ಲಿದ್ದು ಇಂದಿಗೂ ಆಧುನಿಕ ಯಂತ್ರಗಳನ್ನು ಅಳವಡಿಸಿಕೊಂಡು ನೂಲುವ ಮತ್ತು ನೇಯ್ಗೆಯ ಕಾರ್ಯವನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ ಲಾಳಗೊಂಡರು ನೇಯ್ಗೆಯನ್ನು ಪ್ರಮುಖ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ.

**ಕೋಷ್ಟಕ: ೫.೧.೧೨ ರಾಯಚೂರು ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| ಒಟ್ಟು ಕುಟುಂಬಗಳು | ೨೨೧೩ | |
|---|---|---|
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೪೮೫೭ | ೫೬.೧೯ |
| ಮಹಿಳೆಯರು | ೩೭೮೬ | ೪೩.೮೦ |
| ಒಟ್ಟು ಜನಸಂಖ್ಯೆ | ೮೬೪೩ | ೧೦೦ |

ರಾಯಚೂರು ಜಿಲ್ಲೆಯು ವಿಜಯನಗರ ಕಾಲದಲ್ಲಿನ ದೋ ಅಬ್ ಪ್ರದೇಶವನ್ನು ಒಳಗೊಂಡ ಜಿಲ್ಲೆಯಾಗಿದ್ದು, ಈ ಪ್ರದೇಶಕ್ಕಾಗಿಯೇ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು ೧೫೬೫ರ ವರೆಗೂ ಹೋರಾಟ ಮಾಡಿರುವುದನ್ನು ಕಾಣುತ್ತೇವೆ. ವಿಜಯನಗರ ಪತನದ ನಂತರ ಈ ಪ್ರದೇಶವು ಬಹಮನಿ ಸಾಮ್ರಾಜ್ಯದ ಪಾಲಾಯಿತು. ನಂತರದಲ್ಲಿ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿತು ಎಂಬುದನ್ನು ಚರಿತ್ರೆಯ ಮೂಲಕ ತಿಳಿಯಬಹುದು. ಪ್ರಬಲ ಏಕೀಕರಣ ಚಳಿವಳಿಯ ಪರಿಣಾಮ ಕರ್ನಾಟಕಕ್ಕೆ ಸೇರ್ಪಡೆಯಾಯಿತು. ರಾಯಚೂರು ಗಡಿ ಭಾಗದ ಜಿಲ್ಲೆಯಾಗಿದ್ದು, ಕರ್ನಾಟಕದಲ್ಲಿದ್ದರೂ ತೆಲುಗು ಭಾಷೆಯನ್ನು ಹೆಚ್ಚಿನ ಜನರು ಮಾತನಾಡುವುದನ್ನು ಕಾಣಬಹುದು. ಹಟ್ಟಿ ಚಿನ್ನದ ಗಣಿ, ಶಾಖೋತ್ಪನ್ನ ಕೇಂದ್ರ, ತುಂಗಾಭದ್ರಾ ನದಿಯಿಂದ ನೀರಾವರಿ ಸೌಲಭ್ಯ ಹೊಂದಿರುವ ರಾಯಚೂರು ಪ್ರಾಕೃತಿಕವಾಗಿ ಅಗಾಧ ಸಂಪತ್ತು ಹೊಂದಿರುವ ಪ್ರದೇಶ ಎಂದರೂ ತಪ್ಪಾಗಲಿಕ್ಕಿಲ್ಲ. ೨೦೧೧ರ ಜನಗಣತಿಯ ಪ್ರಕಾರ, ೧,೯೨೮,೮೧೨ ಜನಸಂಖ್ಯೆ ಹೊಂದಿರುವ ರಾಯಚೂರು

ಜಿಲ್ಲೆಯಲ್ಲಿ ಕೋಷ್ಟಕದ ಅನ್ವಯ ೨೨೧೩ ಕುಟುಂಬಗಳು ಲಾಳಗೊಂಡ ಸಮುದಾಯದಲ್ಲಿರುವುದನ್ನು ಕಾಣಬಹುದು. ವಕ್ತೃಗಳು ತಿಳಿಸುವಂತೆ ಆಂಧ್ರ ಮೂಲದವರೇ ಹೆಚ್ಚು ಎಂದು ತಿಳಿದುಬರುತ್ತದೆ. ಲಾಳಗೊಂಡ ಸಮುದಾಯದವರು ಕುಷ್ಕಿ ಮತ್ತು ನೀರಾವರಿ ಭೂಮಿ  ಎರಡನ್ನು ಹೊಂದಿರುತ್ತಾರೆ.

**ಕೋಷ್ಟಕ: ೫.೧.೧೩ ಶಿವಮೂಗ್ಗ ಜಿಲ್ಲೆಯ ಜಿಲ್ಲಾವಾರು  ಜನಸಂಖ್ಯೆ  ಹಂಚಿಕೆ**

| ಒಟ್ಟು ಕುಟುಂಬಗಳು | ೮೪ | |
|---|---|---|
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೨೪೦ | ೫೫.೫೫ |
| ಮಹಿಳೆಯರು | ೧೯೨ | ೪೪.೪೪ |
| ಒಟ್ಟು ಜನಸಂಖ್ಯೆ | ೪೩೨ | ೧೦೦% |

ಶಿವಮೂಗ್ಗ ಜಿಲ್ಲೆಯು ವಿಜಯನಗರದ ಅರಸರ ಮತ್ತು ಕೆಳದಿಯ ನಾಯಕರ ಆಳ್ವಿಕೆಗೂ ಮೊದಲು ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರ ಆಳ್ವಿಕೆಗೂ ಒಳಪಟ್ಟಿತ್ತು. ಇತಿಹಾಸ ಪ್ರಸಿದ್ಧಿಯಾದ ಈ ಜಿಲ್ಲೆಯ ಈಸೂರು ಗ್ರಾಮವು ಬ್ರಿಟಿಷರ ವಿರುದ್ಧ ಮೊಟ್ಟಮೊದಲು ಸ್ವಾತಂತ್ರ್ಯ ಸಂಗ್ರಾಮವನ್ನು ಸಾರಿದ ಹಳ್ಳಿಗೆ ಸಾಕ್ಷಿಯಾಗಿದೆ. ಶಿವಮೊಗ್ಗ ಜಿಲ್ಲೆಯ ಹೆಚ್ಚಿನ ಭಾಗ ಮಲೆನಾಡಿನ ಪ್ರದೇಶವಾಗಿದ್ದು ಹೆಚ್ಚು ಮಳೆಯನ್ನು ಹೊಂದಿರುವ ಕಾರಣ ಈ ಜಿಲ್ಲೆಯನ್ನು ಮಲೆನಾಡಿನ ಹೆಬ್ಬಾಗಿಲು ಎಂದು ಕರೆಯಲಾಗುತ್ತದೆ. ಐತಿಹಾಸಿಕ ಮತ್ತು ನೈಸರ್ಗಿಕ ಪ್ರವಾಸಿ ತಾಣಗಳು ಪ್ರವಾಸಿಗರನ್ನು ಆಕರ್ಷಿಸುತ್ತವೆ, ಸುಪ್ರಸಿದ್ಧ ಜೋಗಜಲಪಾತವು ಸಾಗರ ತಾಲೂಕಿನಲ್ಲಿದೆ. ಹೆಚ್ಚು ನದಿ ಜಲಾಶಯಗಳನ್ನು ಒಳಗೊಂಡಿದ್ದು ಕೃಷಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಿದ್ದು ಪ್ರಮುಖ ಬೆಳೆಗಳಾದ ಭತ್ತ, ಅಡಿಕೆ, ತೆಂಗು, ಬಾಳೆ, ಕಬ್ಬು, ಕಾಫಿ, ಗೋಡಂಬಿ, ಏಲಕ್ಕಿ, ಲವಂಗ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ೨೦೧೧ ರ ಜನಗಣತಿಯ ಪ್ರಕಾರ ೧೭,೫೫,೫೧೨ ಜನಸಂಖ್ಯೆಯನ್ನು ಹೊಂದಿದೆ ಒಟ್ಟು ೭ ತಾಲೂಕುಗಳನ್ನು ಹೊಂದಿದೆ. ಶೈಕ್ಷಣಿಕ ಕ್ಷೇತ್ರದಲ್ಲೂ ಉತ್ತಮ ಸಾಧನೆಯನ್ನು ಮಾಡಿದ ಜಿಲ್ಲೆಯಾಗಿದ್ದು ಅನೇಕ ಕವಿಗಳು ಈ ನೆಲದಲ್ಲಿ ಜನಿಸಿದ್ದಾರೆ. ಶಿಕ್ಷಣದ ಗುಣಮಟ್ಟವು ಶೇ೮೦% ರಷ್ಟಿದೆ ಹಾಗೂ ಆರ್ಥಿಕವಾಗಿ, ರಾಜಕೀಯವಾಗಿ,ಸಾಮಾಜಿಕವಾಗಿ ಮುಂಚೂಣಿಯಲ್ಲಿರುವ ಜಿಲ್ಲೆಯಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಸಾದುಲಿಂಗಾಯತರು, ವೀರಶೈವಲಿಂಗಾಯತರು, ಒಕ್ಕಲಿಗರು, ಗೌಡಾಸ್, ಬಣಜಿಗ, ನೊಣಬರು, ನಾಯಕರು, ಕುರುಬರು, ಹೆಚ್ಚಿನ ಸಂಖ್ಯೆಯಲ್ಲಿದ್ದು ಮುಸ್ಲಿಮರು, ಬ್ರಾಹ್ಮಣರು, ಹರಿಜನರು, ಮುಂತಾದ ಸಮುದಾಯದವರು ವಾಸವಾಗಿದ್ದಾರೆ. ಸಮೀಕ್ಷೆಯ ಪ್ರಕಾರ ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟು ೮೪ ಕುಟುಂಬಗಳು ಇದ್ದು ಒಟ್ಟು ಜನಸಂಖ್ಯೆ ೪೩೨, ಪುರುಷರು ೨೪೦, ಮಹಿಳೆಯರು ೧೯೨ ಇರುತ್ತಾರೆ ಇವರಲ್ಲಿ ಸೊರಬ ತಾಲೂಕಿನ ಸುಮನಹಳ್ಳಿ(ಸಮನ್ವಳ್ಳಿ)ಯಲ್ಲಿ ಲಾಳಗೊಂಡ ಲಿಂಗಾಯತರು ಅಧಿಕವಾಗಿದ್ದು ಇವರನ್ನು  ದಾವಣಿಗರೆಂದು ಗುರುತಿಸಲಾಗುತ್ತದೆ. ಇದಕ್ಕೆ ಪ್ರತೀಕವಾಗಿ

ಈ ಊರಿನಲ್ಲಿ ದೊಡ್ಡಬಸವೇಶ್ವರ ದೇವಸ್ಥಾನವಿದ್ದು ಅದನ್ನು ಅವರು ಆರಾಧಿಸುತ್ತಾರೆ. ಇಲ್ಲಿನ ಲಾಳಗೊಂಡರು(ದಾವಣಿಗರು) ಬಿಜಾಪುರದ ಮೂಲದವರೆಂದು ವಕ್ತೃಗಳಿಂದ ತಿಳಿದು ಬರುತ್ತದೆ.

**ಕೋಷ್ಟಕ: ೫.೧.೧೪ ಹಾವೇರಿ ಜಿಲ್ಲೆಯ ಲಿಂಗವಾರು ಜನಸಂಖ್ಯೆ**

| ಒಟ್ಟು ಕುಟುಂಬಗಳು | ೩೦೭ | |
|---|---|---|
| ಲಿಂಗ | ಸಂಖ್ಯೆ | ಶೇಕಡ |
| ಪುರುಷರು | ೫೦೭ | ೫೩.೭ |
| ಮಹಿಳೆಯರು | ೪೩೬ | ೪೬.೨ |
| ಒಟ್ಟು ಜನಸಂಖ್ಯೆ | ೯೪೩ | ೧೦೦ |

ಹಾವೇರಿ ಜಿಲ್ಲೆಯು ೧೯೯೭ರಲ್ಲಿ ರಚನೆಯಾದ ಏಳು ಜಿಲ್ಲೆಗಳಲ್ಲಿ ಒಂದಾಗಿದ್ದು, ಉತ್ತರ ಕರ್ನಾಟಕದ ಹೆಬ್ಬಾಗಿಲು ಎಂದೂ ಸಹ ಕರೆಯುವರು. ತುಂಗಾಭದ್ರನದಿಯ ಉತ್ತರ ಭಾಗದ ಮೊದಲ ಜಿಲ್ಲೆಯಾಗಿ ಕಂಡುಬರುವುದು. ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟ ಈ ಜಿಲ್ಲೆಯು ೨೦೧೧ರ ಜನಗಣತಿಯಂತೆ ೧.೫೯.೬೬೮ ಜನಸಂಖ್ಯೆ ಹೊಂದಿದೆ. ದೇಶಿಯ ಸಂಸ್ಕೃತಿಯ ಸೊಗಡಿನಿಂದ ಕೂಡಿರುವ ಜಿಲ್ಲೆಯಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿದೆ. ಹಾವೇರಿ ಜಿಲ್ಲೆಯ ವಿವಿಧ ಹಳ್ಳಿಗಳಲ್ಲಿ ಲಾಳಗೊಂಡರ ಕುಟುಂಬಗಳು ನೆಲೆನಿಂತಿರುವುದನ್ನು ಕಾಣಬಹುದು. ೨೦೦೧ ರ ಕೆ ಎಂ ಮೇತ್ರಿಯವರ ವರದಿಯ ಪ್ರಕಾರ ೨೭೨ ಕುಟುಂಬಗಳು ಇದ್ದು. ಇದೀಗ ೩೦೭ ಕುಟುಂಬಗಳು ನೆಲೆಸಿರುವುದು ಕಂಡು ಬರುತ್ತದೆ. ಹಲವು ಕುಟುಂಬಗಳು ವಿಭಜನೆಗೊಂಡು ಚಿಕ್ಕ ಕುಟುಂಬಗಳ ಆಕಾಂಕ್ಷೆಯಿಂದಾಗಿ ಮತ್ತು ಆಧುನಿಕತೆ ಜೀವನ ಶೈಲಿ ಮತ್ತು ವೈವಾಹಿಕ ಸ್ಥಿತಿಗತಿಯಿಂದಾಗಿ ಕುಟುಂಬಗಳ ಸಂಖ್ಯೆ ಹೆಚ್ಚುತ್ತಿರುವುದು ಕಂಡುಬರುತ್ತದೆ. ಇಲ್ಲಿಯ ಕೃಷಿಯು ಮಳೆಯಾದಾರಿತವಾಗಿದ್ದು ಲಾಳಗೊಂಡರ ಆರ್ಥಿಕ ಸ್ಥಿತಿ ಕಷ್ಟಕರವಾಗಿದೆ. ಶಿಕ್ಷಣದ ಮಟ್ಟವು ಇನ್ನೂ ಕೆಳ ಮಟ್ಟದಲ್ಲಿಯೇ ಇದೆ. ಅನೇಕ ಯುವಕರು ಪದವಿಯನ್ನು ಪಡೆದಿದ್ದರು ನಿರುದ್ಯೋಗದ ಸಮಸ್ಯೆಗೆ ಒಳಗಾಗಿದ್ದಾರೆ. ಮಹಿಳೆಯರ ಶಿಕ್ಷಣ ಮಟ್ಟವು ಪದವಿಗಿಂತ ಕೆಳ ಮಟ್ಟದಲ್ಲಿದೆ.

**ಕೋಷ್ಟಕ: ೫.೨. ಲಾಳಗೊಂಡರ ಜಿಲ್ಲಾವಾರು ಸಮುದಾಯದ ಲಿಂಗವಾರು ಜನಸಂಖ್ಯೆಯ ಶೇಕಡ ಪ್ರಮಾಣ**

| ಜಿಲ್ಲೆಗಳು | ಕುಟುಂಬಗಳು | ಶೇಕಡ | ಜನಸಂಖ್ಯೆ | ಪುರುಷರು | ಮಹಿಳೆಯುರು | ಶೇಕಡ |
|---|---|---|---|---|---|---|
| ಕಲಬುರ್ಗಿ | ೨೦೨ | ೨.೩೧ | ೧೦೨೮ | ೬೨೦ | ೪೦೮ | ೨.೪೫ |
| ಕೊಪ್ಪಳ | ೨೧೦ | ೨.೪೦ | ೯೧೨ | ೪೬೬ | ೪೪೬ | ೨.೧೮ |
| ಗದಗ | ೧೬೩ | ೧.೮೬ | ೮೮೨ | ೪೭೫ | ೪೦೭ | ೨.೦೯ |
| ಚಿತ್ರದುರ್ಗ | ೨೧೮ | ೨.೪೯ | ೯೨೬ | ೫೩೫ | ೩೯೧ | ೨.೨೧ |

| | | | | | | |
|---|---|---|---|---|---|---|
| ತುಮಕೂರು | ೫೩ | ೦.೬೦ | ೨೩೨ | ೧೧೮ | ೧೧೪ | ೦.೫೫ |
| ದಾವಣಗೆರೆ | ೯೦ | ೧.೦೨ | ೪೭೦ | ೨೩೬ | ೨೩೪ | ೧.೧೨ |
| ಧಾರವಾಡ | ೧೨೪ | ೧.೪೧ | ೫೮೮ | ೩೦೪ | ೨೮೪ | ೧.೪೦ |
| ಬಳ್ಳಾರಿ | ೩೩೪೨ | ೩೮.೨೨ | ೧೬೭೧೦ | ೯೩೧೬ | ೭೩೯೪ | ೩೯.೯೬ |
| ಬಾಗಲಕೋಟೆ | ೧೦೩ | ೧.೧೭ | ೪೨೩ | ೨೨೩ | ೨೦೦ | ೧.೦೧ |
| ಬೆಳಗಾವಿ | ೪೮ | ೦.೫೪ | ೨೦೬ | ೧೦೬ | ೧೦೦ | ೦.೪೮ |
| ಬೆಂಗಳೂರು ಗ್ರಾಮಾಂತರ | ೧೫೮೬ | ೧೮.೧೪ | ೯೪೨೩ | ೪೯೭೩ | ೪೪೫೦ | ೨೨.೫೩ |
| ರಾಯಚೂರು | ೨೨೧೩ | ೨೫.೩೧ | ೮೬೪೩ | ೪೮೫೭ | ೩೭೮೬ | ೨೦.೬೭ |
| ಶಿವಮೊಗ್ಗ | ೮೪ | ೦.೯೬ | ೪೩೨ | ೨೪೦ | ೧೯೨ | ೧.೦೩ |
| ಹಾವೇರಿ | ೩೦೭ | ೩.೫೧ | ೯೪೩ | ೫೦೭ | ೪೩೬ | ೨.೨೫ |
| **ಒಟ್ಟು** | **೮೭೪೩** | **೧೦೦** | **೪೧೮೧೮** | **೨೨೯೭೬** | **೧೮೮೪೨** | **೧೦೦** |

**ಜಿಲ್ಲಾವಾರು ಲಾಳಗೊಂಡ ಸಮುದಾಯದ ಒಟ್ಟು ಕುಟುಂಬಗಳ ಶೇಕಡಾವಾರು ಪೈ ನಕ್ಷೆ**

**ಕುಟುಂಬಗಳು**




ಕರ್ನಾಟಕದ ಇತಿಹಾಸದ ದಾಖಲೆ ೨೦೦೦ ವರ್ಷಕ್ಕೂ ಹೆಚ್ಚಿನದು. ಹಲವು ಮಹಾ ಸಾಮ್ರಾಜ್ಯಗಳು ಹಾಗೂ ರಾಜವಂಶದವರು ಕರ್ನಾಟಕವನ್ನು ಆಳಿ ಇಲ್ಲಿಯ ಇತಿಹಾಸ, ಸಂಸ್ಕೃತಿ ಹಾಗೂ ಬೆಳವಣಿಗೆಗೆ ಕಾರಣರಾಗಿದ್ದಾರೆ. ಕರ್ನಾಟಕ ಮೂಲದ ಸಾಮ್ರಾಜ್ಯಗಳ ಪ್ರಭಾವ ಭಾರತದ

ಎಲ್ಲಾ ಭಾಗಗಳಲ್ಲೂ ಕಂಡುಬರುತ್ತದೆ. ಕರ್ನಾಟಕದ ಇತಿಹಾಸ ಪೂರ್ವದ ಅಥವಾ ಪೂರ್ವೇತಿಹಾಸದ ವಿಸ್ತಾರವಾದ ಅಧ್ಯಯನ ಪ್ರಾರಂಭ ಮಾಡಿದ ಹೆಗ್ಗಳಿಕೆ ರಾಬರ್ಟ್‌ಬ್ರೂಸ್ ಫೂಟ್ ಅವರಿಗೆ ಸಲ್ಲುತ್ತದೆ. ಕರ್ನಾಟಕವನ್ನು ಹಳೇಶಿಲಾಯುಗ, ಮಧ್ಯಶಿಲಾಯುಗ, ಮತ್ತು ನವಶಿಲಾಯುಗಗಳ ಸಂಸ್ಕೃತಿಗಳಡಿಯಲ್ಲಿಯೂ ಅಧ್ಯಯಿನಿಸಲಾಗುತ್ತದೆ. ಕರ್ನಾಟಕವು ಭಾರತದ ನೈರುತ್ಯ ಭಾಗದ ರಾಜ್ಯವಾಗಿದೆ. ಇದು ಎತ್ತರವಾದ, ಸಮತಟ್ಟಾದ ಮತ್ತು ವಿಸ್ತಾರವಾದ ಪ್ರದೇಶವಾಗಿದ್ದು ದಖನ್ ಪ್ರಸ್ಥಭೂಮಿಯಲ್ಲಿ ವಿಸ್ತರಿಸಿದ್ದು ವಜ್ರಾಕೃತಿ ಹೊಂದಿದೆ. ಕರ್ನಾಟಕ ಪದವು ಕರು ಮತ್ತು ನಾಡು ಎಂಬ ಪದಗಳಿಂದ ಬಂದಿದ್ದು, ಇದರ ಅರ್ಥ ಎತ್ತರವಾದ ಭೂಮಿ. ಇನ್ನೊಂದು ಅರ್ಥದಲ್ಲಿ ಕರು ಎಂದರೆ 'ಕಪ್ಪು' ನಾಡು ಎಂದರೆ 'ಭೂಮಿ' ಅಂದರೆ ಕರುನಾಡು ಎಂದರೆ ಕಪ್ಪುಮಣ್ಣಿನ ನಾಡು ಎಂದರ್ಥ. ಬ್ರಿಟಿಷರ ಆಡಳಿತದಲ್ಲಿ ಕರ್ನಾಟಕ್ ಎಂಬ ಪದವನ್ನು ಈ ಭಾಗಕ್ಕೆ ಬಳಸುತ್ತಿದ್ದುದನ್ನು ನಾವು ಗಮನಿಸಬಹುದು. ಸ್ವತಂತ್ರ ಭಾರತದ ೨೮ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಭಾರತ ಸ್ವತಂತ್ರಗೊಂಡ ನಂತರ ಮಹಾರಾಜ ಜಯಚಾಮರಾಜ ಒಡೆಯರು ತಮ್ಮ ರಾಜ್ಯವನ್ನು ಭಾರತದ ಒಕ್ಕೂಟಕ್ಕೆ ಸೇರಿಸಿದರು. ೧೯೫೦ ರಲ್ಲಿ ಮೈಸೂರು ಭಾರತದ ರಾಜ್ಯವಾಯಿತು. ಏಕೀಕರಣ ಚಳುವಳಿಯು ನವೆಂಬರ್ ೧ ೧೯೫೬ ರಲ್ಲಿ ವಿಶಾಲ ಮೈಸೂರು ರಾಜ್ಯದ ರಚನೆಗೆ ಕಾರಣವಾಯಿತು. ೧೯೫೬ ರ ಪ್ರಾಂತೀಯ ಪುನರ್‌ರಚನಾ ಅಧಿನಿಯಮದ ಪ್ರಕಾರ ಕೊಡಗು, ಮದ್ರಾಸ್, ಮುಂಬೈ, ಹೈದ್ರಾಬಾದ್ ಸರ್ಕಾರದ ಅಧೀನದಲ್ಲಿನ ಕನ್ನಡ ಮಾತನಾಡುವ ಪ್ರದೇಶಗಳು ಒಟ್ಟಾಗಿ ಮೈಸೂರಿಗೆ ಸೇರಿದವು. ಮುಂದೆ ೧೯೭೩ ರ ನವೆಂಬರ್ ೧ ರಂದು ಕರ್ನಾಟಕವೆಂದು ನಾಮಕರಣ ಮಾಡಲಾಯಿತು. ಕರ್ನಾಟಕವು ೧,೯೧,೭೯೧ ಚದುರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಉತ್ತರದಿಂದ ದಕ್ಷಿಣ ತುದಿಯವರೆಗೆ ೮೦೫ ಕಿಲೋಮೀಟರ್ ಉದ್ದ ಮತ್ತು ಪಶ್ಚಿಮದಿಂದ ಪೂರ್ವದವರೆಗೆ ೨೮೩ ಕಿಲೋಮೀಟರ್ ಅಗಲವನ್ನು ಹೊಂದಿದೆ. ಒಟ್ಟು ೨೯ ಜಿಲ್ಲೆಗಳು, ೧೭೬ ತಾಲ್ಲೂಕುಗಳು, ೪ ವಿಭಾಗಗಳು, ೪೬ ಉಪ ವಿಭಾಗಗಳು, ೭೪೫ ಹೋಬಳಿಗಳನ್ನು ಹೊಂದಿದೆ. ಕರ್ನಾಟಕವು ಸುಮಾರು ೩೮೭೨೪ ಚದುರ ಕಿಲೋಮೀಟರ್ ಅರಣ್ಯ ಪ್ರದೇಶವನ್ನು ಹೊಂದಿದೆ. ಇದು ರಾಜ್ಯದ ಒಟ್ಟು ಭೂಮಿಯ ಶೇಕಡಾ ೨೦ ಭಾಗ. ಪ್ರಸ್ತುತದಲ್ಲಿ ಕರ್ನಾಟಕದ ಅಧೀನದಲ್ಲಿ ಒಟ್ಟು ೩೦ ಜಿಲ್ಲೆಗಳು ಕಂಡುಬರುತ್ತವೆ. ೨೦೧೧ ರ ಜನಗಣತಿಯ ಪ್ರಕಾರ ೬,೧೧,೩೦,೭೦೪ ಜನಸಂಖ್ಯೆಯನ್ನು ಹೊಂದಿದೆ, ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯು ವಿವಿಧ ಪ್ರಕಾರದ ಸಮುದಾಯಗಳನ್ನು ಒಳಗೊಂಡಿದೆ. ಪ್ರತಿಯೊಂದು ಜನ ಸಮುದಾಯಗಳನ್ನು ಪ್ರತಿ ೧೦ ವರ್ಷಗಳಿಗೊಮ್ಮೆ ಮಾಡುವ ಜನಗಣತಿಯಲ್ಲಿ ಜಾತಿವಾರು ಸಮೀಕ್ಷೆ ಮಾಡಿ ಗಣತಿಮಾಡಲಾಗುತ್ತದೆ.

ಲಾಳಗೊಂಡ ಎಂಬ ಹೆಸರಿನಲ್ಲಿ ಬೆಂಗಳೂರು ಗ್ರಾಮಾಂತರ ೧೫೮೬ ಕುಟುಂಬಗಳಿದ್ದು, ೯೪೨೩ ಜನಸಂಖ್ಯೆಯನ್ನು ಹೊಂದಿದೆ. ರಾಯಚೂರು ೨೨೧೩ ಕುಟುಂಬಗಳಲ್ಲಿ ೮೬೪೩ ಜನರು, ದಾವಣಗೆರೆ ೯೦ ಕುಟುಂಬಗಳಲ್ಲಿ ೪೭೦ ಜನರು, ಗದಗ ೧೬೩ ಕುಟುಂಬಗಳಲ್ಲಿ ೮೭೮ ಜನರು, ಬಾಗಲಕೋಟೆ ೧೦೩ ಕುಟುಂಬಗಳಲ್ಲಿ ೪೨೩ ಜನರು, ಕೊಪ್ಪಳ ೨೧೦ ಕುಟುಂಬಗಳಲ್ಲಿ ೯೧೨

ಜನರು, ಶಿವಮೊಗ್ಗ ೮೪ ಕುಟುಂಬಗಳಲ್ಲಿ ೪೩೨ ಜನರು, ಬೆಳಗಾವಿ ೪೮ ಕುಟುಂಬಗಳಲ್ಲಿ ೨೦೬ ಜನರು, ಧಾರವಾಡ ೧೨೪ ಕುಟುಂಬಗಳಲ್ಲಿ ೫೮೮ ಜನರು, ಕಲಬುರ್ಗಿ ೨೦೨ ಕುಟುಂಬಗಳಲ್ಲಿ ೧೦೨೮ ಜನರು, ಬಳ್ಳಾರಿ ೩೩೪೨ ಕುಟುಂಬಗಳಲ್ಲಿ ೧೬೭೧೦ಜನರು, ಹಾವೇರಿ ೩೦೭ ಕುಟುಂಬಗಳಲ್ಲಿ ೯೪೩ ಜನರು, ಚಿತ್ರದುರ್ಗ ೨೧೮ ಕುಟುಂಬಗಳಲ್ಲಿ ೯೨೬ ಜನರು, ತುಮಕೂರು ೫೩ ಕುಟುಂಬಗಳಲ್ಲಿ ೨೩೨ ಜನರು, ನೆಲೆನಿಂತಿವೆ. ಈ ೧೪ ಜಿಲ್ಲೆಗಳ ಸಮೀಕ್ಷೆಯ ವರದಿಯ ಪ್ರಕಾರ ಒಟ್ಟು ೮೭೪೩ ಕುಟುಂಬಗಳಲ್ಲಿ ೪೧,೮೧೪ ಜನಸಂಖ್ಯೆಯನ್ನು ನೋಡಬಹುದು.

ಈ ಜಿಲ್ಲಾವಾರು ಜನಸಂಖ್ಯೆಯಲ್ಲಿ ಪುರುಷರು ಮತ್ತು ಮಹಿಳೆಯರು ಸೇರಿದ್ದು ಪ್ರತಿ ಜಿಲ್ಲಾವಾರು ಶೇಕಡ ಪ್ರಮಾಣವನ್ನು ಅವಲೋಕಿಸಿದಾಗ ಲಾಳಗೊಂಡ ಸಮುದಾಯದ ಒಟ್ಟು ಜನಸಂಖ್ಯೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ೨೨.೫೩. ರಾಯಚೂರು ೨೦.೬೭, ದಾವಣಗೆರೆ ೧.೧೨, ಗದಗ ೨.೦೬, ಬಾಗಲಕೋಟೆ ೧.೦೧, ಕೊಪ್ಪಳ ೨.೧೮, ಶಿವಮೊಗ್ಗ ೧.೦೩, ಬೆಳಗಾವಿ ೦.೪೮, ಧಾರವಾಡ ೧.೪೦, ಕಲಬುರ್ಗಿ ೨.೪೫, ಬಳ್ಳಾರಿ ೩೬.೯೬, ಹಾವೇರಿ ೨.೨೫, ಚಿತ್ರದುರ್ಗ ೨.೨೧, ತುಮಕೂರು ೦.೫೫ ರಷ್ಟು ಜನಸಂಖ್ಯಾ ಪ್ರಮಾಣವನ್ನು ಹೊಂದಿರುವುದು ಕಂಡು ಬರುತ್ತದೆ. ಈ ಸಮೀಕ್ಷೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅತಿ ಹೆಚ್ಚು ಲಾಳಗೊಂಡ ಸಮುದಾಯವು ಬಳ್ಳಾರಿ ಮತ್ತು ರಾಯಚೂರುಗಳಲ್ಲಿ ಹಾಗೂ ಅತೀ ಕಡಿಮೆ ಬಾಗಲಕೋಟೆ ಮತ್ತು ತುಮಕೂರುಗಳಲ್ಲಿ ಕಂಡುಬರುತ್ತದೆ.

ಕರ್ನಾಟಕದ ೬೧,೯೫,೨೯೭ ಜನಸಂಖ್ಯೆಯಲ್ಲಿ ಸಮೀಕ್ಷೆಯಂತೆ ೪೧,೮೧೪ ಜನಸಂಖ್ಯೆಯನ್ನು ಮಾತ್ರ ಹೊಂದಿರುವ ಲಾಳಗೊಂಡ ಸಮುದಾಯದ ಗುರುತಿಸುವಿಕೆಯಲ್ಲಿ ಗೊಂದಲವಿದ್ದು, ಯಾವುದೇ ಸರ್ಕಾರಿ ಸೌಲಭ್ಯಗಳು ದೊರೆಯದಂತೆ ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸುವಲ್ಲಿ ಸಮುದಾಯದ ಹೆಸರು ಬಳಕೆಯಲ್ಲಿಲ್ಲದಿರುವುದು ಮತ್ತು ಮೀಸಲಾತಿ ಪಟ್ಟಿಯಲ್ಲಿಲ್ಲದಿರುವುದು ಸಮುದಾಯವನ್ನು ಕಡೆಗೆ ತಳ್ಳಿದೆ. ಇದಕ್ಕಾಗಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಜೊತೆಗೆ ಮುಖ್ಯವಾಹಿನಿಗೆ ತರಲು ಸಹಾಯಕವಾಗುವುದು ಎಂಬ ಆಶಯದೊಂದಿಗೆ ಈ ಅಧ್ಯಯನ ಮಾಡಲಾಗಿದೆ. ಸಮುದಾಯದ ಮನಸ್ಥಿತಿಗಳನ್ನು ಇಂದು ಸಾಮಾಜಿಕವಾಗಿ, ರಾಜಕೀಯ, ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಸ್ಥಾನಮಾನಗಳನ್ನು ಹೊಂದಲು ಮುಂದಾಗುವಂತೆ ಸಮುದಾಯವನ್ನು ಸಂಘಟಿತಗೊಳಿಸುವ ಮತ್ತು ಅವರ ಹಕ್ಕುಗಳನ್ನು ಪಡೆಯುವ ಶಕ್ತಿ ಬರುವಂತೆ ಮಾಡುವುದರ ಮೂಲಕ ಅಭಿವೃದ್ಧಿಯೆಡೆಗೆ ಕೊಂಡೊಯ್ಯುವುದು ಅನಿವಾರ್ಯವಾಗಿದೆ.

**ಕೋಷ್ಟಕ: ೫.೩. ಲಾಳಗೊಂಡ ಸಮುದಾಯದ ವಯೋಮಾನದ ಪ್ರಮಾಣ**

| ವಯಸ್ಸು | ಪುರುಷರು | | ಮಹಿಳೆಯರು | | |
|---|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಒಟ್ಟು ಶೇಕಡ |
| ೧ ರಿಂದ ೫ | ೩೭೩೩ | ೮.೯೨ | ೩೦೦೨ | ೭.೧೭ | ೧೬.೦೯ |
| ೬ ರಿಂದ ೧೮ | ೪೫೨೧ | ೧೦.೮೧ | ೩೭೪೪ | ೮.೯೫ | ೧೯.೭೬ |

| | | | | | |
|---|---|---|---|---|---|
| ೧೯ ರಿಂದ ೪೦ | ೬೭೭೩ | ೧೬.೧೯ | ೬೩೩೬ | ೧೫.೧೫ | ೩೧.೩೪ |
| ೪೧ ರಿಂದ ೬೦ | ೫೮೦೬ | ೧೩.೮೯ | ೪೪೨೮ | ೧೦.೫೮ | ೨೪.೪೭ |
| ೬೧+ | ೨೧೪೩ | ೫.೧೨ | ೧೩೩೨ | ೩.೧೮ | ೮.೦೩ |
| ಒಟ್ಟು | ೨೨,೯೭೬ | ೫೪.೯೩ | ೧೮,೮೪೨ | ೪೫.೦೩ | ೧೦೦% |

**ಲಾಳಗೊಂಡ ಸಮುದಾಯದ ವಯೋಮಾನದ ಪ್ರಮಾಣ ಪೈ ನಕ್ಷೆ**

**ವಯೋಮಾನದ ಪ್ರಮಾಣ ಪುರುಷರು/ಮಹಿಳೆಯರು ಒಟ್ಟು ಶೇಕಡಾ**




ಆಧುನಿಕ ಮಾನವನ ಜೀವನಕ್ರಮ, ಆಹಾರಪದ್ಧತಿ, ಆರೋಗ್ಯದ ಮಟ್ಟವನ್ನು ಆದಿಮಾನವನ ಜೀವನ ಕ್ರಮಕ್ಕೆ ಹೋಲಿಸಿ ನೋಡಿದರೆ ತುಂಬಾ ವಿಭಿನ್ನತೆಯನ್ನು ಕಾಣಬಹುದು ಪೂರ್ವಜರ ಸಮಾಜ ಜೀವನ ಪದ್ಧತಿಯು ತುಂಬಾ ಸರಳತೆಯಿಂದ ಕೂಡಿದ್ದು, ಅಂದಿನ ಕಾಲದಲ್ಲಿ ಮಾನವನ ಜೀವಿತಾವಧಿಯ ಪ್ರಮಾಣ ಕನಿಷ್ಠ ೧೦೦–೧೫೦ ವರ್ಷಗಳಾಗಿತ್ತು ಎಂದು ಅಂದಾಜಿಸಬಹುದು. ಆದರೆ ೨೦೧೧ರ ಮಾನವ ಅಭಿವೃದ್ಧಿ ಪ್ರಾಧಿಕಾರದ ಪ್ರಕಾರ ಭಾರತದ ಮಾನವನ ಆಯುಷ್ಯ ಪ್ರಮಾಣ ೬೭ ವರ್ಷಗಳಿಗೆ ತಂದು ನಿಲ್ಲಿಸಿದೆ. ಪ್ರಕೃತಿಯ ಮಡಿಲಲ್ಲಿ ಅದರ ಆರಾಧನೆ ಮತ್ತು ಅವಲಂಬನೆಯಿಂದ ಜೀವಿಸುತ್ತಿದ್ದ ಋಷಿಮುನಿಗಳ ಜೀವಿತಾವಧಿಯೇ ಬೇರೆಯೇ ಆಗಿತ್ತು. ಸಾಮಾನ್ಯ ಮಾನವನಿಗಿಂತ ಹೆಚ್ಚಿನ ಜೀವತಾವಧಿಯನ್ನು ಹೊಂದಿರುವುದು ತಿಳಿದುಬರುತ್ತದೆ. ಆಗಿನ ಜನರ ಪ್ರಕೃತಿಗೆ ಪೂರಕವಾದ ಜೀವನದಲ್ಲಿ ಆಹಾರಕ್ರಮ, ವಾಸದನೆಲೆ, ಸೀಮಿತ ಜನಸಂಖ್ಯೆ, ಪಾರಂಪರಿಕ ವೈದ್ಯಪದ್ಧತಿಗಳು ಸರಳ ಸಮಾಜಕ್ಕೆ ಕಾರಣವಾಗಿರಬಹುದು. ಆದರೆ ಮಾನವನ ಬುದ್ಧಿಮತ್ತೆ ಅಧಿಕವಾದಂತೆ ಪರಿಸರ ಮಾರಕ ಚಿಂತನೆಗಳಿಂದ ತನ್ನ ಆಯುಷ್ಯವನ್ನು ಕಡಿಮೆಗೊಳಿಸಿಕೊಂಡಿದ್ದಾನೆ. ಸಮಾಜ ಸಂಕೀರ್ಣವಾಗಿ ಜನಸಂಖ್ಯೆ ಅಧಿಕವಾದಾಗ ಸಹಜವಾಗಿ ಉತ್ಪಾದನೆಯ ಪ್ರಮಾಣ ಅಧಿಕವಾಗಬೇಕಾಗುತ್ತದೆ. ಇಷ್ಟೆಲ್ಲಾ ತಾಂತ್ರಿಕ ಕೌಶಲ್ಯಗಳಿಂದ ಉತ್ಪಾದನೆ ಮಾಡಿದರೂ ಜನಸಂಖ್ಯೆಗೆ

ಅನುಗುಣವಾಗಿ ಉತ್ಪಾದನೆ ಆಗುತ್ತಿಲ್ಲ. ಇದನ್ನು ನೀಗಿಸಲು ಕೃಷಿಯಲ್ಲಿ ತಂತ್ರಜ್ಞಾನ ಅಳವಡಿಸಿ ಹೈಬ್ರಿಡ್ ಬೀಜಗಳಿಂದ ಬೆಳೆ ಬೆಳೆಯುತ್ತಿದ್ದಾನೆ. ಇದರಿಂದಾಗಿ ಇಂದು ಅತಿಯಾಗಿ ಮಣ್ಣಿನ ಫಲವತ್ತತೆ ಕಡಿಮೆಯಾಗಿದೆ. ಅರಣ್ಯ ನಾಶದಿಂದಾಗಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ಇದರ ಜೊತೆಗೆ ಈ ಮಿಶ್ರತಳಿಗಳ ಕೃಷಿಯಲ್ಲಿ ರಾಸಾಯನಿಕಗಳನ್ನು ಬಳಸಿ ಆಹಾರ ಪದಾರ್ಥಗಳನ್ನು ಬೆಳೆಯಲಾಗುತ್ತಿದೆ. ಭಾರತದಂತಹ ಕೃಷಿ ಪ್ರಧಾನ ದೇಶವು ಇಂದಿನ ವಿಶೇಷ ಆರ್ಥಿಕ ವಲಯ ನೀತಿಗಳಿಗೆ ಒಳಗಾಗಿ ಕೃಷಿಗೆ ಯೋಗ್ಯವಾಗಿದ್ದ ಭೂಮಿಯನ್ನು ಕೈಗಾರಿಕೀಕರಣ ಮತ್ತು ಜಾಗತೀಕರಣದ ನೆಪದಲ್ಲಿ ಬಂಡವಾಳಶಾಯಿಗಳು ಇಂದು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ. ಇದರಿಂದ ಮಾನವನ ಆಹಾರ ಕ್ರಮವು ಪಾಶ್ಚಿಮಾತ್ಯ ಆಹಾರ ಕ್ರಮಗಳಿಂದ ಅನುಕರಿಸಲ್ಪಟ್ಟಿದ್ದು, ವಿಷಪೂರಿತ ಆಹಾರ ಪದಾರ್ಥಗಳು ಮಾನವನ ಜೀವಿತಾವಧಿಯ ಮೇಲೆ ಪರಿಣಾಮ ಬೀರುತ್ತಿವೆ.

ಕೈಗಾರಿಕೆಗಳ ಬೆಳವಣಿಗೆಯಿಂದ ಜನರು ಗ್ರಾಮೀಣ ಪ್ರದೇಶದಿಂದನಗರ ಗ್ರಾಮೀಣ ಪ್ರದೇಶಗಳ ಕಡೆಗೆ ಸಾಗುತ್ತಿರುವುದರಿಂದ ಗ್ರಾಮಗಳ ನಾಡಾಗಿದ್ದ ಭಾರತ ಉಪನಗರ ಮತ್ತು ನಗರಗಳ ನಾಡಾಗಿ ಸೃಷ್ಟಿಯಾಗುತ್ತಿರುವುದನ್ನು ಕಾಣಬಹುದು. ಕೈಗಾರಿಕೆಯ ತ್ಯಾಜ್ಯ ವಸ್ತುಗಳು ನದಿ, ವಾಯು, ಪರಿಸರ, ಶಬ್ದ ಮಾಲಿನ್ಯವನ್ನು ಉಂಟುಮಾಡಿ ಮಾನವನ ಆರೋಗ್ಯದ ಮೇಲೆ ಪ್ರಭಾವ ಬೀರುತ್ತಿವೆ. ಮಹಿಳೆಯರು ಸಂತಾನೋತ್ಪತ್ತಿ ಶಕ್ತಿಯನ್ನು ಕಳೆದುಕೊಂಡು ಬಂಜೆತನಕ್ಕೆ ಒಳಗಾಗುತ್ತಿದ್ದಾರೆ. ಆಧುನಿಕ ಮಾನವನ ಯಾಂತ್ರಿಕ ಬದುಕು ಪ್ರಕೃತಿ ಸ್ನೇಹಿಯಾಗಿರದೆ ಪ್ರಕೃತಿಗೆ ಮಾರಕವಾಗಿರುವುದರಿಂದ ಮನುಷ್ಯನ ಆರೋಗ್ಯದಲ್ಲಿ ವ್ಯತ್ಯಾಸಗಳು ಉಂಟಾಗಿದ್ದು, ಆಹಾರ ಕ್ರಮ ಕೈಗಾರಿಕೆಗಳ ಅತಿಯಾದ ಸ್ಥಾಪನೆ, ರಸಾಯನಗಳಿಂದ ಕೂಡಿದ ಕೃಷಿ ಇವೆಲ್ಲವುಗಳಿಂದ ಉಂಟಾದ ಪ್ರಕೃತಿ ವಿಕೋಪಗಳು ಮಾನವನ ಆಯುಷ್ಯ ಪ್ರಮಾಣವನ್ನು ತಗ್ಗಿಸುತ್ತಿವೆ. ಮಾನವ ಜೀವಿತಮಟ್ಟವನ್ನು ಹೆಚ್ಚಿಸಲು ವಿಶ್ವಆರೋಗ್ಯ ಸಂಸ್ಥೆಯು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಏನೆಲ್ಲಾ ಯೋಜನೆಗಳನ್ನು ರೂಪಿಸಿದರೂ ಅದು ಫಲಕಾರಿಯಾಗಿಲ್ಲ.

ಲಾಳಗೊಂಡರ ಕುರಿತಾದ ಅಧ್ಯಯನದಲ್ಲಿ ೮೭೪೩ ಕುಟುಂಬಗಳ ೪೧,೮೧೮ ಜನಸಂಖ್ಯೆಯಲ್ಲಿ ಇವರ ಜನಸಂಖ್ಯೆಯನ್ನು ವರ್ಗೀಕರಿಸಿದಾಗ ೧-೫ ವಯಸ್ಸಿನವರಲ್ಲಿ ಪುರುಷರು ೩೭೩೩ ಜನರಿದ್ದು ಶೇಕಡ ೮.೯೨ ರಷ್ಟು, ಮಹಿಳೆಯರು ೩೦೦೨ ಜನರಿದ್ದು ಶೇಕಡ ೭.೧೭ ರಷ್ಟಿದ್ದಾರೆ. ೬-೧೮ ವಯಸ್ಸಿನಲ್ಲಿ ಪುರುಷರು ೪೫೨೧ ಜನರಿದ್ದು ೧೦.೮೧ ಮತ್ತು ಮಹಿಳೆಯರು ೩೭೪೪, ೮.೯೫ ರಷ್ಟು, ೧೯-೪೦ ವಯಸ್ಸಿನವರಲ್ಲಿ ಪುರುಷರು ೬೭೭೩, ಶೇಕಡ೧೬.೧೯ ರಷ್ಟು, ಮಹಿಳೆಯರು ೬೩೩೬, ೧೫.೧೫ ರಷ್ಟು, ೪೧-೬೦ ವಯಸ್ಸಿನವರಲ್ಲಿ ಪುರುಷರು ೫೮೦೬, ಶೇಕಡ ೧೩.೮೯ ರಷ್ಟು ಮಹಿಳೆಯರು ೪೪೨೮, ಶೇಕಡ ೧೦.೫೮ ಜನರಿದ್ದು, ೬೦ಕ್ಕಿಂತ ಹೆಚ್ಚಿನ ವಯಸ್ಸಿನ ಪುರುಷರು ೨೧೪೩ ಜನರಿದ್ದು ೫.೧೨ ರಷ್ಟು, ಮಹಿಳೆಯರು ೧೩೩೨, ಶೇಕಡ ೩.೧೮ ರಷ್ಟಿದ್ದಾರೆ. ಜನರ ವಯೋಮಾನದ ಪ್ರಮಾಣ ಈ ಸಮೀಕ್ಷೆಯ ಅನ್ವಯ ತಿಳಿಯುತ್ತದೆ. ಕೋಷ್ಟಕ ೫.೧೭ನ್ನು ಗಮನಿಸಿದಾಗ

ಒಟ್ಟು ಜನಸಂಖ್ಯೆಯಲ್ಲಿ ೧೯-೪೦ ವಯಸ್ಸಿನವರು ಅಧಿಕವಾಗಿದ್ದು, ಅಧಿಕ ಸಂಖ್ಯೆಯಲ್ಲಿ ದುಡಿಯುವ ವಯಸ್ಸಿನವರಿರುವುದನ್ನು ಕಾಣಬಹುದಾಗಿದೆ. ೬೦ ವರ್ಷಕ್ಕೂ ಮೇಲ್ಪಟ್ಟವರ ಜನಸಂಖ್ಯೆ ೩೪೭೫ ಇದ್ದು, ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇದರಿಂದ ಇವರ ಆಯುಷ್ಯ ಪ್ರಮಾಣ ೭೫-೮೦ ಎಂದು ಹೇಳಬಹುದಾಗಿದೆ. ಅದನ್ನು ಪೈ ನಕಾಶೆಯ ಮೂಲಕವೂ ಸಹ ವಿವರಿಸಲಾಗಿದೆ. ಪೂರ್ವಿಕರು ಅಧಿಕವಾಗಿ ಗ್ರಾಮೀಣ ವಾಸಿಗಳಾಗಿದ್ದು ಪ್ರಕೃತಿಯ ಮಡಿಲಲ್ಲಿ ಶ್ರಮ ಜೀವಿಗಳಾಗಿದ್ದು ಕೃಷಿ ಚಟುವಟಿಕೆಯಲ್ಲಿ ಸದಾ ನಿರತರಾಗಿದ್ದುದರಿಂದ ಮತ್ತು ಆಹಾರ ಕ್ರಮ ಸಾವಯವ ದವಸದಾನ್ಯಗಳ ಬಳಕೆಯಿಂದಾಗಿ ಸದೃಢ ದೈಹಿಕ ಮತ್ತು ಮಾನಸಿಕ ಆರೋಗ್ಯ ಹೊಂದಿದ್ದರು, ಮಹಿಳೆಯರು ಶ್ರಮ ಜೀವಿಗಳಾಗಿ ಪುರುಷನಷ್ಟೇ ಜೀವನದ ಸಮನಾದ ಶ್ರಮ ಹೊಂದಿದ್ದರು. ಆಗಾಗಿ ಅಧಿಕ ಆಯುಷ್ಯನ್ನು ಪಡೆದಿದ್ದರು ಆದರೆ ಇಂದಿನ ಒತ್ತಡದ ಜೀವನ, ಅತಿಯಾದ ಆಹಾರ ಸೇವನೆ, ಅಪೌಷ್ಟಿಕತೆಯುಳ್ಳ ರಾಸಾಯನಿಕಗಳ ಬಳಕೆಯ ದವಸ ಧಾನ್ಯಗಳ ಬಳಕೆ ಮತ್ತು ಕಲುಷಿತ ಗಾಳಿ ನೀರು ಬಳಕೆಯಿಂದಾಗಿ ಆಧುನಿಕ ಮಾನವನ ಜೀವಿತಾವಧಿಯ ಮಟ್ಟ ಕ್ಷೀಣಿಸಿರುವುದನ್ನು ನೋಡಬಹುದು.

**ಕೋಷ್ಟಕ: ೫.೪. ಲಾಳಗೊಂಡ ಸಮುದಾಯದ ವೈವಾಹಿಕ ಸ್ಥಿತಿಗತಿ**

| ವಯಸ್ಸು | ಪುರುಷರು | | ಮಹಿಳೆಯರು | | |
|---|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಒಟ್ಟು ಶೇಕಡ |
| ವಿವಾಹಿತರು | ೧೨,೪೩೫ | ೨೯.೭೩ | ೧೨,೧೭೯ | ೨೯.೧೨ | ೫೮.೮೫ |
| ಅವಿವಾಹಿತರು | ೧೦,೪೧೧ | ೨೪.೮೯ | ೬,೪೦೭ | ೧೫.೩೨ | ೪೦.೨೧ |
| ವಿಧವೆ/ವಿದುರ | ೧೩೦ | ೦.೩೧ | ೨೫೬ | ೦.೬೧ | ೦.೯೨ |
| **ಒಟ್ಟು** | **೨೨,೯೭೬** | **೫೪.೯೩** | **೧೮೮೪೨** | **೪೫.೦೫** | **೧೦೦** |

ಪ್ರಕೃತಿಯಲ್ಲಿನ ಪ್ರತಿಯೊಂದು ಪ್ರಾಣಿ ಪಕ್ಷಿಗಳಿಗೆ ಬದುಕಲು ಆಹಾರ, ನೀರು, ಗಾಳಿಯ ಅವಶ್ಯಕತೆ ಇರುವಂತೆ ತನ್ನ ಲೈಂಗಿಕ ತೃಷೆಯ ಇಂಗಿತಕ್ಕಾಗಿ ಮತ್ತು ತನ್ನ ವಂಶಾಭಿವೃದ್ಧಿಗಾಗಿ ಸಂಗಾತಿಯನ್ನು ಬಯಸುವುದು ಪ್ರಕೃತಿಯ ನಿಯಮ. ಅಂತೆಯೇ ಮಾನವನು ಸಹ ತನ್ನ ಲೈಂಗಿಕ ತೃಷೆಯ ಇಂಗಿತಕ್ಕಾಗಿ ಮತ್ತು ತನ್ನ ವಂಶಾಭಿವೃದ್ಧಿಗಾಗಿ ಸಂಗಾತಿಯನ್ನು ಪಡೆಯಲು ವಿವಾಹ ಎಂಬ ಸಂಸ್ಥೆಯನ್ನು ಹುಟ್ಟುಹಾಕಿಕೊಂಡಿದ್ದಾನೆ. ಆಧುನಿಕ ಯುಗದಲ್ಲಿ ಜಾಗತೀಕರಣ, ಯಾಂತ್ರಿಕತೆಯಿಂದಾಗಿ ಇಂದು ಕುಟುಂಬ ಮತ್ತು ವಿವಾಹದಲ್ಲಿ ಅನೇಕ ಪರಿವರ್ತನೆಗಳಾಗಿವೆ ಅವಿಭಕ್ತಕುಟುಂಬಗಳು ವಿಭಕ್ತಕುಟುಂಬಗಳಾಗಿವೆ. ಸ್ವಾತಂತ್ರ್ಯ ಎಂಬ ಪರಿಕಲ್ಪನೆಯಲ್ಲಿ ಮಾನವ ಬಂದುತ್ವದ ಮೌಲ್ಯಗಳನ್ನು ಕಳೆದು ಕೊಳ್ಳುತ್ತಿದ್ದಾನೆ. ಇಂದಿನ ಯಾಂತ್ರಿಕ ಬದುಕಿನಲ್ಲಿ ಆರ್ಥಿಕ ಮತ್ತು ರಾಜಕೀಯ ಜೀವನದ ಸೋಗಿನಲ್ಲಿ ಮಾನವ ಮಾರು ಹೋಗಿ ಕುಟುಂಬ ಮತ್ತು ವಿವಾಹದ ಮೌಲ್ಯಗಳನ್ನು ಕಳೆದುಕೊಂಡಿದ್ದಾನೆ. ಸಾಮಾಜಿಕ ಅಂಶಗಳಿಗೆ ಇಂದು ಬೆಲೆ ಇಲ್ಲದಂತಾಗಿದೆ. ಮಾನವನು ಇಂದು ತನ್ನ ಬದುಕನ್ನು

ಯಾಂತ್ರಿಕವಾಗಿಸಿಕೊಂಡಿದ್ದಾನೆ ಜೊತೆಗೆ ಆಧುನಿಕ ಯುಗದಲ್ಲಿ ಭಾರತೀಯರು ತಮ್ಮ ಸಂಸ್ಕೃತಿಗೆ ಪರ್ಯಾಯವಾಗಿ ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರುಹೋಗಿ ವೇಗವಾಗಿ ಬೆಳೆಯುತ್ತಿರುವುದನ್ನು ಕಾಣಬಹುದು. ಲೀವಿಂಗ್‌ಟುಗೆದರ್ ಎಂಬ ಪರಿಕಲ್ಪನೆಯಿಂದ ಪವಿತ್ರವಾದ ವೈವಾಹಿಕ ಸಂಬಂಧಗಳು ಕಳಚಿ ಬೀಳುವಂತಾಗಿದೆ. ಈ ಎಲ್ಲಾ ಅಂಶಗಳು ಸಮಾಜ ಮತ್ತು ಕುಟುಂಬ ಸಾಮಾಜಿಕ ಮೌಲ್ಯಗಳನ್ನು ಕಳೆದುಕೊಳ್ಳುತ್ತಿವೆ ಎಂಬುದರಲ್ಲಿ ಸಂದೇಹವಿಲ್ಲ ಆದರೂ ಸಹ ಭಾರತೀಯ ಗ್ರಾಮೀಣ ಕುಟುಂಬಗಳು ತಂದೆ–ತಾಯಿ ಅಣ್ಣ–ತಂಗಿ ಇತ್ಯಾದಿ ಸಂಬಂಧಗಳಿಗೆ ಸ್ಥಾನವನ್ನು ನೀಡಿ ಬಂಧುತ್ವವನ್ನು ಆಳವಾಗಿ ನೆಲೆಯೂರಿಸಿವೆ. ಅದೇ ರೀತಿ ಹೆಚ್ಚು ಗ್ರಾಮೀಣವಾಸಿಗಳಾದ ಲಾಳಗೊಂಡರು ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರುಹೋಗದೆ ಭಾರತೀಯ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿವೆ.

ಪ್ರಸ್ತುತ ಅಧ್ಯಯನದ ಮಿತಿಯಲ್ಲಿ ೮,೭೪೩ ಕುಟುಂಬಗಳ ವೈವಾಹಿಕ ಸ್ಥಿತಿಯನ್ನು ಗಮನಿಸಿದಾಗ ಒಟ್ಟು ೪೧,೮೧೮ ಜನಸಂಖ್ಯೆಯಲ್ಲಿ ೨೪,೬೧೪ ಜನರು ವಿವಾಹಿತರಾಗಿರುವರು, ೧೬,೮೧೮ ಜನರು ಅವಿವಾಹಿತರು ಹಾಗೂ ವಿಧವೆ/ವಿಧುರರು ೩೮೬ ಜನ ಕಂಡುಬರುವರು.

ಕೋಷ್ಟಕ ೫.೧೮. ಪ್ರಕಾರ ೨೪,೬೧೮ ಜನರು ವಿವಾಹಿತರು ಕಂಡುಬಂದಿದ್ದು ಇದರಲ್ಲಿ ಪುರುಷರಿಗಿಂತ ಮಹಿಳೆಯರ ವಿವಾಹಿತ ಪ್ರಮಾಣ ಅಧಿಕವಾಗಿದೆ ಕಾರಣ ಕಡಿಮೆ ಶಿಕ್ಷಣ ಮತ್ತು ಆರ್ಥಿಕತೆ ಮಟ್ಟ ಕಡಿಮೆ ಇರುವುದರಿಂದ ಹೆಣ್ಣು ಮಕ್ಕಳನ್ನು ಬೇಗನೆ ವಿವಾಹ ಮಾಡುತ್ತಾರೆ. ಉಳಿದವರು ಮಕ್ಕಳು ಮತ್ತು ಹದಿಹರೆಯದವರಿಗಾದ್ದರೆ. ಅವಿವಾಹಿತರು ೧೬೮೧೮ ಜನರಿದ್ದು, ಚಿಕ್ಕ ಕುಟುಂಬಗಳ ಪರಿಕಲ್ಪನೆಯೆಡೆಗೆ ಮಾರು ಹೋಗಿರುವುದರಲ್ಲಿ ಲಾಳಗೊಂಡರು ಹೊರತಾಗಿಲ್ಲ ಇವರಲ್ಲಿ ಗಂಡು ಸಂತಾನದ ಅಪೇಕ್ಷೆಯು ಲಾಳಗೊಂಡರಲ್ಲಿಯೂ ಸರ್ವೆಸಾಮಾನ್ಯವಾಗಿದೆ. ಈ ಕೋಷ್ಟಕದಲ್ಲಿ ಮತ್ತೊಂದು ಪ್ರಮುಖ ಅಂಶ ವಿಧವೆ/ವಿಧುರ ಪ್ರಮಾಣವಾಗಿದೆ. ೧೩೦ ಜನ ವಿಧುರರು ಮತ್ತು ೨೫೬ ಜನ ವಿಧವೆಯರು ಕಂಡು ಬಂದಿದ್ದು, ಅಕಾಲಿಕ ಮರಣ ಕಾರಣವಾಗಿವೆ.

**ಕೋಷ್ಟಕ: ೫.೫. ಲಾಳಗೊಂಡ ಸಮುದಾಯದ ಮನೆಯ ಸ್ವರೂಪ (ವಾಸದ ನೆಲೆ)**

| | ಸಂಖ್ಯೆ | ಶೇಕಡ |
|---|---|---|
| ಆರ್‌ಸಿಸಿ | ೨೮೪೩ | ೩೨.೫೧ |
| ಆಶ್ರಯ ಮನೆ | ೧೭೬೮ | ೨೦.೨೨ |
| ಹೆಂಚಿನ ಮನೆ | ೧೪೩೫ | ೧೬.೪೧ |
| ಮಾಳಿಗೆಮನೆ(ಮಣ್ಣಿನ ತಾರಸಿ) | ೨೬೨೯ | ೩೦.೦೬ |
| ಗುಡಿಸಲು | ೪೫ | ೦.೫೧ |
| ಇತರೆ | ೨೩ | ೦.೨೬ |
| ಒಟ್ಟು | ೮೭೪೩ | ೧೦೦% |

ಮಾನವ ತನ್ನ ವಾಸಕ್ಕಾಗಿ ಮೂಲದಲ್ಲಿ ಪ್ರಾಣಿಗಳಂತೆ ಮರದ ಪೊಟರೆ ಗುಹೆಗಳಿಗೆ ಅವಲಂಬಿತನಾಗಿದ್ದ. ಕಾಡುಪ್ರಾಣಿಗಳ ಜೊತೆ ಪ್ರಕೃತಿಯ ಮಡಿಲಲ್ಲಿ ಅಲೆಮಾರಿಯಾಗಿ ತಿರುಗಾಡುತ್ತಾ ಜೀವನ ನಡೆಸುತ್ತಿದ್ದ ಅನಂತರ ಮಾನವನು ತನ್ನ ಬದುಕಿನ ಸುರಕ್ಷತೆಗಾಗಿ ಗುಂಪಾಗಿ, ಸಮೂಹ ಮತ್ತು ಸಮುದಾಯಗಳಾಗಿ ಬದುಕಲು ಪ್ರಾರಂಭಿಸಿದ ನಂತರ ನಾಗರಿಕತೆಯ ಪರಿಣಾಮವಾಗಿ ಹಳ್ಳಿ, ಪಟ್ಟಣ, ನಗರ, ರಾಜ್ಯಗಳ ಪರಿಕಲ್ಪನೆಗಳೆಡೆಗೆ ಸಾಗುತ್ತಾ ಬಂದಿದೆ. ಭಾರತೀಯ ಸಮಾಜದ ಜಾತಿ ವ್ಯವಸ್ಥೆಯಲ್ಲಿ ಮೇಲು ಕೀಳು ಎಂಬ ಸ್ತರ ವಿನ್ಯಾಸದಿಂದಾಗಿ ಅನೇಕ ಸಮುದಾಯಗಳು ತಮ್ಮ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಬೇರೆಬೇರೆ ಸಮುದಾಯಗಳ ಆಚಾರ ವಿಚಾರ ಉಡುಗೆ ತೊಡುಗೆ, ಆಹಾರ ಪದ್ಧತಿಯಲ್ಲಿ ಬದಲಾವಣೆಯನ್ನು ಕಂಡುಕೊಂಡವು. ಇದನ್ನೇ ಎಂ ಎನ್ ಶ್ರೀನಿವಾಸ್‌ರವರು ಸಂಸ್ಕೃತೀಕರಣ ಎಂದಿದ್ದಾರೆ. ಇಂತಹ ಸ್ಥಿತ್ಯಂತರಗಳು ಮಾನವ ಸಮುದಾಯದ ಜೀವನ ವಿಧಾನದಲ್ಲಿ ಬದಲಾವಣೆ ತಂದಿರುವುದು ಸಹಜವಾಗಿ ಕಂಡುಬರುತ್ತದೆ. ನಗರ ಪಟ್ಟಣಗಳ ಪರಿಕಲ್ಪನೆಗೆ ಮಾರು ಹೋಗಿರುವ ಮಾನವ ತನ್ನ ವಾಸದ ಕಟ್ಟಡಗಳ ಶೈಲಿಯಲ್ಲೂ ಬದಲಾವಣೆಯನ್ನು ಕಂಡುಕೊಳ್ಳುತ್ತಾ ಸಾಗಿದ್ದಾನೆ. ಗುಡಿಸಲು ಮನೆಗಳು, ಹಂಚಿನಮನೆಗಳು, ಆರ್‌ಸಿಸಿ ಮನೆಗಳು ಮುಂತಾದ ಅವರವರ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಮನೆಗಳನ್ನು ನಿರ್ಮಿಸಿಕೊಳ್ಳುತ್ತಾನೆ.

ಕೋಷ್ಟಕ ೫.೧೯ ರ ಅನ್ವಯ ಲಾಳಗೊಂಡರ ಸಮುದಾಯದ ವಾಸದಮನೆಗಳ ಸ್ಥಿತಿಗತಿಯನ್ನು ಸಮೀಕ್ಷಿಸಿದಾಗ ೮೭೪೩ ಕುಟುಂಬಗಳಲ್ಲಿ, ಆರ್ ಸಿ ಸಿ ಯಲ್ಲಿ ೨೮೪೩ ಕುಟುಂಬಗಳು, ಗುಡಿಸಲಿನಲ್ಲಿ ೪೫, ಮಾಳಿಗೆಮನೆಗಳಲ್ಲಿ ೨೬೭೯, ಹೆಂಚಿನ ಮನೆಯಲ್ಲಿ ೧೪೩೫, ಆಶ್ರಯಮನೆಯಲ್ಲಿ ೧೭೬೮, ಇತರೆ ಬಾಡಿಗೆ ಮನೆಗಲ್ಲಿ ೨೩ ಕುಟುಂಬಗಳು ನೆಲೆಸಿರುವುದನ್ನು ಕಾಣಬಹುದಾಗಿದೆ. ಕರ್ನಾಟಕ ಮತ್ತು ಕೇಂದ್ರ ಸರ್ಕಾರಗಳು ಇಂದಿರಾ ಆವಾಸ್ ಆಶ್ರಯಮನೆ, ವಾಲ್ಮೀಕಿ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಮುಖಾಂತರ ನಗರ ಮತ್ತು ಗ್ರಾಮೀಣ ಪ್ರದೇಶದ ಜನರಿಗೆ ವಸತಿ ಸೌಲಭ್ಯ ಕಲ್ಪಿಸಿದರೂ ೪೫ ಗುಡಿಸಲು ಮನೆಗಳಲ್ಲಿ ನೆಲೆಸಿರುವುದನ್ನು ಕಾಣಬಹುದು.

**ಕೋಷ್ಟಕ ೫.೫.೧ ವಾಸಸ್ಥಳದ ಅಥವಾ ನೆಲೆಯ ಒಡೆತನ**

| | **ಸಂಖ್ಯೆ** | **ಶೇಕಡ** |
|---|---|---|
| ಬಾಡಿಗೆ ಮನೆ | ೯೮೪ | ೧೧.೨೫ |
| ಸ್ವಂತ ಮನೆ | ೫೧೨೪ | ೫೮.೬೦ |
| ನಿವೇಶನ ಇದೆ ಮನೆ ಇಲ್ಲ | ೧೯೫೬ | ೨೨.೩೭ |
| ಮನೆಇಲ್ಲ/ನಿವೇಶನ ಇಲ್ಲ | ೬೭೯ | ೭.೭೬ |
| **ಒಟ್ಟು** | **೮೭೪೩** | **೧೦೦%** |

ಮಾನವ ತನ್ನ ಮೂಲಭೂತದಲ್ಲಿ ಸುರಕ್ಷತೆಗಾಗಿ ಬೌದ್ಧಿಕತೆಯಿಂದ ಗುಹೆ, ಮರದ ಪೊಟರೆಗಳಲ್ಲಿ ವಾಸಿಸುತ್ತಿದ್ದವನು ಮಣ್ಣಿನ ಮನೆ ನಿರ್ಮಾಣಮಾಡಿಕೊಂಡು ವಾಸಿಸಲು ಪ್ರಾರಂಭಿಸಿದನು. ಇದರಿಂದ

ಮನೆ ಮತ್ತು ಜಮೀನು ಎಂಬ ಆಸ್ತಿಯ ಪರಿಕಲ್ಪನೆ ಬೆಳೆಯಿತು. ಆಧುನಿಕತೆ ಬೆಳೆದಂತೆ ನಗರ ಪಟ್ಟಣಗಳಲ್ಲಿ ವಿಶಾಲ ಮನೆಗಳ ನಿರ್ಮಾಣದಿಂದ ಭೂಮಿಯ ಬೆಲೆ ಹೆಚ್ಚಿದವು ಇದರಿಂದ ಕಡಿಮೆ ಆರ್ಥಿಕ ಪರಿಸ್ಥಿತಿ ಹೊಂದಿದವರು ಮನೆ ನಿರ್ಮಾಣ ಮಾಡುವಲ್ಲಿ ವಿಫಲರಾಗಿದ್ದಾರೆ. ಸರ್ವರಿಗೂ ಸಮಬಾಳು ಎಂದು ಹೇಳುವ ಮನಸ್ಥಿತಿಗಳು ಹೇಳಿಕೆಗಳಿಗೆ ಸೀಮಿತವಾಗಿವೆ. ಪ್ರಜಾಪ್ರಭುತ್ವ ದೇಶವಾದ ಭಾರತದಲ್ಲಿ ಜನರಿಂದ, ಜನರಿಗಾಗಿ, ಜನರಿಗೋಸ್ಕರ ಇರುವ ಆಡಳಿತ ವ್ಯವಸ್ಥೆಯಿದ್ದು, ಇಂದು ಅಧಿಕಾರ ಪಡೆಯಲು ಜಾತಿ ರಾಜಕಾರಣ ಬಹು ಸಂಖ್ಯಾತ ವರ್ಗಗಳ ಅಸ್ತ್ರವಾಗುತ್ತಿದೆ. ಅಧಿಕಾರ ಪಡೆಯುವುದಕ್ಕಾಗಿ ಪ್ರಬಲ ವರ್ಗಗಳ ಓಲೈಕೆಗಾಗಿಯೇ ಯೋಜನೆಗಳು ಸಿದ್ಧವಾಗುವಂತಿದೆ. ಪ್ರತಿಯೊಬ್ಬ ಮಾನವನಿಗೂ ಸಮಾಜದಲ್ಲಿ ಸಮಬಾಳು ಬಾಳಲು ಅವಕಾಶ ಮಾಡಿಕೊಡುವುದು ಪ್ರಜಾಪ್ರಭುತ್ವ ರಾಷ್ಟ್ರದ ಮುಖ್ಯ ಧ್ಯೇಯ ಆದರೆ ಪ್ರಬಲ ವರ್ಗಗಳು ರಾಜಕೀಯ, ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನಗಳಲ್ಲಿ ಮೇಲಸ್ತರದಲ್ಲಿ ನಿಂತು, ಅವಶ್ಯಕತೆಗೂ ಮೀರಿ ಅತಿಯಾದ ಆಸ್ತಿಗಳಿಕೆ ಮಾಡಿಕೊಳ್ಳುವ ದುರುದ್ದೇಶದಿಂದ ದುರ್ಬಲ ವರ್ಗದವರ ಅವಕಾಶಗಳನ್ನು ಕಿತ್ತುಕೊಳ್ಳುತ್ತಿದ್ದಾರೆ ಈ ಕಾರಣವಾಗಿ ಅಸಮಾನತೆ ಸಮಾಜದಲ್ಲಿ ತಾಂಡವಾಡುತ್ತಿದ್ದು. ಭಾರತೀಯ ಸಮಾಜದಲ್ಲಿ ಅಸಮಾನತೆಗೆ ಒಳಗಾಗಿರುವ ಅನೇಕ ಸಮುದಾಯಗಳನ್ನು ನಾವು ಕಾಣಬಹುದು. ಅದರಲ್ಲಿ ಲಾಳಗೊಂಡಲಿಂಗಾಯತ ಸಮುದಾಯದವರು ಹೊರತಾಗಿಲ್ಲ ಜಾತಿಗೆ ಸಂಬಂಧಿಸಿದಂತೆ ಲಾಳಗೊಂಡ ಸಮುದಾಯವು ಪ್ರಬಲ ವರ್ಗವೆ ಆದರೂ ರಾಜಕೀಯ, ಶೈಕ್ಷಣಿಕ, ಆರ್ಥಿಕವಾಗಿ ಇನ್ನೂ ಅಭಿವೃದ್ಧಿ ಹೊಂದದೇ ಇರುವ ಇವರುಗಳ ವಾಸದ ಮನೆಗಳ ಒಟ್ಟು ೮೭೪೩ ಕುಟುಂಬಗಳ ಒಡೆತನವನ್ನು ಸಮೀಕ್ಷಿಸಿದಾಗ ಸ್ವಂತ ಮನೆಗಳಲ್ಲಿ ೫೧೨೪, ಬಾಡಿಗೆ ಮನೆಗಳಲ್ಲಿ ೯೮೪ ಮತ್ತು ಮನೆ ಇಲ್ಲದೆ ಬರಿ ನಿವೇಶನಗಳನ್ನು ಹೊಂದಿರುವ ೧೯೫೬ ಕುಟುಂಬಗಳನ್ನು ಕಾಣಬಹುದು ಹಾಗೂ ನಿವೇಶನವೂ ಇರದೇ ಮನೆಯೂ ಇಲ್ಲದವರ ೬೭೯ ಕುಟುಂಬಗಳನ್ನು ನಾವು ಕಾಣಬಹುದು.

ಕೋಷ್ಟಕ ೫.೨೦ ತಿಳಿಸುವಂತೆ ೮೭೪೩ ಕುಟುಂಬಗಳಲ್ಲಿ ೫೧೨೪ ಮಾತ್ರ ಸ್ವಂತಮನೆ ಹೊಂದಿವೆ ಇನ್ನುಳಿದ ೩೬೧೯ ಕುಟುಂಬಗಳು ಬಾಡಿಗೆ ಮನೆ, ಖಾಲಿ ನಿವೇಶನಗಳಲ್ಲಿ ಅಸುರಕ್ಷಿತ ಮನೆಗಳನ್ನು ನಿರ್ಮಾಣ ಮಾಡಿಕೊಂಡು ವಾಸಿಸುತ್ತಿರುವುದನ್ನು ನೋಡಬಹುದು ಹಾಗೂ ನಿವೇಶನ ಹೊಂದಿರುವವರು ಸರಕಾರಿ ಆಶ್ರಯ ಮನೆಗಳನ್ನು ಪಡೆಯಲು ಸರಕಾರಿ ಕಚೇರಿಗಳಿಗೆ ಅಲೆಯುವ ಪರಿಸ್ಥಿತಿ ನಿರ್ಮಾಣವಾಗಿದೆ.

**ಕೋಷ್ಟಕ: ೫.೬. ಕೃಷಿ ಭೂಮಿ, ಹೆಕ್ಟೇರ್ ಗಳಲ್ಲಿ (೧ ಹೆಕ್ಟೇರ್)**

| | ಕುಟುಂಬ ಸಂಖ್ಯೆ | ಶೇಕಡ | ಹೆಕ್ಟೇರು ಭೂ ಪ್ರದೇಶ | ಶೇಕಡ |
|---|---|---|---|---|
| ಸ್ವ ಭೂಮಿ ಉಳ್ಳವರು | ೬೭೦೩ | ೭೬.೬೬ | ೩೭,೬೦೦ | ೯೩.೮೧ |
| ಲಾವಣಿ ಪಡೆದು ವ್ಯವಸಾಯ ಮಾಡುತ್ತಿರುವವರು | ೨೦೪೦ | ೨೩.೩೩ | ೨೪೮೦ | ೬.೧೮ |
| ಒಟ್ಟು | ೮೭೪೩ | ೧೦೦ | ೪೦,೦೮೦ | ೧೦೦ |

| | | | | |
|---|---|---|---|---|
| ಸಾಗುವಳಿ ಭೂಮಿಯನ್ನು ಒಳಪಟ್ಟಿರುವುದು | ೭೯೦೩ | ೯೦.೩೯ | ೩೨,೬೪೦ | ೮೧.೪೩ |
| ಸಾಗುವಳಿಗೆ ಒಳಪಡದೇ ಇರುವ ಭೂಮಿ ಇರುವುದು | ೮೪೦ | ೯.೬೦ | ೪೯೬೦ | ೧೨.೩೭ |
| ಒಟ್ಟು | ೮೭೪೩ | ೧೦೦ | ೪೦,೦೮೦ | ೧೦೦ |

ಮಾನವನ ಅಲೆಮಾರಿ ಹಂತದ ನಂತರ ಒಂದು ಕಡೆ ನೆಲೆ ನಿಂತು, ಕೃಷಿ ಜೀವನವನ್ನು ಆರಂಭಿಸಿದ. ಕೃಷಿಯನ್ನು ಮುಖ್ಯ ಜೀವನಾಧಾರವನ್ನಾಗಿ ಮಾಡಿಕೊಂಡನು. ರಾಜರ ಆಡಳಿತ ಆರಂಭವಾದ ಮೇಲೆ ಭೂ ಒಡೆತನ ಪದ್ಧತಿಯಲ್ಲಿ ಸಂಕೀರ್ಣತೆ ಕಂಡು ಬಂದಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರಿಸಿದಂತೆ ರಾಜನೇ ಸಮಸ್ತ ಭೂಮಿಯ ಒಡೆಯನಾಗಿದ್ದು ರಾಜನಸೇವೆ ಮಾಡಿದ ವ್ಯಕ್ತಿಗಳಿಗೆ ಭೂಮಿಯನ್ನು ದಾನವಾಗಿ, ಉಂಬಳಿಯಾಗಿ ನೀಡುವ ಕ್ರಮವಿತ್ತು ಹಾಗೂ ಇತರ ಭೂಮಿಗೆ ಕಂದಾಯವನ್ನು ನಿಗದಿ ಪಡಿಸಲಾಗುತ್ತಿತ್ತು ರಾಜನೇ ಕಂದಾಯ ಪ್ರಮಾಣವನ್ನು ನಿರ್ಧರಿಸುವ ಅಧಿಕಾರ ಹೊಂದಿದ್ದನು. ಮೊಗಲರ ಕಾಲದಲ್ಲಿ ಜಮೀನ್ದಾರಿ ಪದ್ಧತಿಯಂತೆ ಭೂಮಿ ಸರ್ಕಾರಕ್ಕೆ ಸೇರಿದ್ದು ಕಂದಾಯವನ್ನು ಸರ್ಕಾರಕ್ಕೆ ನೀಡಬೇಕು ಈ ಕಂದಾಯವನ್ನು ವಸೂಲಿ ಮಾಡಲು ಕೆಲವು ವ್ಯಕ್ತಿಗಳನ್ನು ನೇಮಕ ಮಾಡಲಾಗಿತ್ತು. ಇವರನ್ನು ಜಮೀನ್ದಾರರು ಎಂದು ಕರೆಯಲಾಗುತ್ತಿತ್ತು ರೈತರು ನೇರವಾಗಿ ಸರ್ಕಾರಕ್ಕೆ ಕಂದಾಯವನ್ನು ನೀಡದೇ ಜಮೀನ್ದಾರರಿಗೆ ನೀಡಬೇಕಾದ ಪರಿಸ್ಥಿತಿ ಇತ್ತು. ಜಮೀನ್ದಾರರು ಇದರ ದುರುಪಯೋಗವನ್ನು ಮಾಡಿಕೊಳ್ಳುತ್ತಿದ್ದರು. ಇದು ಹೆಚ್ಚಾಗಿ ಭಾರತದ ಎಲ್ಲಾ ಪ್ರದೇಶಗಳಲ್ಲಿ ಜಾರಿಯಲ್ಲಿತ್ತು ಪಂಜಾಬಿನಲ್ಲಿ ಹೆಚ್ಚು ಮಹಲ್‌ವಾರಿ ಪದ್ಧತಿ ಜಾರಿಯಲ್ಲಿತ್ತು. ಈ ಪದ್ಧತಿಯಂತೆ ಇಡೀ ಭೂ ವ್ಯವಸ್ಥೆ ಹಳ್ಳಿಗೆ ಸೇರಿದ್ದು, ಇಡೀ ಗ್ರಾಮದ ಸದಸ್ಯರು ಕಂದಾಯವನ್ನು ನೀಡಬೇಕಿತ್ತು, ಬರಬರುತ್ತಾ ರೈತವಾರಿ ಪದ್ಧತಿ ಜಾರಿಗೆ ಬಂದಿತು. ಇಲ್ಲಿಂದ ಅನೇಕ ಭೂ ಸುಧಾರಣೆಗಳನ್ನು ಬ್ರಿಟಿಷರು ಜಾರಿಗೆ ತಂದರು. ಇತ್ತ ಬ್ರಿಟಿಷರು ಭಾರತಕ್ಕೆ ಬಂದಿದ್ದರಿಂದ ಆದಿವಾಸಿ ಮತ್ತು ಬುಡಕಟ್ಟುಗಳು ತಮ್ಮದೇ ಆದ ಪ್ರತ್ಯೇಕ ಹೆಸರು, ಮೂಲ, ಧಾರ್ಮಿಕ ಹಾಗೂ ಸಾಮಾಜಿಕ ಹಿನ್ನೆಲೆ, ನಿವಾಸ ಪ್ರದೇಶದಿಂದ ವಿಚಲಿತರಾದರು ತಮ್ಮ ನಿವಾಸಗಳನ್ನು ಬದಲಿಸಬೇಕಾಯಿತು. ಅವರು ಕೃಷಿ ಭೂಮಿಯಿಂದ ವಿಚಲಿತರಾದರು ರೈತಚಳುವಳಿಗಳು ರೈತರ ಸಹಭಾಗಿತ್ವದಲ್ಲಿ ನಡೆದವು. ಮುಖ್ಯವಾಗಿ ಸಂತಾಲರ ದಂಗೆ (೧೮೫೫) ನೀಲಿ ಬೆಳೆಗಾರರ ಹೋರಾಟ(೧೮೬೦) ಮುಂತಾದ ಹೋರಾಟಗಳು ನಡೆದವು. ಸ್ವತಂತ್ರ್ಯದ ನಂತರ ಅನೇಕ ಭೂ ಸುಧಾರಣ ಕಾಯ್ದೆಗಳನ್ನು ಜಾರಿಗೆ ತರಲಾಯಿತು 'ಉಳುವವನೆ ಭೂ ಒಡೆಯ' ಕಾಯ್ದೆ ಜಾರಿಗೆ ಬಂದಿತು. ಇಲ್ಲಿಂದ ರೈತರು ತಕ್ಕ ಮಟ್ಟಿಗೆ ತಮ್ಮ ಜಮೀನನ್ನು ಹೊಂದಿ ವ್ಯವಸಾಯ ಮಾಡಲು ಪ್ರಾರಂಭಿಸಿದರು. ಆರ್ಯರ ಉತ್ತರ ಕರ್ನಾಟಕದ ಆಕ್ರಮಣದ ನಂತರ ದಕ್ಷಿಣಭಾರತಕ್ಕೆ ಬಂದ ಹಲವು ಸಮುದಾಯಗಳು ಪ್ರಮುಖವಾಗಿ ನದಿಮುಖಜ ಭೂಮಿಗಳಲ್ಲಿ ನೆಲೆನಿಂತು ವ್ಯವಸಾಯ ಮಾಡಲು ಆರಂಭಿಸಿದರು. ಹೀಗೆ ಬಂದವರಲ್ಲಿ ಲಾಳಗೊಂಡ ಸಮುದಾಯವು

ಒಂದು. ಪಶುಪಾಲನೆ ಮತ್ತು ಕೃಷಿ ಮೂಲ ಕಸುಬಾದ ಲಾಳಗೊಂಡರಿಗೆ ನದಿಮುಖಜ ಪ್ರದೇಶವನ್ನು ಹೊಂದುವುದು ಅನಿವಾರ್ಯವಾಗಿತ್ತು ಮತ್ತು ಪಶುಪಾಲನೆಗೆ ನೀರು, ಉತ್ತಮ ನೈಸರ್ಗಿಕ ಪ್ರದೇಶವನ್ನು ಹೊಂದಲು ಇಂತಹ ಪ್ರದೇಶಗಳಲ್ಲಿ ನೆಲೆನಿಂತರು ಮುಂದೆ ಆ ಪ್ರದೇಶಗಳೆ ಹಳ್ಳಿಗಳಾಗಿ ಪರಿವರ್ತನೆಯಾದವು ಮತ್ತು ಲಾಳಗೊಂಡರು ಕೃಷಿ ಉದ್ದೇಶದಿಂದಾಗಿ ಅಧಿಕವಾಗಿ ಗ್ರಾಮೀಣವಾಸಿಗಳೇ ಆಗಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಮೇಲಿನ ಕೋಷ್ಟಕವನ್ನು ಅವಲೋಕಿಸಬಹುದಾಗಿದೆ.

ಕೋಷ್ಟಕ: ೫.೨೧ ದ ಅನ್ವಯ ಒಟ್ಟು ೮೭೪೩ ಲಾಳಗೊಂಡ ಸಮುದಾಯದಲ್ಲಿ ಸ್ವಂತ ಭೂಮಿಯನ್ನು ೬೭೦೩ ಕುಟುಂಬಗಳು ಹೊಂದಿದ್ದು ಶೇ ೭೬.೬೬ ರಷ್ಟು ಇದ್ದಾರೆ. ಬೇರೆಯವರಿಂದ ಜಮೀನನ್ನು ಲಾವಣಿ(ಗುತ್ತಿಗೆ ಅಥವಾ ಮಿಟ್ಟಾ ಅಥವಾ ಕೋರು)ಪಡೆದು ಕೃಷಿ ಮಾಡುವವರು ೨೦೪೦ ಕುಟುಂಬಗಳಿದ್ದು ೨೩.೩೩ ರಷ್ಟು ಇದ್ದಾರೆ. ಹಾಗೂ ೮೭೪೩ ಕುಟುಂಬಗಳಲ್ಲಿ ಸಾಗುವಳಿ ಭೂಮಿಯನ್ನು ೭೯೦೩ ಕುಟುಂಬಗಳು ಒಳಗೊಂಡಿದ್ದು ೯೦.೩೯ ರಷ್ಟು ಇದ್ದಾರೆ. ಸಾಗುವಳಿಗೆ ಒಳಪಡದೇ ಇರುವ ಭೂಮಿಯನ್ನು ಹೊಂದಿರುವ ೮೪೦ ಕುಟುಂಬಗಳಿದ್ದು ೯.೬೦ ರಷ್ಟಿದ್ದಾರೆ. ಹಾಗೇಯೆ ಲಾಳಗೊಂಡ ಸಮುದಾಯದ ೮೭೪೩ ಕುಟುಂಬಗಳ ಒಟ್ಟು ಕೃಷಿ ಭೂಮಿಯನ್ನು ಹೆಕ್ಟೇರ್‌ಗಳಲ್ಲಿ ಗಮನಿಸಿದಾಗ ೪೦,೦೮೦ ಹೆಕ್ಟೇರ್ ಗಳಲ್ಲಿ ಸ್ವಂತ ಭೂಮಿ ೩೭,೬೦೦ ಹೆಕ್ಟೇರ್ ಇದ್ದು , ೯೩.೮೧ ರಷ್ಟಿದೆ. ಲಾವಣಿಗೆ ಇರುವುದು ೨೪೮೦ ಹೆಕ್ಟೇರ್, ೬.೧೮ ರಷ್ಟಿದೆ. ಹಾಗೂ ಸ್ವಂತ ಭೂಮಿ ೩೭,೬೦೦ ಹೆಕ್ಟೇರ್ ಇದ್ದು ಸಾಗುವಳಿಗೆ ಒಳಪಟ್ಟಿರುವುದು ೩೨,೬೪೦ ಹೆಕ್ಟೇರ್, ೮೧.೪೩ ರಷ್ಟಿದೆ. ಸಾಗುವಳಿಗೆ ಒಳಪಡದೆ ಇರುವುದು ೪೯೬೦ ಹೆಕ್ಟೇರ್,೧೨.೩೭ ರಷ್ಟು, ಈ ರೀತಿಯಾಗಿ ಲಾಳಗೊಂಡ ಸಮುದಾಯದ ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಸಮೀಕ್ಷೆಯ ವರದಿಯನ್ನು ಅವಲೋಕಿಸಿದಾಗ ಶೇಕಡ ೮೫ ಕ್ಕೂ ಅಧಿಕವಾಗಿ ಕೃಷಿಯಲ್ಲಿ ತೊಡಗಿರುವುದನ್ನು ಮನಗಂಡು ಲಾಳಗೊಂಡರು ಮೂಲತಃ ಕೃಷಿ ಮತ್ತು ಪಶುಪಾಲನೆಯಲ್ಲಿ ತೊಡಗಿರುವವರು ಎಂದು ಹೇಳಲು ಸಂಶೋಧನಾ ಅಧ್ಯಯನವು ಸಹಕಾರಿಯಾಗಿದೆ.

**ಕೋಷ್ಟಕ: ೫.೬.೧. ಪಶುಸಂಪತ್ತು**

| ಪಶುಸಂಪತ್ತು | ಸಂಖ್ಯೆ |
|---|---|
| ಎತ್ತು | ೮೯೪೮ |
| ಆಕಳು | ೬೪೯೩ |
| ಎಮ್ಮೆ | ೯೬೭೪ |
| ನಾಯಿ | ೧೩೫೨ |
| ಕುರಿ | ೧೪೩ |
| ಒಟ್ಟು | ೨೬,೬೧೦ |

ಕೃಷಿಯನ್ನೇ ಪ್ರಧಾನವಾಗಿಸಿಕೊಂಡಿರುವ ಲಾಳಗೊಂಡ ಸಮುದಾಯಗಳು ಕೃಷಿಯ ನಿರ್ವಹಣೆ ಮತ್ತು ತನ್ನ ಜೀವನ ನಿರ್ವಹಣೆಗೆ ಹೈನುಗಾರಿಕೆಗಾಗಿ ಪಶುಪಾಲನೆಯನ್ನು ರೂಢಿಗತಮಾಡಿಕೊಂಡು ಬಂದಿರುವ ಸಮುದಾಯ ಕೃಷಿವೃತ್ತಿಯನ್ನು ಅವರು ಬದುಕಿಗೆ ಆಧಾರ ಎಂದುಕೊಂಡಿದ್ದಾರೆ ಆ ಕೃಷಿವೃತ್ತಿ, ಕೃಷಿ ಸಲಕರಣೆಗಳ ಬಗೆಗೆ ಹೆಚ್ಚಿನ ಅಭಿಮಾನ, ಎತ್ತುಗಳೆಂದರೆ ಬಹಳ ಭಕ್ತಿ. ಎತ್ತುಗಳಿಂದಲೇ ಭೂಮಿಯನ್ನು ಊಳುಮೆಮಾಡಿ ಉತ್ತಿಬಿತ್ತುವ ಲಾಳಗೊಂಡ ಸಮುದಾಯದವರು ಸಹ ಆಧುನಿಕ ಕೃಷಿ ಯಂತ್ರೋಪಕರಣಗಳಿಗೆ ಮಾರು ಹೋಗುತ್ತಿದ್ದು ಎತ್ತುಗಳ ಸಾಕಾಣಿಕೆ ಕ್ಷೀಣಿಸುತ್ತಿರುವುದು ಕಂಡು ಬರುತ್ತದೆ. ಎತ್ತುಗಳ ಸಾಕಾಣಿಕೆಯ ವೆಚ್ಚವು ಕಾರಣವಾಗುತ್ತದೆ. ಸಾಕಾಣಿಕೆ ಕಡಿಮೆಯಾದರು ನಂದಿ ಅಥವಾ ಬಸವಣ್ಣನನ್ನು(ಎತ್ತುಗಳು)ನ್ನು ಪ್ರತಿ ನಿತ್ಯ ಪೂಜಿಸುವರು ವರ್ಷದ ಆರಂಭಿಕ ಬಿತ್ತನೆಗೂ ಮೊದಲು ಯುಗಾದಿಯ ದಿನದಂದು ಅಥವಾ ಬಸವನ ಜಯಂತಿಯ ದಿನದಂದು ಮೊದಲ ಬೇಸಾಯವನ್ನು ಎತ್ತುಗಳಿಂದಲೇ ಪ್ರಾರಂಬಿಸುವರು. ಎತ್ತುಗಳು, ಆಕಳು, ಎಮ್ಮೆಸಾಕಾಣಿಕೆಯಿಂದ ಇವರಿಗೆ ಸಾವಯವ ಗೊಬ್ಬರದ ಉಪಯೋಗವು ಚೆನ್ನಾಗಿ ತಿಳಿದಿರುತ್ತದೆ. ಅಲ್ಲದೇ ಹಲವು ಲಾಳಗೊಂಡಲಿಂಗಾಯತ ಸಮುದಾಯದಲ್ಲಿ ನಂದಿಯನ್ನು ಮನೆದೇವರಾಗಿ ಆರಾಧಿಸುವರು. ಮತ್ತು ಕೃಷಿಭೂಮಿಯನ್ನು ಅಧಿಕವಾಗಿ ಹೊಂದಿರುವ ಲಾಳಗೊಂಡ ಸಮುದಾಯದವರು ನಾಯಿಯನ್ನು ತಮ್ಮ ಮತ್ತು ಬೆಳೆಗಳ ಕಾಯುವಿಕೆ ಮತ್ತು ಸುರಕ್ಷತೆಗಾಗಿ ಸಾಕುತ್ತಿದ್ದಾರೆ.

ಕೋಷ್ಟಕ ೫.೨೨ ನ್ನು ವೀಕ್ಷಿಸಿದಾಗ ಸಮೀಕ್ಷೆ ಮಾಡಿದ ೮,೭೪೩ ಕುಟುಂಬಗಳಲ್ಲಿ ಒಟ್ಟು ಎತ್ತುಗಳು ೮,೯೪೮, ಆಕಳು೬,೪೯೩, ಎಮ್ಮೆ ೯,೬೭೪, ನಾಯಿ ೧,೩೫೨, ಇರುವುದನ್ನು ಗಮನಿಸಬಹುದು, ಈಗಲೂ ಹೆಚ್ಚು ಕೃಷಿ ಮಾಡಿತ್ತಿರುವ ಬಳ್ಳಾರಿ, ರಾಯಚೂರು, ಕೊಪ್ಪಳ, ಬಾಗಲಕೋಟೆ ಇತರೆ ಜಿಲ್ಲೆಗಳಲ್ಲಿ ಎತ್ತುಗಳನ್ನು ಹೆಚ್ಚಾಗಿ ಸಾಕುತ್ತಿರುವರು ಮತ್ತು ಕೃಷಿಯ ಜೊತೆಗೆ ಹೈನುಗಾರಿಕೆಯನ್ನು ಉದ್ಯೋಗವನ್ನಾಗಿಸಿಕೊಂಡಿರುವ ದೇವನಹಳ್ಳಿ, ದೊಡ್ಡಬಳ್ಳಾಪುರ ತಾಲೂಕಿನ ವಿವಿಧ ಹಳ್ಳಿಗಳಲ್ಲಿ ಆಕಳು, ಎಮ್ಮೆ ಸಾಕಾಣಿಕೆಯನ್ನು ಹೆಚ್ಚಾಗಿ ನೋಡಬಹುದು. ಹಾಗೆಯೇ ತೋಟಗಾರಿಕೆಯಂತಹ ಕೃಷಿಯಲ್ಲಿ ತೊಡಗಿರುವ ಶಿವಮೊಗ್ಗ, ದಾವಣಗೆರೆ, ತುಮಕೂರು, ಜಿಲ್ಲೆಗಳಲ್ಲಿ ಯಂತ್ರೋಪಕರಣಗಳ ಬಳಕೆ ಅಧಿಕವಾಗಿದ್ದರು ಎತ್ತುಗಳನ್ನು ಸಾಕಿಕೊಂಡಿರುವುದನ್ನು ನೋಡಬಹುದು.

**ಕೋಷ್ಟಕ: ೫.೭. ಜೀವನಾಧಾರ ವೃತ್ತಿಗಳು**

| ವೃತ್ತಿಗಳು | ಪುರುಷರು | | ಮಹಿಳೆಯರು | | |
|---|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಒಟ್ಟು ಶೇಕಡ |
| ಕೃಷಿ | ೧೧,೨೩೬ | ೨೬.೮೬ | ೪೮೨೦ | ೧೧.೫೨ | ೩೮.೩೮ |
| ಸರಕಾರಿ ನೌಕರರು | ೧೮೪೦ | ೪.೪೦ | ೨೧೬ | ೦.೫೧ | ೪.೯೧ |
| ಗೃಹಿಣಿ | ೦೦ | ೦೦ | ೯೩೨೬ | ೨೨.೩೦ | ೨೨.೩೦ |
| ನೇಯ್ಗೆ | ೧೩೨೦ | ೩.೧೫ | ೨೮೦ | ೦.೬೬ | ೩.೮೧ |

| | | | | | |
|---|---|---|---|---|---|
| ಕೂಲಿ | ೫೯೬ | ೧.೪೨ | ೭೨೦ | ೧.೭೨ | ೩.೧೪ |
| ಖಾಸಗಿ ಉದ್ಯೋಗ | ೯೨೩ | ೨.೨೦ | ೧೧೯ | ೦.೨೮ | ೨.೪೮ |
| ಹೈನುಗಾರಿಕೆ | ೯೮೨ | ೨.೩೪ | ೭೫೮ | ೧.೮೧ | ೪.೧೫ |
| ವ್ಯವಹಾರ | ೪೮೧ | ೧.೧೫ | ೩೭೮ | ೦.೯೦ | ೨.೦೫ |
| ಅನುತ್ಪಾದಕರು | ೧೨೦ | ೦.೨೮ | ೧೬೦ | ೦.೩೮ | ೦.೬೬ |
| ಒಟ್ಟು | ೧೭,೪೯೮ | ೪೧.೮ | ೧೬,೮೧೭ | ೪೦.೦೮ | ೮೨.೦೭ |

ವರ್ಣಾಶ್ರಮದಲ್ಲಿ ವ್ಯಕ್ತಿಯ ವೃತ್ತಿಗಳು ಹುಟ್ಟಿನಿಂದಲೇ ನಿಗದಿಯಾಗುತ್ತಿದ್ದವು. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವನು ಪುರೋಹಿತನಾಗಿ, ಕ್ಷತ್ರಿಯನು ರಕ್ಷಕನಾಗಿ, ವೈಶ್ಯನು ವ್ಯಾಪಾರಕ್ಕಾಗಿ, ಶೂದ್ರರು ಈ ಮೂರ್ವರ ಸೇವೆಯನ್ನು ಮಾಡುವುದಕ್ಕಾಗಿಯೇ ಇರುವುದು ಎಂದು ನಿರ್ಧರಿತವಾಗಿದ್ದಿತು. ವೃತ್ತಿಗಳ ಆಧಾರದ ಮೇಲೆ ವ್ಯಕ್ತಿಗಳು ಮೇಲ್ಮಟ್ಟದ ಸ್ಥಾನಮಾನ ಪಡೆದಿದ್ದರು. ಹೀಗೆ ವೃತ್ತಿಗಳ ಆಧಾರದ ಮೇಲೆ ಜಾತಿಗಳು ಬೆಳೆದವು ಇಂತಹ ವೃತ್ತಿಗಳು ಅವರಿಗೆ ಜೀವನಾಧಾರವಾಗಿ ಉಪಜೀವನಕ್ಕೆ ಸಹಕಾರಿಯಾಗಿದ್ದವು ಹಾಗೂ ಅವುಗಳು ಅನಿವಾರ್ಯವು ಸಹ ಆಗಿದ್ದವು ಆದರೆ ಕೆಲವೊಂದು ಬುಡಕಟ್ಟುಗಳು ಮತ್ತು ಅಲೆಮಾರಿಗಳು ಪ್ರದೇಶಕ್ಕನುಗುಣವಾಗಿ ಪರ್ಯಾಯ ವೃತ್ತಿಯನ್ನು ಅನುಸರಿಸಬೇಕಾದ ಅನಿವಾರ್ಯತೆ ಕೆಲವೊಂದು ಸಂದರ್ಭದಲ್ಲಿ ಕಂಡು ಬಂದವು. ಆಧುನಿಕ ಯುಗದಲ್ಲಿ ಸಮುದಾಯ ಯಾವುದೇ ಇರಲಿ ಅವರ ಆರ್ಥಿಕ ಮಟ್ಟವನ್ನು ಆದರಿಸಿ ವ್ಯಕ್ತಿಯ ಸ್ಥಾನವನ್ನು ಗುರುತಿಸಲಾಗುತ್ತದೆ. ಆಧುನಿಕ ಸಮಾಜದಲ್ಲಿ ಪ್ರತಿಯೊಂದು ವೃತ್ತಿಯು ಸಮುದಾಯದ ಉಪಜೀವನಕ್ಕೆ ಅನಿವಾರ್ಯತೆ ಸೃಷ್ಟಿಸಿದ ಬೆನ್ನಲ್ಲೇ, ಪರ್ಯಾಯ ವೃತ್ತಿಗಳು ಇತರ ಸಮುದಾಯಗಳಿಂದ ಎರವಲಾಗಿ ಪಡೆದಿರುವುದನ್ನು ಕಾಣಬಹುದು.

ಲಾಳಗೊಂಡ ಲಿಂಗಾಯತ ಸಮುದಾಯದವರಿಗೆ ಪಾರಂಪರಿಕ ವೃತ್ತಿಯಾದ ಕೃಷಿ ಮತ್ತು ಪಶುಪಾಲನೆಯು ಇವರ ಜೀವದ ಬೆನ್ನೆಲುಬಾಗಿ ಮತ್ತು ಅನಿವಾರ್ಯವಾಗಿರುವುದನ್ನು ಕಾಣುತ್ತೇವೆ. ನೂರಕ್ಕೆ ನೂರರಷ್ಟು ಕೃಷಿಗೆ ಅವಲಂಬಿತರಾಗಿರುವ ಲಾಳಗೊಂಡರು ಭೂಮಿಯನ್ನು ನೆಚ್ಚಿಕೊಂಡು ಬದುಕುವುದನ್ನು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಇಂದಿಗೂ ನಾವು ಬಳ್ಳಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹಾವೇರಿ, ರಾಯಚೂರು, ಕಲಬುರ್ಗಿ, ಬಾಗಲಕೋಟೆ, ಗದಗ, ಕೊಪ್ಪಳ, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿನ ಲಾಳಗೊಂಡರು ನೆಲೆಸಿರುವ ಗ್ರಾಮೀಣ ಪ್ರದೇಶಗಳಲ್ಲಿ ನಾವು ನೋಡಬಹುದು. ಇತ್ತೀಚೆಗೆ ಕೃಷಿಯ ಜೊತೆಗೆ ಪರ್ಯಾಯ ವೃತ್ತಿಗಳಾದ ಹೈನುಗಾರಿಕೆ, ನೇಯ್ಗೆ, ವ್ಯಾಪಾರ–ವಾಣಿಜ್ಯ ಉದ್ಯೋಗಗಳನ್ನು ಮಾಡುತ್ತಿರುವುದನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲೂಕಿನ ಕೋಡಿಮಂಚೇನಹಳ್ಳಿಯ ಲಾಳಗೊಂಡ ಸಮುದಾಯದ ೨೫ ಕುಟುಂಬಗಳು ಒಂದೇ ಹಳ್ಳಿಯಲ್ಲಿ ವಾಸವಾಗಿದ್ದು ಕೃಷಿ, ಹೈನುಗಾರಿಕೆ, ಮಾಡುತ್ತಿರುವುದನ್ನು ಮತ್ತು ಕುರುಬರಹಳ್ಳಿ, ಕೋಡಿಗೆಹಳ್ಳಿಗಳಲ್ಲಿನ ಲಾಳಗೊಂಡರು ನೇಯ್ಗೆಯನ್ನು ತಲತಲಾಂತರದಿಂದ ಪ್ರಮುಖ ಉದ್ಯಮವನ್ನಾಗಿಸಿಕೊಂಡಿರುವುದನ್ನು ಸಮೀಕ್ಷೆಯ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

ಸಮೀಕ್ಷೆಯ ಪ್ರಕಾರ ೮೭೪೩ ಕುಟುಂಬಗಳಲ್ಲಿನ  ವಿವಿಧ ಉದ್ಯೋಗಗಳಲ್ಲಿ ತೊಡಗಿರುವ ಜನರನ್ನು ಕಾಣಬಹುದಾಗಿದೆ. ಅದರಲ್ಲಿ ಪುರುಷರು ೨೨,೯೭೬, ಮಹಿಳೆಯರು ೧೮,೮೪೨ ಜನರಿರುವುದನ್ನು ಕಾಣಬಹುದು. ಕೃಷಿ ಸಂಬಂಧಿ ಕೆಲಸದಲ್ಲಿ ಒಟ್ಟು ೧೧,೨೩೬ ಪುರುಷರು, ೪೮೨೦ ಮಹಿಳೆಯರು, ಇತ್ತೀಚೆಗೆ ಸರಕಾರಿ ಉದ್ಯೋಗಗಳ ಕಡೆಗೆ ಗಮನಹರಿಸಿ ಸರಕಾರಿ ನೌಕರಿಯಲ್ಲಿ ಪುರುಷರು ೧೮೪೦ ಮಹಿಳೆಯರು ೨೧೬ ಜನರು ಇದ್ದಾರೆ. ಇದರಲ್ಲಿ ವೈದ್ಯರು, ಅಭಿಯಂತರರು, ಉಪನ್ಯಾಸಕರು, ಅಧೀಕ್ಷಕರು, ಶಿಕ್ಷಕರು, ಪ್ರಥಮ/ದ್ವಿತೀಯ ದರ್ಜೆಸಹಾಯಕರು, ಪೋಲಿಸರು, ವಕೀಲರು, ಇದ್ದಾರೆ. ಈ ಸಮುದಾಯದವರಲ್ಲಿ ಉನ್ನತಶಿಕ್ಷಣ ಹೊಂದಿರುವವರ ಪ್ರಮಾಣ ಕಡಿಮೆ ಇರುವುದರಿಂದ ಉನ್ನತ ಹುದ್ದೆಯಲ್ಲಿ ಇರುವವರ ಪ್ರಮಾಣ ಕಡಿಮೆ ಇದೆ.  ಮಹಿಳೆಯರಲ್ಲಿ ವಿದ್ಯಾಭ್ಯಾಸದ ಮಟ್ಟ ಕಡಿಮೆ ಇದ್ದು ಗೃಹಿಣಿಯರೇ ಅಧಿಕವಾಗಿ ೯೫೩ ಜನರಿರುವರು, ಉಪಕಸುಬಾದ ನೇಯ್ಗೆಯಲ್ಲಿ ಪುರುಷರು ೧೩೨೦, ಮಹಿಳೆಯರು ೨೮೦ ಇದ್ದಾರೆ. ಇತ್ತೀಚಿನ ದಿನಮಾನದಲ್ಲಿ ಹೊಸತಲೆಮಾರಿನವರು ಶಿಕ್ಷಣದ ಅರಿವು ಮತ್ತು ಸರ್ಕಾರದ ಉಚಿತ ಸಾರ್ವತ್ರಿಕ, ಕಡ್ಡಾಯ ಶಿಕ್ಷಣ ನೀತಿಯಿಂದ  ಮಕ್ಕಳು ಶಿಕ್ಷಣ ಪ್ರಕ್ರಿಯೆಗೆ ಒಳಗಾಗಿದ್ದಾರೆ, ಕೃಷಿ ಭೂಮಿ ಇಲ್ಲದೇ ಇರುವ ಕೆಲವರು ಪುರುಷ ಮಹಿಳೆಯರು ಸೇರಿ ೧೩೧೬ ಜನರು ಬೇರೆಯವರ ಜಮೀನುಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದಾರೆ. ಖಾಸಗಿ ಉದ್ಯೋಗಗಳಲ್ಲಿ ಪುರುಷರು ೯೨೩, ಮಹಿಳೆಯರು ೧೧೯ ಜನ, ಬ್ಯಾಂಕ್, ಆಸ್ಪತ್ರೆ, ಮಹಾನಗರಪಾಲಿಕೆ, ಜಿಲ್ಲಾ ಪಂಚಾಯತ್ ಗಳಲ್ಲಿ ಗುತ್ತಿಗೆ ನೌಕರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಹೈನುಗಾರಿಕೆಯನ್ನು ಹೆಚ್ಚಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಾಣುತ್ತೇವೆ ಕಾರಣ ಹೈನುಗಾರಿಕೆಯ ಬಗ್ಗೆ ಇರುವ ಜ್ಞಾನ, ಲಾಭಗಳಾಗಿವೆ, ವ್ಯವಹಾರ ೪೮೧ ಪುರುಷರು, ೩೭೮ ಮಹಿಳೆಯರು ಅಂಗಡಿ, ತರಕಾರಿ, ಹೂವು ಹಣ್ಣಿನಂತಹ ವ್ಯಾಪಾರಗಳಲ್ಲಿ ತೊಡಗಿಕೊಂಡಿದ್ದಾರೆ. ಅನುತ್ಪಾದಕರು ೧೨೦ ಪುರುಷರು, ೧೬೦ ಮಹಿಳೆಯರು  ಅನಾರೋಗ್ಯ, ಅಂಗವಿಕಲರು, ಬುದ್ಧಿಮಾಂದ್ಯರು ಕಂಡುಬರುವರು.  ಈ ಎಲ್ಲಾ ವಲಯಗಳ ವೃತ್ತಿಗಳಲ್ಲಿ ಒಟ್ಟು ೧೭,೪೯೮ ಇದ್ದು ಶೇಕಡ ೪೧.೦೮ ಪುರುಷರ ಸಂಖ್ಯೆಯನ್ನು ಕಾಣಬಹುದು ಇನ್ನುಳಿದ ೫೪೭೮ ಪುರುಷರು ವಿದ್ಯಾರ್ಥಿಗಳಾಗಿದ್ದಾರೆ. ಮಹಿಳೆಯರ ಸಂಖ್ಯೆ ೧೬೮೧೭, ಶೇಕಡ ೪೦.೦೮ ರಷ್ಟಿದ್ದಾರೆ. ಮಹಿಳೆಯರಲ್ಲಿ ೨೦೨೫ ವಿದ್ಯಾರ್ಥಿನಿಯರು ಇದ್ದು ಶೇಕಡ ೪.೮೪ ಇದ್ದಾರೆ. ಒಟ್ಟು ವೃತ್ತಿ ವಲಯ ಹಾಗೂ ವಿದ್ಯಾರ್ಥಿಗಳು ಸೇರಿ ಪುರುಷರು ೨೨,೯೭೬ ಹಾಗೂ ಮಹಿಳೆಯರು ೧೮,೮೪೨ ಇದ್ದಾರೆ.

**ಕೋಷ್ಟಕ: ೫.೮. ಶೈಕ್ಷಣಿಕ ಸ್ಥಿತಿಗತಿ**

| | ಪುರುಷರು | | ಮಹಿಳೆಯರು | | |
|---|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಒಟ್ಟು ಶೇಕಡ |
| ಅನಕ್ಷರಸ್ಥರು | ೫೩೮೪ | ೧೨.೮೭ | ೬೮೧೬ | ೧೬.೨೯ | ೨೯.೧೬ |
| ಪ್ರಾಥಮಿಕ (೧ ರಿಂದ ೮) | ೫೦೧೬ | ೧೧.೯೯ | ೪೬೭೪ | ೧೧.೧೭ | ೨೩.೧೬ |
| ಪ್ರೌಢಶಾಲೆ (೯–೧೦) | ೨೩೩೮ | ೫.೫೯ | ೨೪೦೭ | ೫.೭೫ | ೧೧.೩೪ |
| ಪಿಯುಸಿ | ೧೧೬೭ | ೨.೭೯ | ೧೨೭೮ | ೩.೦೫ | ೬.೦೨ |
| ಪದವಿ | ೨೧೪೫ | ೫.೧೮ | ೪೯೨ | ೧.೧೭ | ೬.೩೫ |
| ಇಂಜಿನಿಯರಿಂಗ್ | ೩೬೪ | ೦.೮೭ | ೪೫ | ೦.೧೦ | ೦.೯೭ |

| | | | | | |
|---|---|---|---|---|---|
| ವೈದ್ಯಕೀಯ | ೨೩ | ೦.೦೫ | ೫ | ೦.೦೧ | ೦.೦೬ |
| ಐಟಿಪಿ/ಡಿಪ್ಲೋಮಾ | ೨೮೦೬ | ೬.೭೧ | ೧೨೩ | ೦.೨೯ | ೭.೦೦ |
| ೨.೫–೬ ವರ್ಷ ಒಳಗಿನವರು (ಬಾಲವಾಡಿ/ಅಂಗನವಾಡಿ) | ೧೯೪೭ | ೪.೬೫ | ೧೩೦೮ | ೩.೧೨ | ೭.೭೭ |
| ಒಟ್ಟು | ೨೧,೧೯೦ | ೫೦.೭ | ೧೭,೧೪೮ | ೪೦.೯೫ | ೯೧.೬೫ |

ಲಂಬಚಿತ್ರ ೧: ಕರ್ನಾಟಕ ಲಾಳಗೊಂಡ ಪುರುಷರ ಶೈಕ್ಷಣಿಕ




ಲಂಬಚಿತ್ರ ೨: ಕರ್ನಾಟಕ ಲಾಳಗೊಂಡ ಮಹಿಳಾ ಶೈಕ್ಷಣಿಕ ಸ್ಥಿತಿ



## ಒಟ್ಟು ಶೈಕ್ಷಣಿಕ ಸ್ಥಿತಿಗತಿ




ಭಾರತೀಯ ಇತಿಹಾಸವನ್ನು ಗಮನಿಸಿದಾಗ ಗುರುಕುಲಗಳಿಂದ ಆರಂಭವಾದ ಶಿಕ್ಷಣ ಪದ್ಧತಿ ಕೇವಲ ಮೇಲ್ವರ್ಗದವರು ಮಾತ್ರ ಅಕ್ಷರವನ್ನು ಕಲಿಯಬೇಕು ಎನ್ನುವ ಕಡ್ಡಾಯ ವ್ಯವಸ್ಥೆ ಜಾರಿಯಲ್ಲಿತ್ತು. ಅದು ಪುರೋಹಿತ ವರ್ಗದವರು ಮಾತ್ರ ವೇದಪಠಣ ಮಾಡಬೇಕು ಎಂಬ ನಿಯಮ ಹೊಂದಿತ್ತು, ಬರಬರುತ್ತಾ ಗುರುಕುಲಗಳಿಂದ ಅಗ್ರಹಾರ, ಮದರಸಾ, ಬೌದ್ಧ ಸ್ತೂಪಗಳ ಮೂಲಕ ಕಲಿಕೆಯನ್ನು ಕಲಿಸಲಾಗುತ್ತಿತ್ತು. ಯಾವಾಗ ಬ್ರಿಟಿಷರು ಭಾರತಕ್ಕೆ ಬಂದು ನೆಲೆಸಿದರೋ ಆಗ ಭಾರತೀಯ ಸಂಸ್ಕೃತಿಯನ್ನು ಮತ್ತು ವಿವಿಧ ಭಾಷೆಯ ಸಮುದಾಯಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ವಿಫಲರಾದರು. ಕಾರಣ ಭಾರತದ ಜನರಲ್ಲಿ ತಮ್ಮ ಶಿಕ್ಷಣವನ್ನು ಬಿತ್ತಲು ವಸಾಹತುಶಾಹಿ ನೀತಿಯ ಮೂಲಕ ಔಪಚಾರಿಕ ಶಿಕ್ಷಣವನ್ನು ನೀಡಲು ಪ್ರಾರಂಭಿಸಿದರು. ಇದರ ಜವಾಬ್ದಾರಿಯನ್ನು ಕ್ರೈಸ್ತ ಮಿಷನರಿಗಳು ಹೊತ್ತವು ಈ ಮೂಲಕ ಭಾರತೀಯರ ಬೌದ್ಧಿಕ ಮಟ್ಟವನ್ನು ಬೆಳೆಸಿದರೂ ತನ್ನದೇ ಆದ ಚಾಪನ್ನು ಮೂಡಿಸಿದರು ಇದರ ಫಲವಾಗಿ ಇಂಗ್ಲೀಷ್ ಭಾಷೆ ಇಂದು ಜಾಗತಿಕ ಮಟ್ಟದಲ್ಲಿ ಬಹುಬೇಡಿಕೆ ಪಡೆದುಕೊಂಡಿದೆ. ಅಂದಿನಿಂದ ಔಪಚಾರಿಕ ಶಿಕ್ಷಣ ಜಾರಿಯಾಯಿತು.

ಇಂದು ನಮ್ಮ ಸಂವಿಧಾನವು ಉಚಿತ, ಕಡ್ಡಾಯ ಸಾರ್ವತ್ರಿಕ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದೆ. ಈ ಹಿಂದೆ ಜಾತಿ ವ್ಯವಸ್ಥೆಯಲ್ಲಿ ಅನೇಕ ಸಮುದಾಯಗಳು ಶಿಕ್ಷಣದಿಂದ ವಂಚಿತವಾಗಿದ್ದವು ಅನೇಕ ನೇತಾರರ ಹೋರಾಟದಿಂದ ಇಂದು ಎಲ್ಲರೂ ಶಿಕ್ಷಣವನ್ನು ಪಡೆಯುವಂತಾಗಿದೆ. ಅಲೆಮಾರಿಗಳು ಮತ್ತು ಬುಡಕಟ್ಟುಗಳಿಗೆ ಇಂದು ಅವು ವಾಸಿಸುವ ಪ್ರದೇಶದಲ್ಲಿಯೇ ಗುಡ್ಡಗಾಡುಗಳಲ್ಲಿ ಶಿಕ್ಷಣವನ್ನು ಒದಗಿಸಲಾಗುತ್ತಿದೆ. ಅವರಲ್ಲಿ ಕೆಲವರು ಉನ್ನತ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಅದೇ ರೀತಿ ಗ್ರಾಮೀಣ ಸಮುದಾಯದಲ್ಲೂ ಸಹ ಮಾತೃ ಭಾಷೆ ಶಿಕ್ಷಣವನ್ನು ಸರ್ಕಾರ ಕಡ್ಡಾಯಗೊಳಿಸಿದೆ. ಇಂದು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಎಲ್ಲರೂ ಪಡೆಯುವಂತಾದರು ಜನಸಂಖ್ಯೆ ಕಡಿಮೆ ಇರುವ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣ ಮಾತ್ರ ಜಾರಿಯಲ್ಲಿದೆ. ಇವರು ಬೇರೆ ಗ್ರಾಮಗಳಿಗೆ ಹೋಗಿ

ಪ್ರೌಢಶಿಕ್ಷಣ ಪಡೆಯುವಲ್ಲಿ ವಿಫಲರಾಗಿದ್ದಾರೆ. ಆದರಲ್ಲಿ ಲಾಳಗೊಂಡ ಸಮುದಾಯವು ಸಹಶ್ಯೆಕ್ಷಣಿಕ ಪ್ರಗತಿಯನ್ನು ಸಾಧಿಸಬೇಕಾಗಿದೆ. ಇಂದು ಶಿಕ್ಷಣ ಕೇವಲ ಜ್ಞಾನಾರ್ಜನೆಗಲ್ಲದೆ ಉದ್ಯೋಗಕ್ಕಾಗಿ ಹೆಚ್ಚು ಮಹತ್ವವನ್ನು ಪಡೆದು ಕೊಂಡಿದೆ. ಸರಕಾರವು ಶಿಕ್ಷಣವನ್ನು ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲೆ, ಪದವಿಪೂರ್ವ, ಪದವಿ, ಸ್ನಾತಕೋತ್ತರ ಪದವಿ ಎಂಬ ಹಂತಗಳಲ್ಲಿ ಶಿಕ್ಷಣವನ್ನು ವರ್ಗೀಕರಣಮಾಡಲಾಗಿದೆ. ಭಾರತ ಸರ್ಕಾರ ಶಿಕ್ಷಣಕ್ಕಾಗಿ ಹಲವು ಯೋಜನೆಗಳನ್ನು ಜಾರಿಗೊಳಿಸಿದ್ದರೂ ಗ್ರಾಮೀಣ ಶೈಕ್ಷಣಿಕ ಮಟ್ಟವನ್ನು ಸುಧಾರಿಸಲು ವಿಫಲವಾಗಿದೆ. ಅದರಲ್ಲೂ ಉತ್ತರ ಕರ್ನಾಟಕದ ಶಿಕ್ಷಣದ ಮಟ್ಟ ಕಡಿಮೆ ಇದೆ. ಕಾರಣ ಜನರಲ್ಲಿನ ಶಿಕ್ಷಣದ ಕುರಿತು ಅರಿವು ಮೂಡಬೇಕಾಗಿದೆ ಹಾಗೂ ಮಹಿಳಾ ಶೈಕ್ಷಣಿಕ ಪ್ರಗತಿ ಕಡಿಮೆ ಇದ್ದು ಕುಟುಂಬದ ನಿರ್ವಹಣೆಯಲ್ಲಿ ಪುರುಷರಷ್ಟೇ ಸಮಪಾಲು ನೀಡಿದರೂ ಮಹಿಳಾ ಶಿಕ್ಷಣದ ಅರಿವು ಇಲ್ಲವಾಗಿದೆ. ೨೦೧೧ ರ ಗಣತಿಯ ಒಟ್ಟು ಸಾಕ್ಷರತೆಯ ಪ್ರಮಾಣ ೭೫.೬೦ ಇದ್ದು ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ೮೨.೮೫ ಮತ್ತು ಮಹಿಳೆಯರ ಸಾಕ್ಷರತೆಯ ಪ್ರಮಾಣ ೬೮.೧೩ ಇರುತ್ತದೆ. ಇದನ್ನು ಗಮನಿಸಿದಾಗ ಪುರುಷರಿಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದನ್ನು ಕಾಣಬಹುದು.

ಗ್ರಾಮೀಣ ಹಾಗು ಉತ್ತರಕರ್ನಾಟಕದ ವಾಸಿಗಳೇ ಹೆಚ್ಚಾದ ಲಾಳಗೊಂಡ ಸಮುದಾಯವು ಶಿಕ್ಷಣ ಪಡೆಯುವಲ್ಲಿ ಇನ್ನೂ ಹಿಂದುಳಿದಿದ್ದಾರೆ. ಅದರಲ್ಲೂ ಉತ್ತರ ಕರ್ನಾಟಕದ ಶಿಕ್ಷಣದ ಮಟ್ಟ ಕಡಿಮೆ ಇದೆ. ಕೇವಲ ತಮ್ಮ ಗ್ರಾಮೀಣ ಮಟ್ಟದಲ್ಲಿ ದೊರೆಯುವ ಶೈಕ್ಷಣಿಕ ಸೌಲಭ್ಯವನ್ನು ಮಾತ್ರ ಪಡೆದು ಹೆಚ್ಚುವರಿ ವಿದ್ಯಾಭ್ಯಾಸಕ್ಕಾಗಿ ಬೇರೆ ಸ್ಥಳಗಳಿಗೆ ಹೋಗಿ ಶಿಕ್ಷಣವನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಆರ್ಥಿಕ ಪರಿಸ್ಥಿತಿಯಲ್ಲಿ ಸಬಲರಾದವರು ಮಾತ್ರ ಉನ್ನತವ್ಯಾಸಂಗವನ್ನು ಮುಂದುವರೆಸುವರು ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದವರ ವಿದ್ಯಾಭ್ಯಾಸ ಅರ್ಧದಲ್ಲೇ ನಿಂತು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಅಲ್ಲದೇ ಪುರುಷ ಪ್ರಧಾನ ಸಮುದಾಯದವರಾದ ಲಾಳಗೊಂಡರು ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುವರು ಹಾಗಾಗಿ ಮಹಿಳೆಯರ ಶಿಕ್ಷಣದ ಮಟ್ಟ ಪುರುಷರಿಗಿಂತ ಕಡಿಮೆ ಇದ್ದು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಮಟ್ಟದಲ್ಲೇ ನಿಂತಿರುವುದು ಕಂಡುಬರುತ್ತದೆ.

ಕೋಷ್ಟಕ ೫.೨೪ ಹಾಗೂ ಪೈ ನಕಾಶೆಯ ಪ್ರಕಾರವಾಗಿ ಲಾಳಗೊಂಡ ಸಮುದಾಯದವರ ಶೈಕ್ಷಣಿಕ ಸ್ಥಿತಿಗತಿಯು ವಿವಿಧ ಹಂತಗಳಲ್ಲಿ ಈ ಕೆಳಗಿನಂತಿರುತ್ತದೆ. ಒಟ್ಟು ಸಮೀಕ್ಷೆಗೆ ಒಳಪಟ್ಟ ೮೭೪೩ ಕುಟುಂಬಗಳಲ್ಲಿ ಪುರುಷರಲ್ಲಿ ಶೇಕಡ ೪೩.೫೧, ಮಹಿಳೆಯರಲ್ಲಿ ಶೇಕಡ ೩೮.೪೨ ರಷ್ಟು ಸಾಕ್ಷರತೆ ಇರುತ್ತದೆ. ಇದರಲ್ಲಿ ಅನಕ್ಷರಸ್ಥರು ಪುರುಷರಲ್ಲಿ ೧೨.೮೭, ಮಹಿಳೆಯರು ೧೬.೨೯, ೧-೮ನೇ ತರಗತಿಯಲ್ಲಿ ಕಲಿಯುವವರರ ಸಂಖ್ಯೆ ಶೇಕಡ೨೩.೧೬, ಪ್ರೌಢಶಾಲಾ ಶಿಕ್ಷಣ ೧೧.೩೪, ಪಿಯುಸಿ ೬.೦೨, ಪದವಿ ೬.೩೫ ಎಂಜಿನಿಯರಿಂಗ್ ೦.೯೨, ವೈದ್ಯಕೀಯ ೦.೦೬, ಡಿಪ್ಲೋಮ ೭.೦೦ಗಳಷ್ಟು ಶೇಕಡ ಪ್ರಮಾಣವನ್ನು ಕಾಣಬಹುದಾಗಿದೆ. ವೈದ್ಯಕೀಯ ಮಟ್ಟದಂತಹ ಉನ್ನತ

ಶಿಕ್ಷಣವನ್ನು ಗಮನಿಸಿದಾಗ ಮಹಿಳೆಯರ ಪ್ರಮಾಣ ಸಂಪೂರ್ಣವಾಗಿ ಇಲ್ಲವಾಗಿದೆ. ಈ ಎಲ್ಲಾ ಅಂಕಿ–ಅಂಶಗಳಲ್ಲಿ ಮಹಿಳೆಯ ಶೈಕ್ಷಣಿಕ ಪ್ರಗತಿ ಪುರುಷನಿಗಿಂತ ಕಡಿಮೆ ಇದ್ದು, ಮಹಿಳೆಯು ಕುಟುಂಬದ ನಿರ್ವಹಣೆಯಲ್ಲಿ ಪುರುಷನಷ್ಟೇ ಸಮಪಾಲು ನೀಡದಿರುವುದು ಮತ್ತು ಮಹಿಳಾ ಶಿಕ್ಷಣದ ಅರಿವು ಇಲ್ಲದಿರುವುದು ಕಾರಣವಾಗಿರಬಹುದಾಗಿದೆ. ಒಟ್ಟು ಪುರುಷ ೨೨,೯೭೬ ರಲ್ಲಿ ೨.೫ ವರ್ಷದ ಒಳಗಿರುವವರು ೧೭೮೬.ಇವರು ಶೈಕ್ಷಣಿಕ ಸ್ಥಿತಿಗತಿಯ ವಿವರವುಳ್ಳ ಪಟ್ಟಿಯಲ್ಲಿ ಸೇರ್ಪಡೆಯಾಗಿರುವುದಿಲ್ಲ. ಅದರಂತೆ ಮಹಿಳೆಯರ ಒಟ್ಟು ೧೮,೮೪೨ ರಲ್ಲಿ ೧೬೯೪, ೨.೫ ವರ್ಷದ ಮಕ್ಕಳು ಈ ಕೋಷ್ಟಕದಲ್ಲಿ ಸೇರ್ಪಡೆಗೊಂಡಿರುವುದಿಲ್ಲ.

**ಕೋಷ್ಟಕ ೫.೯. ಸರ್ಕಾರಿ ಸೌಲಭ್ಯಗಳು**

| | ಪುರುಷರು | | ಮಹಿಳೆಯರು | |
|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ಮತದಾನದ ಚೀಟಿ | ೧೪೬೮೭ | ೩೫.೧೨ | ೧೧,೮೧೨ | ೨೭.೦೪ |
| ಶಿಷ್ಯವೇತನ | ೧೮೬೨ | ೪.೪೫ | ೧೩೫೮ | ೭.೨೦ |
| ಆಧಾರ್ ಕಾರ್ಡ್ | ೧೯೩೦೬ | ೪೬.೧೬ | ೧೬೯೨೪ | ೮೯.೮೨ |
| ಬ್ಯಾಂಕ್ ಖಾತೆ | ೧೦,೪೯೪ | ೨೫.೦೯ | ೮೬೪೮ | ೪೫.೮೬ |
| ಪಡಿತರ ಚೀಟಿ | ೧೩೩೬೨ | ೩೧.೯೫ | ೧೩೩೮೪ | ೭೧.೦೩ |

ಭಾರತವು ಪ್ರಜಾಪ್ರಭುತ್ವ ದೇಶವಾಗಿದ್ದು, ಆಡಳಿತದಲ್ಲಿ ವಿಕೇಂದ್ರಿಕರಣ ಪದ್ಧತಿಯನ್ನು ಕಾಣಬಹುದಾಗಿದೆ. ರಾಜ್ಯಗಳ ಒಕ್ಕೂಟ ವ್ಯವಸ್ಥೆಯಾಗಿರುವ ಭಾರತವು ಲಿಖಿತ ಸಂವಿಧಾನದ ಅನ್ವಯ ಆಡಳಿತ ನಡೆಸುತ್ತಿದೆ. ಕೇಂದ್ರ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳೆಂಬ ವಿಭಾಗೀಕರಣದ ಹಿನ್ನೆಲೆಯಲ್ಲಿ ಪ್ರಜಾಪ್ರತಿನಿಧಿಗಳಿಂದ ಮತ್ತು ಸಲಹಾ ವರ್ಗಗಳಿಂದ ಆಡಳಿತಯಂತ್ರ ನಡೆಯುತ್ತಿದೆ. ಈ ವಿಕೇಂದ್ರಿಕರಣದ ಆಡಳಿತವನ್ನು ನಗರ ಮತ್ತು ಗ್ರಾಮೀಣ ಸ್ಥಳೀಯ ಸರ್ಕಾರಗಳ ಮೂಲಕ ತಿಳಿಯಬಹುದಾಗಿದೆ. ನಗರ ಪ್ರದೇಶದಲ್ಲಿ ಬೃಹತ್ ಮಹಾನಗರಪಾಲಿಕೆ, ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣಪಂಚಾಯ್ತಿ ಎಂತಲೂ, ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯ್ತಿ, ತಾಲೂಕುಪಂಚಾಯ್ತಿ, ಗ್ರಾಮಪಂಚಾಯ್ತಿ ಎಂದು ಅಧಿಕಾರ ವಿಕೇಂದ್ರಿಕರಣಗೊಂಡಿರುವುದನ್ನು ಕಾಣಬಹುದಾಗಿದೆ. ಇದರಂತೆಯೇ ಶಾಸಕರು, ಸಂಸದರು, ಮುಖ್ಯಮಂತ್ರಿ ಮತ್ತು ಪ್ರಧಾನಮಂತ್ರಿಗಳು ಶಾಸಕಾಂಗದ ಭಾಗವಾಗಿ ಆಡಳಿತ ನಡೆಸುವರು ಈ ಎಲ್ಲಾ ಜನಪ್ರತಿನಿಧಿಗಳನ್ನೊಳಗೊಂಡ ಸಂಸತ್ತು ಮತ್ತು ವಿಧಾನಸಭೆಗೂ ವಿಧಾನ ಪರಿಷತ್‌ಗಳು ಜನತೆಯ ಕಲ್ಯಾಣಕ್ಕಾಗಿಯೇ ಕಾರ್ಯ ನಿರ್ವಹಿಸಬೇಕಾಗಿದೆ. ಜನರ ಕಲ್ಯಾಣಕ್ಕಾಗಿ ಹಲವಾರು ಕ್ಷೇತ್ರಗಳಾಗಿ ವಿಂಗಡಿಸಿಕೊಂಡು "ರಾಜ್ಯಪಟ್ಟಿಯಲ್ಲಿ

೬೧ ಕ್ಷೇತ್ರಗಳು, ಕೇಂದ್ರಪಟ್ಟಿಯಲ್ಲಿ ೧೦೦ ವಿಷಯಗಳು, ಸಮವರ್ತಿ ಪಟ್ಟಿಯಲ್ಲಿ ೫೨ ವಿಷಯಗಳನ್ನು" ಗುರುತಿಸಲಾಗಿದೆ. (ಗಂಗಾಧರ ಪಿ.ಎಸ್. ೨೦೧೪, ಬೆಂಗಳೂರು, ಪು.ಸಂ. ೯೨-೯೩) ಈ ಪಟ್ಟಿಯಲ್ಲಿನ ವಿಷಯಗಳ ಅನ್ವಯ ಪ್ರತ್ಯೇಕ ಸಚಿವಾಲಯ ಇಲಾಖೆ ಆಯೋಗಗಳ ಅಭಿವೃದ್ಧಿ ಯೋಜನೆಗಳನ್ನು ಜಾರಿಗೊಳಿಸಲಾಗುತ್ತದೆ. ಅಧಿಕಾರ ವಿಕೇಂದ್ರಿಕರಣದಿಂದಾಗಿ ಕಾರ್ಯವಿಳಂಬತೆ ಮತ್ತು ಭ್ರಷ್ಟಾಚಾರಗಳು ಅಂಚಿನ ಜನರನ್ನು ಸೇರದೆ ಇರುವುದು ಪ್ರಜಾಪ್ರಭುತ್ವದ ಬಹುದೊಡ್ಡ ಮಿತಿಯಾಗಿದೆ. ಕಾರಣ ಪ್ರಬಲವರ್ಗಗಳ ಬಹುಸಂಖ್ಯೆಯ ಮತ ಬ್ಯಾಂಕ್‌ಗಳು ಇದಕ್ಕೆ ತಡೆಯೊಡ್ಡುತ್ತಿವೆ ಮತ್ತು ಕ್ಷೇತ್ರಾಧಾರಿತ ಯೋಜನೆಗಳು ಇಲ್ಲದೇ ಇರುವುದು ಮತ್ತೊಂದು ಅಂಶವಾಗಿದೆ ಎಂದರೂ ತಪ್ಪಿಲ್ಲ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೆಲವೊಂದು ಅರ್ಹತೆಗಳನ್ನು ಆಧರಿಸಿ ವಿವಿಧ ಸೌಲಭ್ಯದ ಕಾರ್ಡುಗಳನ್ನು ನೀಡುತ್ತಿದ್ದು, ಆ ಕಾರ್ಡ್‌ಗಳನ್ನು ಪಡೆದವರು ಮಾತ್ರ ಆ ಯೋಜನೆಗಳ ಸೌಲಭ್ಯ ಪಡೆಯಬಹುದಾಗಿದೆ. ಭಾರತವು ಏಕ ಪೌರತ್ವವನ್ನು ಹೊಂದಿದ್ದು ಆ ಪೌರತ್ವ ಮಂಜೂರಾಗಲು ಮತದಾರ ಚೀಟಿಗಳನ್ನು ನೀಡುತ್ತದೆ. ಅದು ಭಾರತೀಯನಾಗಿರುವ ಎಲ್ಲರಿಗೂ ಇರುವಂತಹದ್ದು ಮತದಾನದ ಜೊತೆಗೆ ಇತರೆ ಆರ್ಥಿಕ, ರಾಜಕೀಯ, ಶೈಕ್ಷಣಿಕ ಸೌಲಭ್ಯ ಪಡೆಯಲು ಅನಿವಾರ್ಯವಾಗಿರುವಂತಹದ್ದು ಇಂತಹ ಮತದಾನದ ಚೀಟಿಯನ್ನು ಶೇಕಡ ೬೦.೩೪ ರಷ್ಟು ಲಾಳಗೊಂಡ ಸಮುದಾಯದ ಜನರು ಪಡೆದರಿವರು. ಇದಕ್ಕೆ ಪೂರಕವಾಗಿ ಆಧಾರ್‌ಕಾರ್ಡ್‌ನ್ನು ಕೇಂದ್ರ ಸರ್ಕಾರ ನೀಡುತ್ತಿದ್ದು ನಕಲಿ ಮತದಾರರ ಚೀಟಿಯ ಹಾವಳಿ ತಡೆಯಲು ವ್ಯಕ್ತಿಯ ಹೆಬ್ಬೆರಳು, ಕಣ್ಣು ಭಾವಚಿತ್ರಗಳನ್ನೊಳಗೊಂಡ ಚೀಟಿಯನ್ನು ಜನತೆಗೆ ನೀಡುತ್ತಿದೆ. ಇಂದಿನ ದಿನಮಾನದಲ್ಲಿ ಇದು ಅನಿವಾರ್ಯ ಗುರುತಿನ ಚೀಟಿಯಾಗಿದೆ. ಶೇಕಡಾ ೭೪.೫೮ ಜನರು ಈ ಕಾರ್ಡನ್ನು ಹೊಂದಿರುವರು. ಕರ್ನಾಟಕ ಸರ್ಕಾರ ನ್ಯಾಯಬೆಲೆ ಅಂಗಡಿಗಳ ಮೂಲಕ ಆಹಾರದ ಕೊರತೆಯನ್ನು ನೀಗಿಸಲು ಬಡವರಿಗೆ ಪಡಿತರ ಚೀಟಿಯನ್ನು ನೀಡಿ ಕಡಿಮೆ ಬೆಲೆಗೆ ಆಹಾರ ಧಾನ್ಯಗಳನ್ನು ಒದಗಿಸುತ್ತಿದೆ. ಜನತೆಯ ಆರ್ಥಿಕತೆಗೆ ಅನುಗುಣವಾಗಿ ಎ.ಪಿ.ಎಲ್., ಬಿ.ಪಿ.ಎಲ್, ಅಂತ್ಯೋದಯ ಕಾರ್ಡುಗಳನ್ನು ನೀಡುತ್ತಿದೆ. ಆ ಮೂಲಕ ಖಾಸಗಿ ವ್ಯಾಪಾರಿಗಳ ಮತ್ತು ದಲ್ಲಾಳಿಗಳ ದುಬಾರಿ ಬೆಲೆಯ ಆಹಾರ ಧಾನ್ಯಗಳ ಸರಬರಾಜನ್ನು ನಿಯಂತ್ರಿಸಿ ಕಡಿಮೆ ದರದಲ್ಲಿ ಬಡವರಿಗೆ ಆಹಾರಧಾನ್ಯ ಒದಗಿಸುವುದು ಈ ಯೋಜನೆಯಡಿಯಲ್ಲಿ ಪಡಿತರ ಚೀಟಿ ಹೊಂದಿರುವವರು ಸಂಖ್ಯೆ ಶೇಕಡ ೫೭.೮೯ ರಷ್ಟು ಜನರು ಈ ಸಮುದಾಯದಲ್ಲಿ ಕಂಡುಬರುತ್ತಾರೆ. ಪ್ರತಿಯೊಂದು ಆರ್ಥಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ ಬ್ಯಾಂಕ್ ಖಾತೆ ಹೊಂದುವುದು ಅನಿವಾರ್ಯವಾಗಿದ್ದು, ಕೃಷಿಸಾಲಕ್ಕೆ, ವ್ಯಾಪಾರ ಸಾಲಕ್ಕಾಗಿ, ಗೃಹಸಾಲಕ್ಕಾಗಿ, ವಿದ್ಯಾರ್ಥಿಗಳ ಶೈಕ್ಷಣಿಕ ಸಾಲಕ್ಕಾಗಿ, ಸರ್ಕಾರದಿಂದ ಶಿಷ್ಯವೇತನ ಪಡೆಯಲು, ಮುಂತಾದ ಉದ್ದೇಶಗಳಿಗಾಗಿ ಲಾಳಗೊಂಡ ಸಮುದಾಯದಲ್ಲಿ ಒಟ್ಟು ೫೫.೭೧ ರಷ್ಟು ಬ್ಯಾಂಕ್ ಖಾತೆಗಳನ್ನು ಹೊಂದಿರುವುದನ್ನು ಕಾಣಬಹುದು.

**ಕೋಷ್ಟಕ ೫.೧೦. ಮನೆಯಲ್ಲಿನ ಮೂಲಭೂತ ಸೌಲಭ್ಯಗಳು**

| ಸೌಲಭ್ಯಗಳು | ಕುಟುಂಬಗಳಸಂಖ್ಯೆ | ಶೇಕಡ |
|---|---|---|
| ವಿದ್ಯುತ್ ಸೌಲಭ್ಯ | ೬೬೯೧ | ೭೬.೫೨ |
| ಭಾಗ್ಯಜ್ಯೋತಿ | ೧೩೧೫ | ೧೫.೦೪ |
| ಗ್ಯಾಸ್ | ೩೪೬೨ | ೩೯.೫೯ |
| ನಲ್ಲಿ | ೩೮೯೬ | ೪೪.೫೬ |
| ಶೌಚಾಲಯ | ೫೮೯೪ | ೬೭.೪೧ |
| ಸ್ನಾನಗೃಹ | ೭೮೯೬ | ೯೦.೩೧ |
| ಸೈಕಲ್/ಮೋಟಾರ್‌ಬೈಕು/ಕಾರು | ೪೨೧೫ | ೪೮.೨೦ |
| ರೇಡಿಯೋ | ೪೬೯ | ೫.೩೬ |
| ಟೇಪ್‌ರೆಕಾರ್ಡ್‌ರ್ | ೧೪೫ | ೧.೬೫ |
| ಟಿ.ವಿ. | ೭೮೯೯ | ೯೦.೩೪ |
| ಮೋಬೈಲ್ | ೬೪೫೯ | ೭೩.೮೭ |

ಆಧುನಿಕ ಮಾನವನ ಬೌದ್ಧಿಕತೆಯ ಯಂತ್ರ ಮತ್ತು ತಂತ್ರ ಶಕ್ತಿಯಿಂದ ಭೋಗಜೀವನ ಮತ್ತು ಯಾಂತ್ರಿಕ ಬದುಕಿಗೆ ಒಳಗಾಗಿರುವ ಸಮುದಾಯಗಳು ಹೇಗೆ ಆಧುನೀಕರಣದ ಕಡೆ ಮುಖಮಾಡಿವೆ ಎಂಬುದನ್ನು ತಿಳಿಯಲು ಮನೆಯಲ್ಲಿ ಹೊಂದಿರುವ ಭೌತಿಕ ಸೌಲಭ್ಯಗಳು ನೆರವಾಗುತ್ತವೆ. ಲಾಳಗೊಂಡರು ಗುಡಿಸಲು, ಆರ್‌ಸಿಸಿ, ಆಶ್ರಯ ಮತ್ತು ಬಾಡಿಗೆ ಮನೆಗಳಲ್ಲಿ ಆಶ್ರಯ ಕಂಡುಕೊಂಡಿರುವುದು ಕಂಡುಬರುತ್ತದೆ. ಈ ರೀತಿಯಾಗಿ ಆಶ್ರಯ ಪಡೆದಿರುವ ವಸತಿಗಳಲ್ಲಿ ಇರಬಹುದಾದ ಮೂಲಭೂತ ಸೌಲಭ್ಯಗಳನ್ನು ತಿಳಿಯುವುದು ಪ್ರಮುಖವಾಗಿದೆ. ಒಟ್ಟು ೮೭೪೩ ಕುಟುಂಬಗಳಲ್ಲಿ ವಿದ್ಯುತ್ ಸೌಲಭ್ಯ ಪಡೆದಿರುವ ಕುಟುಂಬಗಳ ಶೇಕಡ ಪ್ರಮಾಣ ೭೬.೫೨ ಇದೆ. ಇದರಲ್ಲಿ ೧೫.೦೪ ಜನರು ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯ ಪಡೆದವರಾಗಿದ್ದಾರೆ. ಶೇಕಡ ೩೯.೫೯ ಕುಟುಂಬಗಳು ಗ್ಯಾಸ್‌ನ್ನು ಉರುವಲಾಗಿ ಬಳಸಿದರೆ, ಉಳಿದವರು ಕಟ್ಟಿಗೆಯನ್ನು ಉರುವಲಾಗಿ ಬಳಸುವುದು ಕಂಡುಬರುತ್ತದೆ. ಈ ಸಮುದಾಯದ ಶೇಕಡ ೪೪.೫೬ ಜನರು ಖಾಸಗಿ ನಲ್ಲಿಗಳನ್ನು ಹಾಕಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇದರ ಜೊತೆಗೆ ಶೇಕಡ ೬೭.೪೧ ಕುಟುಂಬಗಳು ಶೌಚಾಲಯ ವ್ಯವಸ್ಥೆ ಹೊಂದಿರುವುದನ್ನು ತಿಳಿಯಬಹುದಾಗಿದೆ. ಸಹಜವಾಗಿಯೇ ಸೈಕಲ್/ಸೈಕಲ್ ಮೋಟರ್‌ಗಳನ್ನು ಶೇ. ೪೮.೨೦ ಕುಟುಂಬಗಳ ಜನರು ಈ ಸೌಲಭ್ಯವನ್ನು ಹೊಂದಿರುವರು. ಬಿಡುವಿನ ವೇಳೆಯ ಮನರಂಜನೆಗಾಗಿ ರೇಡಿಯೋ

೫.೩೬, ಟೇಪ್‌ರೇಕಾರ್ಡ್ ೧.೬೫, ಟಿವಿಯನ್ನು ೯೦.೩೪ ಕುಟುಂಬಗಳು ಹೊಂದುವ ಮೂಲಕ ಆಧುನಿಕತೆಯ ಕಡೆಗೆ ಮುಖಮಾಡಿರುವುದು ಕಂಡು ಬರುತ್ತದೆ. ಇಂದಿನ ಆಧುನಿಕ ಯುಗದಲ್ಲಿ ಸಂಪರ್ಕ ಮಾದ್ಯಮವಾಗಿ ಎಲ್ಲಾ ಸಮುದಾಯದಲ್ಲಿ ಮೊಬೈಲ್ ಬಳಕೆಯು ಅನಿವಾರ್ಯವಾಗಿದ್ದು, ಶೇ. ೭೩.೮೭ ರಷ್ಟು ಜನರು ಮೊಬೈಲ್ ಬಳಕೆದಾರರಾಗಿದ್ದಾರೆ. ಒಟ್ಟಾರೆ ಜಾಗತೀಕರಣದ ಪ್ರಭಾವದಿಂದ ಮೇಲ್ಕಂಡ ಎಲ್ಲಾ ವಸ್ತುಗಳು ಅವರವರ ಆರ್ಥಿಕ ಸಧೃಡತೆಯ ಮೇಲೆ ಅಲ್ಲದೆ ಸಾಲಮಾಡಿಯಾದರೂ ಪಡೆಯುವ ಗೀಳಿಗೆ ಬಲಿಯಾಗಿದ್ದಾರೆ.

**ಕೋಷ್ಟಕ ೫.೧೧. ಪೀಠಗಳು, ಅನುಸರಿಸುವ ಕುಟುಂಬವಾರು ವಿವರ**

| ಪೀಠದ ಹೆಸರು | ಕುಟುಂಬಗಳ ಸಂಖ್ಯೆ (೮೭೪೩) | ಶೇಕಡ |
|---|---|---|
| ರಂಭಾಪುರಿಪೀಠ (ಬಾಳೆಹೊನ್ನೂರು) | ೨೧೮೦ | ೨೪.೯೩ |
| ಶ್ರೀಶೈಲ ಪೀಠ (ಆಂಧ್ರಪ್ರದೇಶ) | ೪೮೬೧ | ೫೫.೫೯ |
| ಉಜ್ಜಯನಿಪೀಠ ಮಧ್ಯಪ್ರದೇಶ | ೧೭೦೨ | ೧೯.೪೬ |
| ಕಾಶೀ ಪೀಠ (ವಾರಣಾಸಿ) | ೦೦ | ೦೦.೦೦ |
| ಕೇದಾರಪೀಠ (ಉತ್ತರಾಖಂಡ್) | ೦೦ | ೦೦ |

ಕರ್ನಾಟಕದ ಲಿಂಗಾಯತ ಇತಿಹಾದಲ್ಲಿ ಪಂಚಪೀಠಗಳ ಸೃಷ್ಠಿ, ಪ್ರಕಾರ ೧೬ ನೇಯ ಶತಮಾನದಿಂದೀಚೆಗೆ ಎನ್ನಬಹುದು. ಈ ಪೀಠಗಳ ಇತಿಹಾಸವನ್ನು ಬಸವ ಪೂರ್ವಕ್ಕೆ ತಳ್ಳುತ್ತಿರುವುದು ಇಂದಿಗೂ ಮುಂದುವರೆದಿದೆ. ಕರ್ನಾಟಕದಲ್ಲಿ ವೀರಶೈವ ಮತ ಹುಟ್ಟಿಕೊಳ್ಳುವುದಕ್ಕೆ ಮೊದಲು ಜೈನ, ವೈದಿಕ ಪಂಥಗಳು ಕಾಲಕಾಲಕ್ಕೆ ಪ್ರಾಬಲ್ಯವನ್ನು ಪಡೆದಿದ್ದವು. ಅರಸು ಮನೆತನಗಳು ಅವುಗಳಿಗೆ ಪ್ರೋತ್ಸಾಹವನ್ನು ಕೊಡದಿದ್ದರೆ ಅವುಗಳು ಬೆಳೆಯುತ್ತಿರಲಿಲ್ಲ. ಚಾಲುಕ್ಯರು, ರಾಷ್ಟ್ರಕೂಟರು ವೈಧಿಕ ಮತಾನುಯಾಯಿಗಳಾಗಿದ್ದು ಶೈವ, ವೈಷ್ಣವ ಪಂತಗಳಿಗೆ ಅಪಾರ ಪ್ರೋತ್ಸಾಹ ನೀಡುತ್ತಿದ್ದರು. ಶತಮಾನಗಳ ಕಾಲ ಕರ್ಮ ಪ್ರಧಾನವಾದ ವರ್ಣ ತಾರತಮ್ಯದ ವೈಧಿಕ ಪಂತ ಅಭಾಧಿತವಾಗಿ ಮೆರೆಯಿತು ವರ್ಣ ವ್ಯವಸ್ಥೆಯ ಮೇಲುಸ್ತರದ ವರ್ಗಗಳು ಕೆಳಸ್ಥರದ ಬಹು ಜನರನ್ನು ತಾವು ಹುಟ್ಟುಹಾಕಿದ ಕಂದಾಚಾರ ಮೂಡನಂಭಿಕೆಗಳ ಮೂಲಕ ಆಳುವ ಅರಸರುಗಳ ಬೆಂಬಲದಿಂದ ನಿರಂತರವಾಗಿ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಶೋಷಣೆಗೆ ಈಡು ಮಾಡಿದ್ದವು ೧೨ನೇ ಶತಮಾನದಲ್ಲಿ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಕ್ರಾಂತೀಕಾರಕವಾದ ಬದಲಾವಣೆಗೆ ತಕ್ಕ ವಾತಾವರಣವನ್ನು ನಿರ್ಮಿಸಲು ಬಸವಣ್ಣ, ಅಲ್ಲಮಪ್ರಭು ಮುಂತಾದವರ ನೇತೃತ್ವದಲ್ಲಿ ಕಂದಾಚಾರ, ಮೂಡನಂಬಿಕೆ, ಮೇಲುಕೀಳಿನ ತಾರತಮ್ಯವನ್ನು ತೊಡೆದು ಹಾಕಲು ಶರಣರು ಕಂಕಣ ತೊಟ್ಟಿದ್ದರು. ಬಸವಾದಿ ಪ್ರಮಥರು ಇರುವಷ್ಟುಕಾಲ ಲಿಂಗಾಯತ ಧರ್ಮ ಉತ್ತುಂಗ

ಸ್ಥಿತಿಯಲ್ಲಿದ್ದು, ಭಾರತದ ಅನೇಕ ಕಡೆ ಪ್ರಚಾರದಲ್ಲಿದ್ದಿತು. ತಾತ್ವಿಕವಾಗಿ ಲಿಂಗಾಯತರು ವರ್ಣಧರ್ಮ ವೈಧಿಕ, ಪುರೋಹಿತರು, ವೈಧಿಕರ ಮಟ್ಟದ ಮಡಿಮೈಲಿಗೆ ನಿಯಮ ಇವುಗಳನ್ನು ಒಪ್ಪುವುದಿಲ್ಲ. ಹೀಗಾಗಿ ವಿಷೇಶವಾಗಿ ಸಮಾಜದಲ್ಲಿ ಶೂದ್ರ ವರ್ಣಕ್ಕೆ ಸೇರಿದವರು ಲಿಂಗಾಯತ ಧರ್ಮವನ್ನು ಒಪ್ಪಿಕೊಂಡಿದ್ದರು. ಇವರು ವರ್ಣ ಧರ್ಮವನ್ನು ಒಪ್ಪುವುದಿಲ್ಲವಾದ್ದರಿಂದ ನಾವು ಹಿಂದುಗಳಲ್ಲ, ಶೂದ್ರರಲ್ಲ ಎಂದು ಪ್ರತಿಪಾದಿಸಿದರು. ಮೊದಮೊದಲು ಲಿಂಗಾಯತರು ಧರ್ಮ ಪ್ರಗತಿಪರವಿದ್ದರು ಕಾಲಕ್ರಮೇಣದಲ್ಲಿ ಅದರ ವಿರುದ್ದ ನಡೆದ ರಕ್ತಕ್ರಾಂತಿಯ ನಂತರದ ಸಾಂಸ್ಕೃತೀಕರಣದಿಂದಾಗಿ, ವೈದಿಕ ಧಾರ್ಮಿಕ ಸಂಪ್ರದಾಯಕ್ಕೆ ಶರಣಾಗಿ ಅದನ್ನು ಪೂರ್ಣವಾಗಿ ಅನುಕರಣೆ ಮಾಡಲು ಪ್ರಾರಂಭಿಸಿತು.

ಇದರಿಂದಾಗಿ "೧೫ನೇ ಶತಮಾನದ ವೇಳೆಗೆ ಹಿಂದೂಗಳಂತೆ ಕೆಲವು ಲಿಂಗಾಯತರು ಪುರಾಣ ಪುಣ್ಯಕಥೆ, ಗುಡಿ, ಮಠ, ಪುರೋಹಿತವರ್ಗ, ಆಡಂಭರದ ಧಾರ್ಮಿಕ ವಿಧಿ ಹಾಗೂ ಆಚರಣೆ ಒಪ್ಪಿಕೊಂಡರು. ಜೊತೆಗೆ ವೈಧಿಕರ ಮಠಗಳಂತೆ ಭಾರತದ ಎಲ್ಲಾ ದಿಕ್ಕಿನಲ್ಲಿ ಒಂದೊಂದು ಮಠಗಳನ್ನು (ಪಂಚಪೀಠ) ಸ್ಥಾಪಿಸಿದರು ಹೀಗಾಗಿ ಲಿಂಗಾಯತರು ಇಬ್ಬಾಗವಾಗಿ ಇಷ್ಟಲಿಂಗ ಧರಿಸಿದ ಲಿಂಗಾಯತರು ಮತ್ತು ಸ್ಥಾವರಲಿಂಗದ ಸಂಕೇತದ ಶಿವಲಿಂಗವನ್ನು ಪೂಜಿಸುವ ವೀರಶೈವರು ಎಂದು ಎರಡು ಗುಂಪಾದರು. "ಕಾಯಕವನ್ನು ಆಧ್ಯಾತ್ಮಿಕ ಸಾಧನೆಯ ಮಾರ್ಗವೆಂದು ನೆಲೆಗೊಳಿಸಿದ್ದರಿಂದಾಗಿ ಜನಗಳು ತಮ್ಮತಮ್ಮ ವೃತ್ತಿಗಳಲ್ಲೆ ಮುಂದುವರೆಯುವಂತಾದದ್ದು ವೃತ್ತಿಯ ಅನುವಂಶಿಕತೆಯ ಜಾತಿ ನಿರ್ಮಾಣಕ್ಕೆ ಕಾರಣವಾಯಿತು" (ಹಿರೆಮಲ್ಲೂರ್ ಈಶ್ವರನ್, ೧೯೯೯, ೧೨).

"ಯಾವುದೇ 'ಜಾತಿ ಇರಲಿ, ಧರ್ಮವಿರಲಿ ಅಥವಾ ಭಾಷೆಯೇ ಇರಲಿ, ಸಾಂಸ್ಕೃತಿಕ ವಿನ್ಯಾಸಗಳಿರಲಿ, ಪ್ರತಿಯೊಂದಕ್ಕೂ ನಿರ್ಧಿಷ್ಟ ಬೆಳವಣಿಗೆಯ ಒಂದು ನಿರ್ಧಿಷ್ಟ ಕ್ರಮದ ಅಭಿವ್ಯಕ್ತಿಗಳು ಇರುತ್ತವೆ. ಎಷ್ಟೋ ಪುರಾತನ ಬೇರುಗಳನ್ನು ಹೊಂದಿರುವಂತೆ ಬಾಸವಾಗುವ ಜಾತಿ ಕೂಡ ಜನಾಂಗೀಯತೆ ಮೂಲವಾದುದಲ್ಲ. ಆದರೆ ಒಂದು ಸಮಾಜದ ಉತ್ಪಾದನಾ ವಿನ್ಯಾಸದೊಳಗೆ ಒಂದು ಪಂಗಡವಾಗಿ ಏರ್ಪಟ್ಟು ಕಡೆಗೆ ಒಂದು ಸಾಂಸ್ಕೃತಿಕ ಗುರುತಿಸಿಕೊಳ್ಳುವಿಕೆಯನ್ನು ರೂಢಿಸಿಕೊಂಡ "ಜಾತಿ" ಎಂಬುದು ಹೇಗೆ ಒಂದು ನಿರ್ಧಿಷ್ಟ ಜನಸಮುದಾಯದ ಸಾಮಾಜ ಸಂಘಟಿಸಿಕೊಳ್ಳಲು ಜನಸಮುದಾಯಗಳು ಆರಂಭಿಸುವಂತೆಯೇ ಅದರ ಮೂಲ ಅವರವರ ಗುರುತಿಗೆ ಸಿಗದಷ್ಟು ಪ್ರಾಚೀನ ಕಾಲದಲ್ಲಿ ಮುಳುಗಿ ಹೋಗಿರಬಹುದು ಅಥವಾ ಒಂದು ನಿರ್ಧಿಷ್ಟ ವ್ಯಕ್ತಿ ಅಥವಾ ಘಟನೆಯಿಂದ ಆರಂಭವಾಗಿರಬಹುದು. ಪ್ರಪಂಚದಲ್ಲಿ ಜೀವವಿಕಾಸದ ನಂತರ ಮನುಷ್ಯ ಎಂಬ ಪ್ರಾಣಿ ಇನ್ನಿತರ ಪ್ರಾಣಿಗಳಿಗಿಂತ ಭಿನ್ನವಾಗಿರಲು ಅವನಿಗಿರುವ ಏಕೈಕ ಆಧಾರ ಸಂಸ್ಕೃತಿ. ಮನುಷ್ಯನೇ ಸಂಸ್ಕೃತಿಯ ಮೂಲ ನಿರ್ಮಾಪಕನಾಗಿದ್ದರಿಂದ ಅವನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತಾ ಬಂತೋ ಅಷ್ಟಷ್ಟು ಸಂಸ್ಕೃತಿಯು ವಿಕಾಸವಾಗುತ್ತಾ ಬಂತು ಆಗ ಅಂತಸ್ತು ಮತ್ತು ಜಾತಿ ಇವು ಮುಖ್ಯವಾಗಿರುವುದಿಲ್ಲ" (ಬಂಜಿಗೇರಿ ಜೈ ಪ್ರಕಾಶ್, ೫೬).

ವೀರಶೈವ ಮತವು ಭಾರತದ ಹಲವು ಭಾಗಗಳಲ್ಲಿ ರೂಢಿತದಲ್ಲಿದ್ದರು ಅದು ಹೆಚ್ಚು ಪ್ರಚಾರದಲ್ಲಿರುವುದು ದಕ್ಷಿಣಕರ್ನಾಟಕದಲ್ಲಿ. ಈ ಮತವನ್ನು ಎಲ್ಲಿ?, ಯಾರು?, ಯಾವಾಗ ಪ್ರಾರಂಭಿಸಿದರು? ಎಂಬುವುದರ ಬಗ್ಗೆ ಇತಿಹಾಸ ಹಾಗೂ ಪರಂಪರಾಗತ ನಂಬಿಕೆಗಳು ಬೇರೆಬೇರೆ ಸಂಗತಿಗಳನ್ನು ತಿಳಿಸುತ್ತವೆ. ಪರಂಪರಾಗತವಾಗಿ ವೀರಶೈವ ಮತದ ಉಗಮವು ಐದುಜನ ಆಚಾರ್ಯರುಗಳಿಂದ ಏಕೋರಾಮ, ಪಂಡಿತಾರಾಧ್ಯ, ರೇವಣ, ಮರುಳ ಮತ್ತು ವಿಶ್ವಾರಾಧ್ಯರಿಂದ ಆಯಿತೆಂದು ನಂಬಲಾಗಿದೆ. ಇವರು ಆಚಾರ್ಯರ ಶಿವನ ೫ ತಲೆಗಳಿಂದ ಹೊರಹೊಮ್ಮಿದವರೆಂದು ನಂಬಲಾಗಿದ್ದು ಅವರು ಬಸವೇಶ್ವರರಿಗಿಂತಲೂ ಸ್ವಲ್ಪ ಹಿರಿಯ ಹಾಗೂ ಕಿರಿಯ ಸಮಕಾಲೀನರಾಗಿ ಕಾಣಬರುತ್ತಾರೆ. ಆದರೆ ಐತಿಹಾಸಿಕವಾಗಿ ಮಾತ್ರ ಕ್ರಾಂತಿಕಾರಿ ಧಾರ್ಮಿಕ, ಸಾಮಾಜಿಕ ಸುಧಾರಕರಾಗಿದ್ದ ಬಸವೇಶ್ವರರು ಕ್ರಿ ಶ ೧೨ನೇ ಶತಮಾನದಲ್ಲಿ ಇದನ್ನು ಆರಂಭಿಸಿದರು ಎಂದು ನಿಸ್ಸಂದಿಗ್ಧವಾಗಿ ಭಾವಿಸಲಾಗಿದೆ. ಇತಿಹಾಸಕಾರ ಫ್ಲೀಟ್ ಎಂಬಾತನ ಅಭಿಪ್ರಾಯದಂತೆ ಲಿಂಗಾಯತ ಆಂದೋಲನ ಅಥವಾ ವೀರಶೈವ ಮತವು ಬಸವೇಶ್ವರರು ಮತ್ತು ಅವರ ಸಹವರ್ತಿಗಳಾದ ಹಲವು 'ಪ್ರಮಥ'ರುಗಳ ಮೂಲಕವೇ ಪ್ರಸಿದ್ಧಿಗೆ ಬಂದಿತು ಎಂಬುದು ಐತಿಹಾಸಿಕವಾಗಿ ಸಂದೇಹಾತೀತವಾದುದು.

ಲಾಳಗೊಂಡ ಸಮುದಾಯದಲ್ಲಿನ ೮೭೪೩ ಕುಟುಂಬಗಳನ್ನು ಸಮೀಕ್ಷಿಸಿದಾಗ, ರಂಬಾಪುರಿಪೀಠ ಬಾಳೆಹೊನ್ನೂರು ಮಠಕ್ಕೆ ೨೪.೦೦ ರಷ್ಟು ಜನರು ನಡೆದುಕೊಳ್ಳತ್ತಿದ್ದು ಇವರ ಸಂಖ್ಯೆ ಹೆಚ್ಚಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲೂಕಿನಲ್ಲಿ ಕಂಡುಬರುತ್ತದೆ. ಲಾಳಗೊಂಡ ಸಮುದಾಯದವರು ಶ್ರೀಶೈಲ ಪೀಠ(ಆಂಧ್ರಪ್ರದೇಶ)ಕ್ಕೆ ೫೫.೫೯ ರಷ್ಟು ಇದ್ದು ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡು ಬರುವವರು  ಉಜ್ಜಯನಿಪೀಠ ಮಧ್ಯಪ್ರದೇಶದ ಮಠಕ್ಕೆ ೧೯.೪೬ ರಷ್ಟು ಜನರು ನಡೆದು ಕೊಳ್ಳುವರು. ಇವರು ವಿವಿದೆಡೆಗಳಲ್ಲಿ ಇದ್ದು ಉಜ್ಜಯನಿಯು ದೂರವಾದ್ದರಿಂದ ಕೆಲವರು ಶ್ರೀಶೈಲ ಮಠಕ್ಕೆ ಹೋಗಿ ಬರುವರು. ಕಾಶೀಪೀಠಕ್ಕೆ ಮತ್ತು ಕೇದಾರ ಪೀಠಕ್ಕೆ ನಡೆದು ಕೊಳ್ಳುವವರ ಸಂಖ್ಯೆ ಇಲ್ಲದಿರುವುದು ಕಂಡು ಬರುತ್ತದೆ. ಆದರೆ ಕೇದಾರಲಿಂಗೇಶ್ವರನನ್ನು ಆರಾಧಿಸುವರು, ಈ ಮೊದಲು ಇಲ್ಲಿಯ ಪೀಠವನ್ನು ಆರಾಧಿಸುತ್ತಿದ್ದರು ಬಹುದೂರದ ಕಾರಣ ಇಲ್ಲಿಗೆ ಹೋಗುವುದು ನಿಂತುಹೋಗಿದೆ.

ಲಾಳಗೊಂಡ ಸಮುದಾಯದ ಪ್ರಸ್ತುತ ಸ್ಥಿತಿಗತಿಗಳು ಎಂಬ ಅಧ್ಯಾಯವು ಲಾಳಗೊಂಡ ಸಮುದಾಯದ ಪ್ರದೇಶವಾರು ಜನಸಂಖ್ಯೆ, ಲಿಂಗಾನುಪಾತದ ವಿವರ, ಜಿಲ್ಲಾವಾರು ನೆಲೆ ಮತ್ತು ಹಂಚಿಕೆ, ಜನಸಂಖ್ಯೆಯ ಪ್ರಮಾಣ, ವಯೋಮಾನದ ವಿವರ, ವಾಸಿಸುವ ನೆಲೆಯ ಸ್ವರೂಪ ಮತ್ತು ಒಡೆತನದ ವಿವರ, ಪಶುಸಂಪತ್ತಿನ ವಿವರಣೆ, ಆರ್ಥಿಕ ಉಪಜೀವನಕ್ಕಾಗಿ ಅನುಸರಿಸುತ್ತಿರುವ ವೃತ್ತಿಗಳು, ಭೂ ಒಡೆತನದ ವಿವರ, ವೈವಾಹಿಕ ಸ್ಥಾನಮಾನ, ಶೈಕ್ಷಣಿಕ ಸ್ಥಿತಿಗತಿ ಮತ್ತು ಸಂವಿಧಾನಬದ್ಧ ಸೌಲಭ್ಯಗಳನ್ನು ಪಡೆಯುತ್ತಿರುವ ಅಂಕಿ–ಅಂಶಗಳು, ಪೀಠಗಳು ಮತ್ತು ಜಿಲ್ಲಾವಾರು ಜನಸಂಖ್ಯೆಯನ್ನು

ಕೋಷ್ಟಕಗಳ ಮೂಲಕ ಅಂಕಿ-ಅಂಶಗಳ ಮೂಲಕ ವಿವರಣೆ ನೀಡುವುದರ ಜೊತೆಗೆ ಸಮುದಾಯದ ಹಿಂದಿಳಿದಿರುವಿಕೆ ಮತ್ತು ಗುರುತನ್ನು ತಿಳಿಯಲು ನೆರವಾಗುವುದು. ಆರ್ಥಿಕತೆಗಾಗಿ ಪರ್ಯಾಯ ವೃತ್ತಿಗಳನ್ನು ಅವಲಂಬಿಸಿದ್ದು, ಅದು ಸಾಕಾಗದೆ ವಸತಿ, ಉದ್ಯೋಗ, ಶೈಕ್ಷಣಿಕ ಸ್ಥಿತಿಗತಿಗಳಲ್ಲಿ ಹಿಂದುಳಿದಿರುವುದು ಕಂಡುಬರುತ್ತದೆ. ಪಾರಂಪರಿಕ ವೃತ್ತಿ ಕೃಷಿಯಲ್ಲಿನ ಸ್ಥಾನಮಾನ ಕುಂದಿರುವ ಕಾರಣ ಅದನ್ನು ಅವಲಂಬಿಸಿ ಬದುಕುವವರ ಪ್ರಮಾಣ ಕಡಿಮೆಯಾಗುತ್ತಿದೆ. ಸರ್ಕಾರಿ ಸೌಲಭ್ಯಗಳು ಪ್ರಬಲ ವರ್ಗಗಳ ಪಾಲಾಗಿದ್ದು ಇದಕ್ಕೆ ಕಾರಣ ಸಮುದಾಯದ ಛಿದ್ರೀಕರಣದಿಂದ ಸಂಘಟನೆ ಇಲ್ಲದಿರುವುದಾಗಿದೆ ಜೊತೆಗೆ ಹೋರಾಟದ ಮನೋಭಾವ ತೋರಿಸದಿರುವುದು, ಸಮುದಾಯದಲ್ಲಿ ನಾಯಕತ್ವಗುಣಗಳಿಲ್ಲದಿರುವುದು ಹಾಗೂ ಲಾಳಗೊಂಡರು ಎಂದು ಹೇಳಿಕೊಳ್ಳಲು ಹಿಂಜರಿಯುವ ಪ್ರವೃತ್ತಿ ಕಂಡುಬರುತ್ತದೆ. ಈ ಎಲ್ಲಾ ಕಾರಣಗಳಿಂದ ಸಮುದಾಯವು ಪೂರ್ಣಮೇಲ್‌ಸ್ತರದ ಸ್ಥಿತಿಗೆ ತಲುಪದೇ, ಕೆಳಮಟ್ಟಕ್ಕೂ ತಳ್ಳದೆ ಅತಂತ್ರ ಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆ. ಶೈಕ್ಷಣಿಕವಾಗಿ ಹಿಂದುಳಿದದ್ದು ರಾಜಕಾರಣದಲ್ಲಿ ಪಾಲ್ಗೊಳ್ಳುವಿಕೆ ಇಲ್ಲವಾಗಿದೆ. ಇಂತಹ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಸಮಸ್ಯೆಗಳನ್ನು ಎದುರುಸುತ್ತಿರುವ ಈ ಸಮುದಾಯದ ಸಮಸ್ಯೆಗಳ ಪರಿಹಾರಕ್ಕೆ ಸಮುದಾಯದಲ್ಲಿ ಸಂಘಟನೆಯ ಅಗತ್ಯತೆ ಇದೆ. ಚದುರಿಸುವ ಜನರು ಒಂದಾಗಿ ಹಕ್ಕು ಮತ್ತು ಸೌಲಭ್ಯಗಳನ್ನು ಪಡೆಯಲು ಶೈಕ್ಷಣಿಕ ಮಹತ್ವ ತಿಳಿಯಬೇಕಾಗಿದೆ. ಇತರ ಸಮುದಾಯದಂತೆ ಈ ಸಮುದಾಯದ ಕುರಿತಾಗಿ ಅಧ್ಯಯನ, ಸಮೀಕ್ಷೆಗಳು, ಸಂಘಟನೆಗಳು ಈ ಆಗದಿರುವುದರಿಂದ ಅತಂತ್ರ ಬದುಕಿಗೆ ಒಳಗಾಗಿ ಕ್ಷೀಣಿಸುತ್ತಿರುವುದು ಕಂಡುಬಂದಿದ್ದು, ಈ ಸಮುದಾಯದ ಅಭಿವೃದ್ಧಿಗೆ ಪ್ರಸ್ತುತ ಅಧ್ಯಯನವು ಪೂರಕವಾಗಬಹುದು ಎಂಬ ಆಶಯ ಈ ಅಧ್ಯಯನದ ಮುಖ್ಯ ಭಾಗವಾಗಿದೆ.

# ಅಧ್ಯಾಯ: ಆರು

## ಸಮಾರೋಪ

೬.೧. ಅಧ್ಯಯನದ ಫಲಿತತೆಗಳು

೬.೨. ಸಲಹೆ, ಸೂಚನೆಗಳು

೬.೩. ಉಪಸಂಹಾರ

**ಅನುಬಂಧಗಳು**

೧. ಸ್ಥಳ ನಾಮಸೂಚಿ

೨. ಶಬ್ದಾರ್ಥ ಸೂಚಿ

೩. ಮಾಹಿತಿದಾರರ ಪಟ್ಟಿ

೪. ಲಾಳಗೊಂಡರ ವಂಶವೃಕ್ಷ

೫. ಪ್ರಶ್ನಾವಳಿಗಳು

೬. ಪರಾಮರ್ಶನ ಗ್ರಂಥಗಳು

೭. ಛಾಯಾ ಚಿತ್ರಗಳು

೮. ನಕ್ಷೆಗಳು (ನಕಾಶೆಗಳು)

೯. ಅಂತರ್ಜಾಲದ ಮಾಹಿತಿಗಳು

೧೦. ಪತ್ರಿಕಾ ವರದಿಗಳು

# ಅಧ್ಯಾಯ: ಆರು

# ಸಮಾರೋಪ

## ೬.೧ ಅಧ್ಯಯನದ ಫಲಿತಗಳು

ಒಟ್ಟಾರೆಯಾಗಿ ಕ್ಷೇತ್ರಕಾರ್ಯ, ಪಠ್ಯ ಮತ್ತು ಪಠ್ಯೇತರ ಮಾಹಿತಿಯಿಂದ, ಸಮುದಾಯದ ತಿಳುವಳಿಕೆದಾರರ ಮಾಹಿತಿಯಿಂದ, ನಿಯತಕಾಲಿಕೆಗಳಿಂದ ಹಾಗೂ ಸಮುದಾಯದ ಮಾಹಿತಿ ಮತ್ತು ಇನ್ನಿತರೆ ಮೂಲಗಳಿಂದ ಆಯ್ದುಕೊಂಡು ಮಾಡಿದ ಅಧ್ಯಯನದಿಂದ ಉಂಟಾದ ಸಂಶೋಧನಾತ್ಮಕ ಅಂಶಗಳಲ್ಲಿ ಈ ಕೆಳಗಿನ ಫಲಿತತೆಗಳನ್ನು ಕಂಡುಕೊಂಡಿದ್ದೇನೆ.

೧. ಲಾಳಗೊಂಡರು ಮೂಲತಃವಾಗಿ ಶೈವಪಾರಂಪರಿಕವಾಗಿ ಬಂದವರಾಗಿದ್ದಾರೆ. ಇವರು ಶೈವಾರಾಧಕರಾಗಿದ್ದಾರೆ.

೨. ಮೂಲತಃ ಪಶುಪಾಲನೆ ಮತ್ತು ಕೃಷಿ ಚಟುವಟಿಕೆಗಳಗೆ ಇವರು ಹೆಚ್ಚು ಹೊತ್ತು ನೀಡುತ್ತಿದ್ದಾರೆ.

೩. ಹೆಚ್ಚಾಗಿ ಇವರು ಗ್ರಾಮೀಣ ಪ್ರದೇಶಗಳಲ್ಲಿ ವಾಸವಾಗಿದ್ದು ಯಾವುದೇ ರಾಜಕೀಯ ಅಥವಾ ಬೇರೆ ಯಾವುದೇ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದಿಲ್ಲ. ಪ್ರಸ್ತುತ ದಿನಮಾನಗಳಲ್ಲಿ ಕೆಲವರು ಮಾತ್ರ ಮುಂದೆ ಬಂದು ರಾಜಕೀಯದಲ್ಲಿ ಭಾಗವಹಿಸಿದ್ದಾರೆ.

೪. ಲಾಳಗೊಂಡರು ಮಧ್ಯಪ್ರದೇಶದ ಲಾಂಜೀಘಡದ ಮೂಲದವರಾಗಿದ್ದು, ದಕ್ಷಿಣಭಾರತದತ್ತ ವಲಸೆಬಂದು ಆಂಧ್ರದಲ್ಲಿ ನೆಲೆಯೂರಿ ತದನಂತರ ಅನೇಕ ಆಧ್ಯಾತ್ಮಿಕ ಚಟುವಟಿಕೆಗಳಿಂದ ಪ್ರಭಾವಿತರಾಗಿ ಇತರೆಡೆಗೆ ಚದುರಿ ನೆಲೆನಿಂತ ಒಂದು ಪ್ರಭಾವಿ ಸಮುದಾಯವಾಗಿದೆ.

೫. ಶೈವ, ವೀರಶೈವ ಪರಂಪರೆ ಅತೀ ಪ್ರಾಚೀನವಾಗಿದ್ದು ಅದು ಯಾರೊಬ್ಬರು ಹುಟ್ಟು ಹಾಕದಿರುವ ಒಂದು ಪರಂಪರೆಯಾಗಿ ಬೆಳೆದುಬಂದಿದೆ. ಶೈವಾರಾಧಕರಾದ ಇವರು ಈಶ್ವರ, ಮೈಲಾರಲಿಂಗೇಶ್ವರ, ಬಸವೇಶ್ವರ ಇತ್ಯಾದಿ ದೇವರುಗಳನ್ನು ಆರಾಧಿಸುವರು.

೬. ಸಾಮಾಜಿಕ ಸ್ಥಾನಮಾನದ ಕೊರತೆಯಿಂದಾಗಿ ಬಸವಣ್ಣನ ಕಾಲದಲ್ಲಿ ಅವನ ಅನುಯಾಯಿಗಳಾಗಿ ಮತಾಂತರ ಹೊಂದಿರುವರು.

೭. ಲಾಳಗೊಂಡರು ರಾಜರ ಆಳ್ವಿಕೆಯಲ್ಲಿ ಗೌಡ, ನಾಡಗೌಡ, ಸರನಾಡಗೌಡರಾಗಿರುವರು.

೮. ಟಿಪ್ಪುವಿನ ಆಳ್ವಿಕೆಯಲ್ಲಿ ಈ ಹುದ್ದೆಗಳು ನಶಿಸಿ ಹೋಗಿವೆ.ಆದರೂ ಈ ಮನೆತನದ ಹೆಸರುಗಳು ಮಾತ್ರ ಇಂದಿಗೂ ಕಂಡುಬರುತ್ತವೆ.

೯. ಲಾಳಗೊಂಡರಲ್ಲಿ ಗೋತ್ರಗಳು ಮತ್ತು ಬೆಡಗುಗಳು ಕಂಡು ಬರುವುದಿಲ್ಲ. ಆದರೆ ಇವರಲ್ಲಿ ಸ

೧೦. ಲಾಳಗೊಂಡ ಸಮುದಾಯದವರು ಹೆಚ್ಚು ಕೃಷಿಯನ್ನು ಅವಲಂಬಿಸಿದ್ದು, ನಂದಿಯನ್ನು ಹೆಚ್ಚಾಗಿ ಆರಾಧಿಸುತ್ತಾರೆ.

೧೧. ಲಾಳಗೊಂಡ ಸಮುದಾಯದವರು ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ.

೧೨. ಲಾಳಗೊಂಡ ಸಮುದಾಯವು ಜಾತಿವಾರು ಪಟ್ಟಿಯಲ್ಲಿ ಲಾಳಗೊಂಡ ಎಂಬ ಹೆಸರು ಇರದೆ, ಅದು ಸೇರ್ಪಡೆಗೊಂಡಿದೆ.

**೬.೨ ಸಲಹೆ, ಸೂಚನೆಗಳು**

೧. ಲಾಳಗೊಂಡ ಸಮುದಾಯವನ್ನು ಸಂಘಟನೆಗೊಳಿಸುವ ಮತ್ತು ಸಮಾಜದ ಮುಖ್ಯವಾಹಿನಿಗೆ ತರುವ ಅವಶ್ಯಕತೆ ಇದೆ.

೨. ಈ ಸಮುದಾಯದವರಿಗೆ ತಮ್ಮ ಮೂಲ ಜೀವನ ಶೈಲಿ ಹಾಗೂ ಸಂಸ್ಕೃತಿಯ ಬಗ್ಗೆ ಅರಿವು ಮೂಡಿಸುವ ಬಗ್ಗೆ ಕೆಲಸ ಕಾರ್ಯಗಳು ನಡೆಯಬೇಕಿದೆ.

೩. ಈ ಸಮುದಾಯವು ಸಮಾಜದಲ್ಲಿ ಪ್ರತ್ಯೇಕವಾಗಿ ಗುರುತಿಸುವ ಅವಶ್ಯಕತೆ ಇದೆ.

೪. ಲಾಳಗೊಂಡ ಸಮುದಾಯವು ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹಿಂದುಳಿದಿದ್ದು ಅವರಿಗೆ ಈ ಎಲ್ಲಾ ಸೌಲಭ್ಯಗಳ ಅವಶ್ಯಕತೆ ಇದೆ.

೫. ಹೆಚ್ಚಾಗಿ ಗ್ರಾಮೀಣವಾಸಿಗಳಾದ ಇವರು ಲಿಂಗಾಯತ ಎನ್ನುವುದಕ್ಕಾಗಿ ಹಚ್ಚಿನ ಸರಕಾರಿ ಸೌಲಭ್ಯಗಳ ಫಲಾನುಭವಿಗಳಾಗಿರುವುದಿಲ್ಲ. ವಿವಿಧ ಸರಕಾರಿ ಸೌಲಭ್ಯಗಳ ಅವಶ್ಯಕತೆ ಇದೆ.

೬. ಈ ಸಮುದಾಯವು ಹೆಚ್ಚಾಗಿ ಗ್ರಾಮೀಣ ವಾಸಿಗಳಾಗಿರುವುದರಿಂದ ಆಧುನಿಕತೆ, ತಾಂತ್ರಿಕತೆ ಮತ್ತು ಉನ್ನತ ಶಿಕ್ಷಣಾಭಿವೃದ್ಧಿಗಳ ಮಾಹಿತಿ ಅರಿವಿನ ಅವಶ್ಯಕತೆ ಇದೆ.

೭. ಲಾಳಗೊಂಡ ಸಮುದಾಯ ಎನ್ನುವುದು ಪ್ರತ್ಯೇಕವಾಗಿ ಜಾತಿವಾರು ಸಂವಿಧಾನ ಪಟ್ಟಿಯಲ್ಲಿ ಪ್ರತ್ಯೇಕವಾಗಿ ಲಾಳಗೊಂಡ ಎಂದು ಅನುಮೋದನೆಗೊಂಡು ಜಾತಿವಾರು ಪಟ್ಟಿಯಲ್ಲಿ ಸೇರ್ಪಡೆಯಾಗುವ ಅವಶ್ಯಕತೆ ಇದೆ.

೮. ಸಾಮಾಜಿಕ ತಾರತಮ್ಯಕ್ಕೆ ಹೆದರದೆ ತಮ್ಮ ಪರಿಸ್ಥಿತಿ ಅರಿತು ಲಾಳಗೊಂಡ ಎಂಬ ಪದಬಳಕೆ ಮಾಡಿ, ಅವರ ಅಭಿವೃದ್ಧಿಗಾಗಿ ಸರಕಾರದ ಮಟ್ಟದಲ್ಲಿ ಸೌಲಭ್ಯಗಳಿಗಾಗಿ ಕೋರಿಕೆ ಸಲ್ಲಿಸಬೇಕು.

೯. ಕ್ಷೇತ್ರಕಾರ್ಯ ಆಧಾರಿತವಾದ ಮತ್ತು ಸಮಾಜ ಮುಖಿಯಾದ ಯೋಜನೆಗಳು ಜಾರಿಯಾಗಿ ಸಮುದಾಯವನ್ನು ಕೇಂದ್ರೀಕರಿಸಬೇಕಾಗಿದೆ.

ಕರ್ನಾಟಕದಲ್ಲಿ ಲಾಳಗೊಂಡ ಸಮುದಾಯದ ಕುರಿತಾದ ಈ ಅಧ್ಯಯನವು ಗುರುತಿಸಿರುವ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ ಸಮಸ್ಯೆಗಳನ್ನು ಈ ಮೇಲ್ಕಂಡ ಸಲಹೆಗಳನ್ನು ಆಧರಿಸಿ

ಪರಿಹಾರ ಕಲ್ಪಿಸಲು, ಸಮುದಾಯಗಳು, ಸರ್ಕಾರ, ಸಂಘ–ಸಂಸ್ಥೆಗಳು ಮಾನವೀಯ ನೆಲೆಯಲ್ಲಿ ಚಿಂತಿಸಿ ಅಭಿವೃದ್ಧಿಗೆ ಶ್ರಮಿಸುವ ಅಗತ್ಯತೆ ಅನಿವಾರ್ಯವಾಗಿದೆ.

**೬.೩ ಉಪಸಂಹಾರ**

ಪ್ರಪಂಚದ ಉಗಮದಿಂದ ಇಂದಿನವರೆಗೂ ಮತ್ತು ನಂತರವು ಜೀವಿಗಳ ವಿಕಾಸ ಮುಂದುವರೆಯುತ್ತಲೇ ನಡೆದಿದೆ. ಮಾನವ ತನ್ನ ಬುದ್ಧಿಶಕ್ತಿ ಮತ್ತು ತಂತ್ರಜ್ಞಾನದ ಅವಿಷ್ಕಾರದಿಂದ ಸಾಮಾಜಿಕ ಸ್ಥಿತಿ ಬದಲಾಗುತ್ತಾ ಬಂದಿದೆ. ಆದಿವಾಸಿ ಜೀವನದಿಂದ ನಾಗರಿಕ ಜೀವನಕ್ಕೆ ಮಾನವ ಜೀವನವಿಕಾಸ ಒಂದು ದೊಡ್ಡ ಬದಲಾವಣೆ ಕಂಡಿದೆ. ಇದರಿಂದ ಸಮುದಾಯಗಳು, ಸಂಸ್ಕೃತಿಗಳು, ಭಾಷೆಗಳು, ಆಚರಣೆಗಳು ಬೆಳಕಿಗೆ ಬಂದು ಒಂದು ಇನ್ನೊಂದರ ನಡುವಿನ ವ್ಯತ್ಯಾಸ ಅನುಕರಣೆ ಆಗುತ್ತಲೇ ನಡೆದಿದೆ. ಈಗಾಗಿ ಭಾರತದಲ್ಲಿ ಹೆಚ್ಚುಹೆಚ್ಚು ಸಮುದಾಯಗಳು, ಬುಡಕಟ್ಟುಗಳನ್ನು ಕಾಣಬಹುದು.

ಮಾನವನ ವಿಕಾಸದ ಈ ಎಲ್ಲಾ ಬದಲಾವಣೆಗಳು ಬಹುಬೇಗ ನಡೆಯದೇ ನಿಧಾನಗತಿಯಲ್ಲಿ ನಿಸರ್ಗದ ಅಡಿಯಲ್ಲಿ ನಡೆದುಬರುತ್ತಿದೆ. ಮಂಗನಿಂದ ಮಾನವ ಎನ್ನುವ ಅಂಶದಂತೆ ಮೂಲದಲ್ಲಿ ತನ್ನ ಬದುಕಿಗೆ ಅವಶ್ಯಕವಾದ ಆಹಾರವನ್ನು ಬೇಟೆಯಿಂದ ಕಂಡುಕೊಂಡನು. ನಂತರ ಬೆಂಕಿ ಅವಿಷ್ಕಾರ ಕಂಡುಕೊಂಡನು, ತನಗೆ ಅವಶ್ಯಕವೆನಿಸಿದ ಅಂಶಗಳನ್ನು ಅವನು ಅರಿತು ಕೃಷಿ ಸಾಗುವಳಿ, ಪಶುಪಾಲನೆ (ಪಶುಸಂಗೋಪನೆ) ಮಾಡಲು ಆರಂಭಿಸಿದನು. ಸುತ್ತಮುತ್ತಲಿನ ಹಣ್ಣುಹಂಪಲು, ಗಡ್ಡೆಗೆಣಸು ಇವುಗಳನ್ನು ಬೇಯಿಸಿ ಆಹಾರ ಉತ್ಪಾದನೆ ಕಂಡುಕೊಂಡು ತನಗೆ ಬೇಕಾದ ಆಹಾರವನ್ನು ಬೆಳೆಯಲು ಆರಂಭಿಸಿದನು. ಹೀಗೆ ಮಾನವ ನಿಧಾನಗತಿಯಲ್ಲಿ ಬದಲಾವಣೆ ಕಂಡುಕೊಳ್ಳುತ್ತಾ ನಡೆದನು.

ಮಾನವ ವಿಕಾಸವಾಗುತ್ತಾ ತನಗೆ ಇತರರನ್ನು ಸಂಪರ್ಕಿಸಲು ತನಗೆ ತಿಳಿದಂತೆ ತನ್ನದೇ ಭಾಷೆಯಲ್ಲಿ ಮಾತನಾಡಲು ಆರಂಭಿಸಿದನು. ಪ್ರಕೃತಿಯ ವಿಕೋಪವನ್ನು ಕಂಡು ಪ್ರಕೃತಿಯ ಆರಾಧನೆ ಮಾಡಲು ತೊಡಗಿದನು ಹೀಗೆ ಸಂಸ್ಕೃತಿ, ಧಾರ್ಮಿಕತೆ, ಹಲವಾರು ಉಪಾಯಗಳನ್ನು ಕಂಡುಕೊಂಡನು. ಅವನಿಗೆ ಸರಿಯೆನಿಸಿದಂತೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪಶುಪಾಲನೆ, ವ್ಯವಸಾಯದ ಸಲುವಾಗಿ ಅನಿವಾರ್ಯವಾಗಿ ಅಲೆಯುತ್ತಾ ನಡೆದನು. ಹೀಗೆ ಭಾರತದಲ್ಲಿ ಅನೇಕ ಸಮುದಾಯಗಳು, ಆದಿವಾಸಿಗಳು, ಬುಡಕಟ್ಟುಗಳು ತಮ್ಮ ಬದುಕನ್ನು ಮೈಗೂಡಿಸಿಕೊಂಡವು. ಈ ಎಲ್ಲಾ ಆದಿವಾಸಿಗಳು ಒಂದೇ ರೀತಿ ಇರದೆ ತಮ್ಮದೇ ಆದ ಸಂಸ್ಕೃತಿ, ಆಚಾರ–ವಿಚಾರ, ಧಾರ್ಮಿಕತೆ, ಭಾಷೆಗಳನ್ನು ಹೊಂದಿದ್ದಾರೆ.

ಭಾರತದಲ್ಲಿ ಆದಿವಾಸಿಗಳು ತಮ್ಮದೇ ಆದ ವಿಶಿಷ್ಟ ಲಕ್ಷಣಗಳನ್ನು ಹೊಂದಿರುವರು. ವಿಭಿನ್ನ ಭಾಷೆ, ಕಲೆ ಹೊಂದಿರುವುದರಿಂದ ಇವರಿಗೆ ಬೇರೆಬೇರೆ ರೀತಿಯಲ್ಲಿ ಗುರುತಿಸಲಾಗುತ್ತದೆ. ಇನ್ನು

ಎಷ್ಟೋ ಬುಡಕಟ್ಟುಗಳು ಅರಣ್ಯದಿಂದ ಹೊರಬಂದಿಲ್ಲ. ಇಂತಹ ಒಂದು ವಿಶಿಷ್ಟ ಪರಿಕಲ್ಪನೆ ಹೊಂದಿದ ಸಮುದಾಯಗಳಲ್ಲಿ ಹಲವು ಸಮುದಾಯಗಳು ನಾಗರಿಕತೆಯ ಬೆಳಕನ್ನು ಕಂಡು ತಮ್ಮ ಮೂಲವನ್ನು ಮರೆತು ಮುಂದೆಬಂದ ಸಮುದಾಯಗಳನ್ನು ನಾವು ಕಾಣಬಹುದು. ಅಂತಹ ಸಮುದಾಯಗಳಲ್ಲಿ ಲಾಳಗೊಂಡ ಸಮುದಾಯವು ಒಂದು.

ಲಾಳಗೊಂಡ ಸಮುದಾಯದವರು ದ್ರಾವಿಡ ಮೂಲದವರು. ಇವರು ಮಧ್ಯಭಾರತದ ಲಾಂಜಿಗಢದ ಭಾಗದಿಂದ ಆರ್ಯರ ಆಕ್ರಮಣದಿಂದಾಗಿ ದಕ್ಷಿಣಭಾರತಕ್ಕೆ ಬಂದು ನೆಲೆಯೂರಿರುವರು. ಅಲ್ಲಿಂದ ಬಂದ ಅವರು ಕೃಷಿ ಹಾಗೂ ಪಶುಪಾಲನೆಗಾಗಿ ತುಂಗಭದ್ರಾ, ಕೃಷ್ಣ, ಗೋದಾವರಿ ಜಲಾನಯನದ ನದಿದಂಡೆಗಳಲ್ಲಿ ಸಾವಿರಾರು ವರ್ಷಗಳ ಹಿಂದೆ ವಲಸೆ ಬಂದು ನೆಲೆಸಿರುವರು. ಸಿಂಧೂನದಿ ತೀರದಲ್ಲಿ ಆರ್ಯರ ಆಕ್ರಮಣದಿಂದ ನೊಂದ ದ್ರಾವಿಡ ಸಮುದಾಯದ ಕೆಲವರು ಅಲ್ಲಿಯೇ ಹೋರಾಡಿ ಮೃತಪಟ್ಟರು ಇನ್ನೂ ಕೆಲವರು ದಕ್ಷಿಣಕ್ಕೆ ವಲಸೆ ಬಂದರು. ಅದರಲ್ಲಿ ಲಾಳಗೊಂಡರೂ ಸೇರಿರುವರು. ಲಾಳಗೊಂಡ ಗುಂಪಿಗೆ ಸೇರಿದ ಕುಡುಒಕ್ಕಲಿಗರು, ನೊಣಬರು, ಬಣಜಿಗರು ಸಹ ಲಿಂಗಾಯತದ ಒಳಪಂಗಡಗಳಿಗೆ ಸೇರಿಕೊಂಡಿವೆ. ನೊಣಬರು ರಾಜರಾಗಿ ಪಲ್ಲವರಾಗಿ ನೊಳಂಬ ಸಾಮ್ರಾಜ್ಯವನ್ನು ನಿರ್ಮಿಸಿದರೆಂದು ಐತಿಹಾಸಿಕವಾಗಿ ಕಂಡುಬರುವುದು. ಆದರೆ ಲಾಳಗೊಂಡರು ಮತ್ತು ಕುಡುಒಕ್ಕಲಿಗರು ಪಶುಪಾಲನೆ ಹಾಗೂ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು. ಕುಡುಒಕ್ಕಲಿಗ ಸಮುದಾಯದಲ್ಲಿ ಬರುವ ರಾಜಗೊಂಡ, ಸಾಯಗೊಂಡ, ಹೆಳವಗೊಂಡ, ಮಾಳಗೊಂಡ, ಜಾಯಗೊಂಡ, ಲಾಳಗೊಂಡ ಮುಂತಾದ ಅಡ್ಡ ಹೆಸರುಗಳು ಗೊಂಡ ಸಮುದಾಯದಲ್ಲೂ ಕಂಡುಬರುತ್ತದೆ. ಇದು ಗೊಂಡ, ಲಾಳಗೊಂಡ ಮತ್ತು ಕುಡುಒಕ್ಕಲಿಗರಿಗಿರುವ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಲಾಳ ಎಂದರೆ ನೇಯ್ಗೆ. ದೊಡ್ಡಬಳ್ಳಾಪುರದಲ್ಲಿ ಇಂದಿಗೂ ಲಾಳಗೊಂಡರು ನೇಯ್ಗೆ ಕಾರ್ಯದಲ್ಲಿ ನಿರತರಾಗಿರುವರು.

ಆರ್ಯರ ವರ್ಣಾಶ್ರಮ, ವರ್ಗವ್ಯವಸ್ಥೆ, ದ್ರಾವಿಡ ಆರ್ಯರ ಕುಲಕಸುಬುಗಳ ಆಧಾರದ ಮೇಲೆ ಹಲವಾರು ಬೇಧಗಳು ತಲೆದೂರಿದವು. ಜಾತಿ, ಮತ, ಪಂತ, ಕುಲ ಹೀಗೆ ಬೇರೆಬೇರೆ ಸಮುದಾಯಗಳಾಗಿ ವಿಭಜನೆಗೊಂಡವು. ಬ್ರಾಹ್ಮಣ, ಕ್ಷತ್ರಿಯ, ವೈಷ್ಯ, ಶೂದ್ರ ಎಂದು ವರ್ಣ ವ್ಯವಸ್ಥೆ ಸಮಾಜದಲ್ಲಿ ಕಂಡುಬಂದವು. ಸಮಾಜದಲ್ಲಿ ಮೇಲುಕೀಳು ಎಂಬ ಭಾವನೆ ತಲೆದೂರಿತು. ಇದರಿಂದ ಭಕ್ತಿಪಂಥಗಳು, ಸಾಮಾಜಿಕ ಚಳುವಳಿಗಳು ಶಂಕರಾಚಾರ್ಯ, ಬುದ್ಧ, ಬಸವಣ್ಣ ಮುಂತಾದ ದಾರ್ಶನಿಕರಿಂದ ಆರಂಭವಾದವು. ಆಗ ಅನೇಕ ಸಮುದಾಯಗಳು ಮತಾಂತರ ಪ್ರಕ್ರಿಯೆಗೆ ಒಳಗಾದವು. ಕ್ರಿಶ್ಚಿಯನ್ ಕಮಿಟಿಗಳು ಸಹ ಬಡವರಿಗೆ ಆಹಾರ, ಹಣದ ಆಸೆ ತೋರಿಸಿ ಧಾರ್ಮಿಕ ಬದಲಾವಣೆಗೆ ಪೋಷಿಸಿತು. ಅಂತಹ ಪ್ರಕ್ರಿಯೆಗೆ ಲಾಳಗೊಂಡ ಸಮುದಾಯವು ಸಹ ಒಳಗಾಯಿತು.

ಉತ್ತರದಿಂದ ಬಂದ ಲಾಳಗೊಂಡರು ಆಂಧ್ರಪ್ರದೇಶ, ಕರ್ನಾಟಕ, ತಮಿಳುನಾಡು ಪ್ರದೇಶದಲ್ಲಿ

ಬೀಡುಬಿಟ್ಟರು. ಪಶುಪಾಲನೆ, ಕೃಷಿಯನ್ನು ಮುಂದುವರೆಸಿಕೊಂಡು ಬಂದರು. ಪರಿಸರಕ್ಕೆ ತಕ್ಕಂತೆ ಹೊಂದಿಕೊಂಡು ಮುಂದುವರೆದರು. ಈ ಮೂರು ಪ್ರದೇಶದಲ್ಲಿ ಇವರನ್ನು ಲಾಳಗೊಂಡ, ಲಾಳಗೊಂಡ ಒಡ್ಡೆ, ಲಾಳಗೊಂಡ ಬಣಜಿ, ಲಾಳಗೊಂಡ ಜಂಗಮ, ಲಾಳಗೊಂಡ ಗೊಲ್ಲ ಎಂದು ಆಂಧ್ರದಲ್ಲಿ, ಕರ್ನಾಟಕದಲ್ಲಿ ಲಾಳಗೊಂಡ, ದಾವಣಿಗರು, ಕುಡುಒಕ್ಕಲಿಗರು, ವೀರಶೈವರು ಎಂದು, ತಮಿಳುನಾಡಿನಲ್ಲಿ ಲಾಳ, ಲಾಳಬ್ರಹ್ಮ, ಲಾಳಕಾಯಸ್ಥ, ಲಾಳಮರಾಠ ಎಂದು ಕರೆಯುತ್ತಾರೆ. ಇವೆಲ್ಲವೂ ಲಾಳಗೊಂಡರನ್ನು ವಿಭಿನ್ನ ರೀತಿಯಲ್ಲಿ ನಿರ್ದೇಶಿಸುತ್ತವೆ.

ಲಾಳಗೊಂಡರ ಆರ್ಥಿಕವ್ಯವಸ್ಥೆ ಮತ್ತು ಭೌತಿಕಸಂಸ್ಕೃತಿ ಅವರು ವಾಸವಾಗಿರುವ ಪ್ರಾಕೃತಿಕ ಪರಿಸರಕ್ಕೆ ಅವರ ವೃತ್ತಿಗೆ ಅನುಗುಣವಾಗಿದೆ. ಪ್ರಸ್ತುತ ಇವರು ನಗರಗಳಿಗೆ ಉದ್ಯೋಗವನ್ನು ಅರಸಿಕೊಂಡು ಹೋಗಿದ್ದರೂ ಸಹ ಕೃಷಿ ಇವರ ಪ್ರಧಾನ ಕೆಲಸವಾಗಿದೆ. ಕೃಷಿ ಮತ್ತು ಜೀವನಕ್ಕೆ ಸಂಬಂಧಿಸಿದ ಆಚರಣೆಗಳನ್ನು ಇವರು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ನಂದಿಯನ್ನು ಪ್ರಧಾನವಾಗಿ ಆರಾಧಿಸುವ ಇವರು ಬಸವಣ್ಣನ(ಬಸವೇಶ್ವರ) ಪೂಜೆಯನ್ನು ಮಾಡುತ್ತಾರೆ. ದೊಡ್ಡಬಳ್ಳಾಪುರದ ಲಾಳಗೊಂಡರು ಮಾತ್ರ ನೇಯ್ಗೆ ಕಾಯಕವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಹೆಚ್ಚಾಗಿ ಇವರು ಗ್ರಾಮೀಣ ವಾಸಿಗಳಾಗಿರುವರು. ಇದರಿಂದ ವ್ಯವಸಾಯವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಕೃಷಿಯಲ್ಲಿ ಆಧುನಿಕ ಉಪಕರಣಗಳು ಬಂದಿದ್ದರೂ ಸಹ ಎತ್ತುಗಳನ್ನು ಅವರು ಕಡ್ಡಾಯವಾಗಿ ಸಾಕುತ್ತಾರೆ. ಕಾರಣ ಪಶುಪಾಲನೆ ಅವರ ಆಜೀವ ಪರಿಪಾಲನೆಯಾಗಿದೆ.

ಲಾಳಗೊಂಡರಲ್ಲಿ ಹೆಚ್ಚು ಅವಿಭಕ್ತ ಕುಟುಂಬಗಳನ್ನು ನಾವು ಕಾಣುತ್ತೇವೆ. ಇತ್ತೀಚೆಗೆ ಆಧುನಿಕತೆಯ ಪ್ರಭಾವಕ್ಕೊಳಗಾಗಿ ವಿಭಕ್ತ ಕುಟುಂಬಗಳು ಹುಟ್ಟಿಕೊಳ್ಳುತ್ತಿವೆ. ವೇಷಭೂಷಣವು ಸಹ ಆಧುನಿಕತೆಯ ಅನುಕರಣೆಗೊಳಗಾಗಿವೆ. ಲಾಳಗೊಂಡರು ಮೂಲತಃ ಶೈವರಾಗಿರುವರು. ಇವರ ಪುರಾಣ ಮತ್ತು ಐತಿಹ್ಯಗಳನ್ನು ನೋಡಿದಾಗ ಶಿವನ ಮತ್ತು ಲಿಂಗದ ಉಲ್ಲೇಖವಿದೆ. ಇವರು ಕೊರಳಲ್ಲಿ ಲಿಂಗವನ್ನು ಧರಿಸಿರುತ್ತಾರೆ. ಲಿಂಗೋದ್ಭವಿ ರೇವಣಸಿದ್ಧರು, ಶ್ರೀ ಶೈಲದ ಮಲ್ಲಿಕಾರ್ಜುನ, ವೀರಭದ್ರ, ಮೈಲಾರ, ಲಿಂಗಭಕ್ತಿ ಇತ್ಯಾದಿಗಳು ಶೈವ ಪಂಥದ ಲಕ್ಷಣಗಳಾಗಿವೆ. ಶಿವನು ದ್ರಾವಿಡ ಜನಾಂಗದ ಇಷ್ಟ ದೇವತೆಯಾಗಿರುವನು. ಲಾಳಗೊಂಡರು ಪೂಜಿಸುವ ರೇವಣಸಿದ್ಧೇಶ್ವರ, ವೀರಭದ್ರ(ಈರಕಾರ, ಬೀರಲಿಂಗ), ಬೆಟದಮಲ್ಲಯ್ಯ (ಶ್ರೀ ಶೈಲ ಮಲ್ಲಿಕಾರ್ಜುನ) ಇವು ಗೊಂಡರ ದೇವತೆಗಳು ಅಲ್ಲದೆ ಇವು ಅಡವಿ ದೇವತೆಗಳಾಗಿವೆ.

ಲಾಳಗೊಂಡರು ಮತ್ತು ಗೊಂಡ (ಕುರುಬ) ರ ಆಚರಣೆಗಳು ಅಂದರೆ ಹುಟ್ಟು ಮತ್ತು ಸಾವಿನ ಆಚರಣೆಗಳಿಗೆ ಹೋಲಿಕೆಗಳಿವೆ. ಶವಹೂಳುವುದು, ಆರಾಧನ ಕ್ರಮಗಳು, ದೇವರುಗಳು ಇವೆಲ್ಲವೂ ಲಾಳಗೊಂಡರು ಸಹ ಶೈವರಾಗಿರುವುದಾಗಿ ತಿಳಿಸುತ್ತವೆ. ಅಲ್ಲದೆ ಬೀರಪ್ಪನೇ ಈರಪ್ಪ, ಈರಪ್ಪನೇ ವೀರಭದ್ರನಾಗಿರುವುದು. ಲಾಳಗೊಂಡರಲ್ಲಿ ಗೌಡ, ನಾಡಗೌಡ, ಸರನಾಡಗೌಡ ಎಂಬ ಅಡ್ಡ

ಹೆಸರುಗಳಿವೆ. ಗೌಡ ಪದವು ಗೊಂಡ ಪದದಿಂದ ಬಂದಿದೆ. ಇದು ಗೊಂಡ ಮತ್ತು ಲಾಳಗೊಂಡರ ಸಾಮ್ಯತೆಯನ್ನು ತಿಳಿಸುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಲಾಳಗೊಂಡ ಸಮುದಾಯದ ಕುರಿತು ಸಮಗ್ರವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಂತಹ ಅಧ್ಯಯನಗಳು ಒಂದು ಸಮುದಾಯದ ಕುರಿತು ಮಾಹಿತಿಯನ್ನು ನೀಡುವುದಾಗಿದೆ. ಕೆಲವೊಂದು ಸಂದರ್ಭದಲ್ಲಿ ಎಲ್ಲಾ ಅಂಶಗಳ ಕುರಿತು ಆಳವಾದ ಅಧ್ಯಯನ ದಕ್ಕದೇ ಹೋಗಬಹುದು. ಆದುದರಿಂದ ಮುಂಬರುವ ಸಂಶೋಧಕರು ಈ ಬಗ್ಗೆ ಇನ್ನೂ ಆಳವಾದ ಅಧ್ಯಯನಗಳನ್ನು ಕೈಗೊಂಡಾಗ ಈ ಸಂಶೋಧನೆಗೆ ಸಿಗದೇ ಇರುವ ಇನ್ನೂ ಹಲವು ಅಂಶಗಳು ಬೆಳಕಿಗೆ ಬರಬಹುದು. ಲಾಳಗೊಂಡರು ಗೊಂಡರಿಂದ ಕವಲೊಡೆದ ಒಂದು ಗುಂಪು ಎನ್ನುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ. ಅದು ಸಾಮಾಜಿಕ ಚಲನೆ ಮುಖಾಂತರ ನಡೆದಿದೆ. ಈ ಅಧ್ಯಯನದಲ್ಲಿ ಗೊಂಡ ಮತ್ತು ಲಾಳಗೊಂಡರ ಕುರಿತು ಅಧ್ಯಯನ ಮಾಡಲಾಗಿದೆ. ಆದರೆ ಲಾಳಗೊಂಡರ ಸಂಸ್ಕೃತಿ, ಆಚರಣೆಗಳು, ಲಾಳಗೊಂಡರಿಗೂ ಇತರೆ ಲಿಂಗಾಯತ ಒಳಪಂಗಡಗಳಿಗೂ ಇರುವ ಭಿನ್ನ ತುಲನಾತ್ಮಕ ಅಧ್ಯಯನಗಳು ಮುಂದಿನ ಸಂಶೋಧನೆಗಳಿಗೆ ವಿಷಯಗಳಾಗಬಲ್ಲವು ಎನ್ನುವುದು ನಮ್ಮ ನಂಬಿಕೆಯಾಗಿದೆ.

# ಅನುಬಂಧಗಳು

## ೧. ಸ್ಥಳ ನಾಮ ಸೂಚಿ

| | |
|---|---|
| ೧. ಕುರುಗೋಡು: | ಈಗಿನ ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿನ ಒಂದು ಗ್ರಾಮ ಶ್ರೀ ದೊಡ್ಡಬಸವೇಶ್ವರ ದೇವಸ್ಥಾನವಿದ್ದು, ಇಲ್ಲಿ ಸಿಂದಿಗೇರಿ ನೀಲಮ್ಮಳು(ಕುರುಗೋಡು) ದೀಕ್ಷೆ ತೆಗೆದುಕೊಂಡು ನೆಲೆಸಿದ್ದಳು. |
| ೨. ಕದಡಿ: | ಗದಗ ಜಿಲ್ಲೆಯಲ್ಲಿ ಬರುವ ಒಂದು ಪುಟ್ಟ ಗ್ರಾಮ ಇದು ಕುರುಗೋಡು ನೀಲಮ್ಮ ಐಕ್ಯವಾದ ಸ್ಥಳ. |
| ೩.ಲಾಂಜಿಗಢ: | ಈಗಿನ ಮಧ್ಯಪ್ರದೇಶದಲ್ಲಿ ಬರುವ ಲಾಂಜಿಗಢವು ಲಾಳಗೊಂಡರ ಮೂಲ ನೆಲೆಯಾಗಿದ್ದು ಇಲ್ಲಿಂದ ಲಾಳಗೊಂಡರು ದಕ್ಷಿಣಭಾರತದತ್ತ ವಲಸೆ ಬಂದಿರಬಹುದು. |
| ೪. ಲಾಣ(ಲಾಳ)ಗಢ: | ಈಗಿನ ಮಧ್ಯಪ್ರದೇಶ ರಾಜ್ಯದ ಬಾಲಾಘಾಟ್ ಜಿಲ್ಲೆಯಲ್ಲಿದೆ. ಇದು ಲಾಳಗೊಂಡರ ಮೂಲಸ್ಥಾನವಾಗಿದೆ. |
| ೫.ಲಾಲಗೊಂಡನಹಳ್ಳಿ: | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ಆವುತಿ ಗ್ರಾಮ ಪಂಚಾಯತಿಯ ಒಂದು ಪುಟ್ಟ ಗ್ರಾಮ ಇಲ್ಲಿ ಮೊದಲು ಲಾಳಗೊಂಡರು ನೆಲೆಸಿದ್ದರು. ಆದರೆ ಈ ಗ್ರಾಮದಲ್ಲಿ ಲಾಳಗೊಂಡರು ಒಬ್ಬರೂ ಇಲ್ಲ. |
| ೬. ಕೋಡಿಮಂಚೇನಹಳ್ಳಿ: | ದೇವನಹಳ್ಳಿ ತಾಲ್ಲೂಕಿನ ಸಮೀಪವಿರುವ ಈ ಗ್ರಾಮದಲ್ಲಿ ಒಟ್ಟು ೨೫ ಕುಟುಂಬಗಳೂ ಸಹ ಲಾಳಗೊಂಡ ಕುಟುಂಬದವರೇ ಆಗಿದ್ದಾರೆ. |
| ೭. ಕುರುಬರಹಳ್ಳಿ: | ದೊಡ್ಡಬಳ್ಳಾಪುರ ತಾಲ್ಲೂಕಿನ ಕೊಡಿಗೆಹಳ್ಳಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಈ ಹಳ್ಳಿಯಲ್ಲಿ ಲಾಳಗೊಂಡರೇ ವಾಸಿಸುತ್ತಾರೆ. ಈ ಗ್ರಾಮವು ಒಂದು ಸಂದರ್ಭದಲ್ಲಿ ಇಡೀ ಗ್ರಾಮವೇ ಲಿಂಗದೀಕ್ಷೆ ಪಡೆದು ಲಿಂಗಾಯತರಾದರು ಆದ್ದರಿಂದ ಇದಕ್ಕೆ ಕುರುಬರ ಹಳ್ಳಿಯ ಬದಲು ರೇಣುಕಾಪುರ ಎಂದು ನಾಮಕರಣವಾಗಿದೆ. |
| ೮. ಶಿಖರಮಠ (ರಾಯಚೂರು): | ಇದು ಹಿಂದಿನಕಾಲದ ಲಾಳಗೊಂಡರ ಮಠವಾಗಿತ್ತು. ಈ ಮಠದಲ್ಲಿ ನಾಳಗೊಂಡೇಶ್ವರ ಪುರಾಣವನ್ನು ಸಿದ್ಧರಾಮ ಶಾಸ್ತ್ರಿಗಳು ರಚನೆ ಮಾಡಿದ್ದಾರೆ. |

೯. ಆನೆಕೊಂಡ: ದಾವಣಗೆರೆ ಜಿಲ್ಲೆ ದಾವಣಗೆರೆ ತಾಲೂಕಿನಲ್ಲಿರುವ ಆನೆಕೊಂಡ ಗ್ರಾಮದಲ್ಲಿ ಬಸವೇಶ್ವರ ದೇವಸ್ಥಾನವಿದ್ದು ಇದು ಶೈವದೇವಸ್ಥಾನವಾಗಿದೆ.

೧೦. ದರೋಜಿ: ಬಳ್ಳಾರಿ ಜಿಲ್ಲೆಯಲ್ಲಿರುವ ಕಂಪ್ಲಿ ಹತ್ತಿರ ಬರುವ ದರೋಜಿ ಗ್ರಾಮದ ಒಂದು ಬೆಟ್ಟದಲ್ಲಿ ಗೊಂಡರ ಲಾಂಚನವಿದ್ದು ಇದು ಆನೆಯು ಸಿಂಹವನ್ನು ಪಳಗಿಸುವ ಚಿತ್ರ

೧೧. ಸುಮನಹಳ್ಳಿ: ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಒಂದು ಗ್ರಾಮ, ಇಲ್ಲಿ ದೊಡ್ಡಬಸವೇಶ್ವರ ದೇವಸ್ಥಾನವಿದ್ದು ಇಲ್ಲಿ ದಾವಣಿಗರು ವಾಸವಾಗಿದ್ದಾರೆ.

೧೨. ಹೆಬ್ಬಾಳು: ದಾವಣಗೆರೆ ತಾಲೂಕಿನ ಒಂದು ಗ್ರಾಮ, ಇಲ್ಲಿನ ರುದ್ರಸ್ವಾಮಿ ಮಠದ ರಥದಲ್ಲಿ ಆನೆ ಸಿಂಹವನ್ನು ಪಳಗಿಸುವ ಕೆತ್ತನೆಗಳಿವೆ.

೧೪. ಹರಿಹರ: ಗೊಂಡ್ವಾನ ರಾಜಲಾಂಛನ ಹೊಂದಿರುವ ಹರಿಹರೇಶ್ವರ ದೇವಾಲಯ ಕ್ರಿ ಶ ೧೨ನೇ ಶತಮಾನದ ಶಿಲ್ಪಕಲೆ ನಾಲ್ಕು ಅಡಿ ಉದ್ದ ಮೂರುಅಡಿ ಎತ್ತರವಿರುವ ಶಿಲ್ಪಿಯು ಆನೆಮಂಡಿಯೂರಿ ಕುಳಿತಂತೆ ಅದರ ಮೇಲೆ ಸಿಂಹವು ಕುಳಿತಿದೆ.

೧೫. ಹೊಂಬುಜ: ಈಗಿನ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿದೆ, ಜೈನ ಬಸದಿಯಲ್ಲಿ ಗೊಂಡ್ವಾನ ರಾಜಚಿಹ್ನೆ ಆನೆ ಮತ್ತು ಸಿಂಹ ಹೋರಾಡುತ್ತಿರುವ ದೃಶ್ಯವನ್ನು ಕೆತ್ತಲಾಗಿದೆ.

೧೩. ಎಲ್ಲೋರ: ಈಗಿನ ಮಹರಾಷ್ಟ್ರ ರಾಜ್ಯದಲ್ಲಿದೆ. ಇಲ್ಲಿ ಲಕುಲೀಶನ ವಿಗ್ರಹವು ಶೈವ ಪರಂಪರೆಯಲ್ಲಿ ನಿರ್ಮಾಣ ಗೊಂಡಿದೆ.

೧೪. ಶ್ರೀಶೈಲ: ಈಗಿನ ಆಂಧ್ರಪ್ರದೇಶ ರಾಜ್ಯದಲ್ಲಿದೆ ಇಲ್ಲಿ ಮಲ್ಲಿಕಾರ್ಜುನ ದೇವಸ್ಥಾನವಿದೆ. ಶ್ರೀ ಸಿದ್ಧರಾಮೇಶ್ವರರು ನೆಲೆಗೊಂಡ ಸ್ಥಾನವಿದು.ಇಲ್ಲಿನ ದೇವಾಲಯದಲ್ಲಿ ಆನೆಯ ಸೊಂಡಿಲನ್ನು ವೀರನೊಬ್ಬ ಸವಾರಿ ಮಾಡುತ್ತಿರುವಂತೆ ಕಂಬ ಶಿಲ್ಪಿಗಳಿವೆ.

೧೫. ತೆಗ್ಗಿನ ಮಠ: ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ಕೇಂದ್ರದ ಲಿಂಗಾಯತ ಮಠ ತಗ್ಗಿನಮಠ. ಈ ಮಠದ ಮುಖ್ಯ ದ್ವಾರದಲ್ಲಿ ಬೃಹತ್ ಆಕಾರದ ಆನೆಯ ಕೆತ್ತನೆಗಳಿವೆ.

೧೬. ಮೈಲಾರ: ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನಲ್ಲಿದೆ. ಇದು ಕುರುಬ ಸಮುದಾಯದ ಆರಾಧ್ಯದೈವ.

೧೭. ಓಕಿಮಠ: ಹಿಮಾಲಯದ ಕೇದಾರದಲ್ಲಿದೆ. ಇಲ್ಲಿ ನಾಳಗೊಂಡೇಶ್ವರನ ಸಮಾದಿ ಇದೆ.

೧೮. ಕೂಡಲ ಸಂಗಮ: ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲ್ಲೂಕಿನಲ್ಲಿದೆ, ಇದು ಶ್ರೀ ಬಸವೇಶ್ವರರ ಐಕ್ಯ ಸ್ಥಳವಾಗಿದೆ.

## ೨. ಶಬ್ದಾರ್ಥ ಸೂಚಿ

೧. ಟೀ ಕಾಮು: ತೇಗದ ವೃಕ್ಷ (ಮರ).

೨. ಸಂ.ಭೂ. ಶೇಖರ: ಸಂಯಾಂಗ್ ಭೂಯುಂಗ್ ವೇನ್ (ಶೈವನ್), ಶೇಖರ ಎಂದರೆ ಐದು ಭೂಖಂಡಗಳ ದೇವರು ಐದು ಭೂ ಖಂಡಗಳ ಒಡೆಯ, ರಾಜ ಎಂದರ್ಥ.

೩. ಪರಸಾ ಪೇನ್: ದೊಡ್ಡ, ಶಕ್ತಿಶಾಲಿ ದೇವ, ಮಹಾದೇವ.

೪. ಸೈವನ್ (ಶೈವನ್): ಐದು ಖಂಡಗಳ ಒಡೆಯ, ಶಿವ

೫. ಕುರುಹು: ಗುರುತು, ಚಿಹ್ನೆ.

೬. ಯಾದಿಂಗ್, ಯಾದವ: ಇದು ಗೊಂಡಿಭಾಷೆಯಲ್ಲಿದ್ದು ಯಾದ ಎಂದರೆ ಆಕಳು(ಗೋವು) 'ಯಾದಿಂಗ್' ಗೋತ್ರಜ ಆಕಳು ಗೋತ್ರದವರು, ಗೋಪಾಲನೆ ಮಾಡುವವರು, ಅರ್ಥಾತ್ ಗೋವಿನ ಮೇಲೆ ಅವಲಂಬಿತ ಜೀವನ ನಡೆಸುವ ಜನರು.

೭. ಅಮರಗಣ: ಗಣ ಎಂದರೆ 'ಗುಂಪು'

೮. ಲಗಳಿ:

೯. ಲಾಳ: ಪಶುಗಳ ಕತ್ತಿಗೆ ಹಾಗೂ ಬಾಯಿಗೆ ಹಾಕಿ ಕಟ್ಟಿಹಾಕುವ ಹಗ್ಗ ಮತ್ತು ಕಬ್ಬಿಣದ ಆಯುಧ

೧೦. ಉಪಾಸ್ಯ: ಆರಾಧನೆಗೊಳಪಟ್ಟ.

೧೧. ಒಡೆಯರು: ಯಜಮಾನರು, ಸಾಹುಕಾರ, ಅಧಿಕಾರಯುತ ವ್ಯಕ್ತಿ

೧೨. ದ್ರಾವಿಡ ಲಿಪಿ: ದ್ರಾವಿಡ ಲಿಪಿಯು ಭಾಷಾ ಶೈಲಿಯ ಒಂದು ವಿಧ. ಕನ್ನಡ, ತೆಲುಗು, ತಮಿಳು ಭಾಷೆಗಳು ದ್ರಾವಿಡ ಮೂಲದ ಉತ್ಪತ್ತಿ ಭಾಷೆಗಳು.

೧೩. ಕುಳ: ವಿಳಾಸ, ಊರು, ನೆಲೆ.

೧೪. ಲಾಕುಳ: ಯೋಗದಂಡ

೧೫. ಅನತಿದೂರ: ಸ್ವಲ್ಪದೂರ

೧೬. ಸೂರೆ: ಹಾಳುಮಾಡು, ಕೊಳ್ಳೆಹೊಡಿ, ಚಲ್ಲಾಪಿಲ್ಲಿಮಾಡು

## ೩. ಮಾಹಿತಿದಾರರ ಪಟ್ಟಿ

| ಕ್ರಸಂ. | ಹೆಸರು | ಸ್ಥಳ | ವಯಸ್ಸು | ಉದ್ಯೋಗ | ಜಿಲ್ಲೆ |
|---|---|---|---|---|---|
| ೧ | ಕಲಬುರ್ಗಿ ಎಂ ಎಂ | ಧಾರವಾಡ | ೮೦ | ನಿವೃತ್ತ ಪ್ರಾಧ್ಯಾಪಕರು | ಧಾರವಾಡ |
| ೨ | ಹೋರಿ ಎಂ ವಿ | ಅಳವಂಡಿ | ೭೮ | ನಿವೃತ್ತ ಶಿಕ್ಷಕರು | ಕೊಪ್ಪಳ |
| ೩ | ಜಿ ವೀರಭದ್ರಗೌಡ | ಬೆಂಗಳೂರು | ೪೩ | ಶಿಕ್ಷಕರು | ಬೆಂಗಳೂರು |
| ೪ | ಮಂಜಪ್ಪ ಬುರುಡೆಕಟ್ಟೆ | ದಾವಣಗೆರೆ | ೪೭ | ಶಿಕ್ಷಕರು, ಸಂಶೋಧಕರು | ದಾವಣಗೆರೆ |
| ೫ | ಚಂದ್ರಕಾಂತ್ ಬಿಜ್ಜರಗಿ | ಬಿಜಾಪುರ | ೫೨ | ಲೇಖಕರು | ಬಿಜಾಪುರ |
| ೬ | ಪಂಪನಗೌಡ ಎಂ ಆರ್ | ಮುನಿರಾಬಾದ್ | ೫೯ | ಇಂಜಿನಿಯರ್,ಇತಿಹಾಸ | ಹೊಸಪೇಟೆ |
| ೭ | ಸಿದ್ದಣ್ಣ ಉತ್ನಾಳ್ | ಅಥಣಿ | ೬೮ | ಉಪನ್ಯಾಸಕರು | ಬೆಳಗಾಂ |
| ೮ | ಮಹೇಶ್ ತಿಪ್ಪೇಶೆಟ್ಟಿ | ಬೆಂಗಳೂರು | ೬೭ | ನಿವೃತ್ತ ಉಪನ್ಯಾಸಕರು | ಬೆಂಗಳೂರು |
| ೯ | ಉಮಾಪತಿ ಗೌಡ | ಶಿರಗುಪ್ಪ | ೫೨ | ಲಾಳಗೊಂಡರ ಅಧ್ಯಕ್ಷರು | ಬಳ್ಳಾರಿ |
| ೧೦ | ನಟರಾಜ | ಕೋಡಿಮಂಚೇನಹಳ್ಳಿ | ೪೨ | ಕೃಷಿ | ದೊಡ್ಡಬಳ್ಳಾಪುರ |
| ೧೧ | ಮುದ್ದಗಂಗಮ್ಮ | ಕುರುಬರಹಳ್ಳಿ | ೩೪ | ಅಂಗನವಾಡಿ ಕಾರ್ಯಕರ್ತೆ | ದೊಡ್ಡಬಳ್ಳಾಪುರ |
| ೧೨ | ಮುತ್ತಜ್ಜ | ಕುರುಬರಹಳ್ಳಿ | ೭೮ | ಕೃಷಿ | ದೊಡ್ಡಬಳ್ಳಾಪುರ |
| ೧೩ | ಲಕ್ಷ್ಮಮ್ಮ | ಕುರುಬರಹಳ್ಳಿ | ೮೦ | ಮಾಜಿ ಗ್ರಾಮಪಂಚಾಯತಿ ಸದಸ್ಯೆ | ದೊಡ್ಡ ಬಳ್ಳಾಪುರ |
| ೧೪ | ಅಪ್ಪಣ್ಣಜ್ಜಯ್ಯ | ಲಾಲಗೊಂಡನಹಳ್ಳಿ | ೮೦ | ಕೃಷಿಕ | ದೊಡ್ಡಬಳ್ಳಾಪುರ |

| | | | | | |
|---|---|---|---|---|---|
| ೧೫ | ಕೃಷ್ಣಪ್ಪ | ಲಾಲಗೊಂಡನಹಳ್ಳಿ | ೪೫ | ರೈತ ಮುಖಂಡ | ದೊಡ್ಡಬಳ್ಳಾಪುರ |
| ೧೬ | ಉಮಾಪತಿ | ಕೋಡಿಮಂಚೇನಹಳ್ಳಿ | ೪೯ | ಕೃಷಿ | ದೊಡ್ಡಬಳ್ಳಾಪುರ |
| ೧೭ | ಮೂರ್ತಿ | ಆಹುತಿ | ೩೮ | ಗ್ರಾಮ ಪಂಚಾಯತಿ ಸದಸ್ಯ | ದೊಡ್ಡಬಳ್ಳಾಪುರ |
| ೧೮ | ರೇವಣಪ್ಪ ಮುದುಕಪ್ಪ ಅಕ್ಕೂರು | ಪಶುಪತಿಹಾಳ್ | ೭೬ | ಕೃಷಿ | ಗದಗ |
| ೧೯ | ಮುತ್ತಣ್ಣ | ಪಶುಪತಿಹಾಳ್ | ೩೮ | ಕೃಷಿ | ಗದಗ |
| ೨೦ | ಶಿವಪ್ಪ ಮಲ್ಲಪ್ಪ ಕೊಪ್ಪದ್ | ಮಾರಡಿಗಿ | ೮೪ | ಕೃಷಿ | ಧಾರವಾಡ |
| ೨೧ | ಕೊಟ್ರೇಶ್ ಕೊಪ್ಪದ್ | ಮಾರಡಿಗಿ | ೪೮ | ಕೃಷಿ | ಧಾರವಾಡ |
| ೨೨ | ಶೇಖರಪ್ಪ ಓ | ಹಂಪಾಪಟ್ಟಣ | ೭೦ | ಕೃಷಿ | ಬಳ್ಳಾರಿ |
| ೨೩ | ಪಂಪನಗೌಡ | ಸುಗ್ಗೇನಹಳ್ಳಿ | ೬೮ | ಕೃಷಿ | ಬಳ್ಳಾರಿ |
| ೨೪ | ಮಲ್ಲನ ಗೌಡ | ಸುಗ್ಗೇನಹಳ್ಳಿ | ೭೩ | ಕೃಷಿ | ಬಳ್ಳಾರಿ |
| ೨೫ | ರಾಮನಗೌಡ | ಜಾಯಗನೂರು | ೫೫ | ಕೃಷಿ | ಬಳ್ಳಾರಿ |
| ೨೬ | ವೀರೇಶ್ ಗೌಡ | ಕಲ್ಲುಕುಟಿಗಿನಹಾಳ್ | ೬೨ | ಕೃಷಿ | ಬಳ್ಳಾರಿ |
| ೨೭ | ನಾಗರಾಜ್ | ನಾಗೇನಹಳ್ಳಿ | ೪೮ | ಉಪನ್ಯಾಸಕರು | ಬಳ್ಳಾರಿ |
| ೨೮ | ಬಸವನಗೌಡ | ಕುಂಟ್ನಾಳ್ | ೮೫ | ಕೃಷಿ | ಬಳ್ಳಾರಿ |
| ೨೯ | ವಿರೂಪಾಕ್ಷಗೌಡ | ಕುಂಟ್ನಾಳ್ | ೭೦ | ಕೃಷಿ | ಬಳ್ಳಾರಿ |
| ೩೦ | ಮೇಘನಾಥ ಗೌಡ | ನಾಗೇನಹಳ್ಳಿ | ೬೬ | ಕೃಷಿ | ಬಳ್ಳಾರಿ |
| ೩೧ | ಶಿವನಗೌಡ | ನಾಗೇನಹಳ್ಳಿ | ೬೯ | ಕೃಷಿ | ಬಳ್ಳಾರಿ |

| | | | | | |
|---|---|---|---|---|---|
| ೩೨ | ಮಲ್ಲಪ್ಪ ದುಂಡೆಪ್ಪ ಸಗರಿ | ರಾಮದುರ್ಗ | ೬೨ | ನಿವೃತ್ತಗ್ರಾಪಂ ಕಾರ್ಯದರ್ಶಿ | ಬೆಳಗಾಂ |
| ೩೩ | ಮಂಜುನಾಥ | ಕುರುಬರಹಳ್ಳಿ | ೬೦ | ಕೃಷಿ | ದೊಡ್ಡಬಳ್ಳಾಪುರ |
| ೩೪ | ಮರಿಯಪ್ಪ | ಕುರುಬರಹಳ್ಳಿ | ೬೧ | ಕೃಷಿ | ದೊಡ್ಡಬಳ್ಳಾಪುರ |
| ೩೫ | ಗೌರಯ್ಯ | ಕುರುಬರಹಳ್ಳಿ | ೬೫ | ಕೃಷಿ | ದೊಡ್ಡಬಳ್ಳಾಪುರ |
| ೩೬ | ನಾಗರತ್ನಮ್ಮ | ಕುರುಬರಹಳ್ಳಿ | ೪೫ | ಕೃಷಿ | ದೊಡ್ಡಬಳ್ಳಾಪುರ |
| ೩೭ | ನಾಗರಾಜಪ್ಪ | ಕುರುಬರಹಳ್ಳಿ | ೬೫ | ಕೃಷಿ, ಕೈಮಗ್ಗ | ದೊಡ್ಡಬಳ್ಳಾಪುರ |
| ೩೮ | ವೆಂಕಟಮ್ಮ | ಕುರುಬರಹಳ್ಳಿ | ೯೫ | ಕೃಷಿ | ದೊಡ್ಡಬಳ್ಳಾಪುರ |
| ೩೯ | ಜಯರಾಮ್ | ಕೊಡಗೇಹಳ್ಳಿ | ೪೮ | ಕುರುಬರಹಳ್ಳಿಗ್ರಾಪಂಕಾರ್ಯದರ್ಶಿ | ದೊಡ್ಡಬಳ್ಳಾಪುರ |
| ೪೦ | ಮುನಿಯಲ್ಲಪ್ಪ | ಕುರುಬರಹಳ್ಳಿ | ೬೪ | ಕೃಷಿ, ಕೈಮಗ್ಗ | ದೊಡ್ಡಬಳ್ಳಾಪುರ |
| ೪೧ | ಹಿರಿನಾಗಣ್ಣ | ಕುರುಬರಹಳ್ಳಿ | ೫೮ | ಕೃಷಿ, ಕೈಮಗ್ಗ | ದೊಡ್ಡಬಳ್ಳಾಪುರ |
| ೪೨ | ನಂಜುಂಡಿ | ಕುರುಬರಹಳ್ಳಿ | ೨೮ | ಕೃಷಿ, ಫೋಟೋಗ್ರಾಫರ್ | ದೊಡ್ಡಬಳ್ಳಾಪುರ |
| ೪೩ | ಸಂಘಪ್ಪ | ಆನೆಕೊಂಡ | ೮೯ | ಪೂಜಾರಿ | ದಾವಣಗೆರೆ |
| ೪೪ | ಸೋಮಣ್ಣ | ಆನೆಕೊಂಡ | ೪೯ | ಕೃಷಿ | ದಾವಣಗೆರೆ |
| ೪೫ | ರುದ್ರಜ್ಜ | ಆನೆಕೊಂಡ | ೭೪ | ಕೃಷಿ | ದಾವಣಗೆರೆ |
| ೪೬ | ಲಿಂಗಪ್ಪ | ಆನೆಕೊಂಡ | ೬೬ | ಕೃಷಿ | ದಾವಣಗೆರೆ |
| ೪೭ | ಚಿದಾನಂದಪ್ಪ | ಆನೆಕೊಂಡ | ೬೫ | ಕೃಷಿ | ದಾವಣಗೆರೆ |

| | | | | | |
|---|---|---|---|---|---|
| ೪೮ | ಬಸವಂತಪ್ಪ | ಆನೆಕೊಂಡ | ೬೧ | ಕೃಷಿ | ದಾವಣಗೆರೆ |
| ೪೯ | ಗುರುರಾಜಪ್ಪ | ಆನೆಕೊಂಡ | ೫೪ | ಕೃಷಿ | ದಾವಣಗೆರೆ |
| ೫೦ | ರಂಗಜ್ಜ | ಆನೆಕೊಂಡ | ೮೨ | ಕೃಷಿ | ದಾವಣಗೆರೆ |
| ೫೧ | ಸಿದ್ದಜ್ಜ | ಶಿರಮಗೊಂಡನಹಳ್ಳಿ | ೮೬ | ಕೃಷಿ | ದಾವಣಗೆರೆ |
| ೫೨ | ಕಲ್ಲಪ್ಪಗೌಡ | ಶಿರಮಗೊಂಡನಹಳ್ಳಿ | ೭೯ | ಕೃಷಿ | ದಾವಣಗೆರೆ |
| ೫೩ | ಭೀಮಜ್ಜ | ಶಿರಮಗೊಂಡನಹಳ್ಳಿ | ೮೦ | ಕೃಷಿ | ದಾವಣಗೆರೆ |
| ೫೪ | ಸಂಗೇನವಾಡಿ ಮಠದ ವೀರಯ್ಯ | ಎಲೆಬೇತೂರು | ೭೮ | ಪೂಜಾರಿ | ದಾವಣಗೆರೆ |
| ೫೫ | ಶಿವಲಿಂಗಜ್ಜ | ಕನುಗೊಂಡನಹಳ್ಳಿ | ೭೮ | ಕೃಷಿ | ದಾವಣಗೆರೆ |
| ೫೬ | ಈಶ್ವರಪ್ಪ | ಕನುಗೊಂಡನಹಳ್ಳಿ | ೬೫ | ಕೃಷಿ | ದಾವಣಗೆರೆ |
| ೫೭ | ಪರಮೇಶ್ವರಪ್ಪ | ಕನುಗೊಂಡನಹಳ್ಳಿ | ೭೨ | ಕೃಷಿ | ದಾವಣಗೆರೆ |
| ೫೮ | ಬಸವರಾಜಪ್ಪ | ಮಾಯಕೊಂಡ | ೪೬ | ಗುತ್ತಿಗೆ ದಾರರು | ದಾವಣಗೆರೆ |
| ೫೯ | ಗುರುಶಾಂತಪ್ಪ | ಮಾಯಕೊಂಡ | ೫೧ | ಜಮೀನ್ದಾರರು | ದಾವಣಗೆರೆ |
| ೬೦ | ರಾಕೇಶ್ | ಕೋಣನತಲೆ | ೩೭ | ಪ್ರಾಧ್ಯಾಪಕರು | ದಾವಣಗೆರೆ |
| ೬೧ | ಶಿವಾನಂದಸ್ವಾಮಿ | ಹೆಬ್ಬಾಳು | ೫೬ | ಮಠಾಧೀಶರು | ದಾವಣಗೆರೆ |
| ೬೨ | ದೊಡ್ಡಪ್ಪಯ್ಯ | ಹರಪನಹಳ್ಳಿ | ೫೨ | ಶಾಸ್ತ್ರಿಗಳು | ದಾವಣಗೆರೆ |
| ೬೩ | ಪ್ರಕಾಶ್ ಕಡೆಮನಿ | ಹರಪನಹಳ್ಳಿ | ೪೩ | ಗುತ್ತಿಗೆದಾರರು | ದಾವಣಗೆರೆ |
| ೬೪ | ದೇವೇಂದ್ರಪ್ಪ | ಗಂಗಾವತಿ | ೫೬ | ಕೃಷಿ | ಬಳ್ಳಾರಿ |

| | | | | | |
|---|---|---|---|---|---|
| ೬೫ | ಶಂಕರಪ್ಪ | ಗಂಗಾವತಿ | ೬೬ | ಖಾನಾವಳಿ | ಬಳ್ಳಾರಿ |
| ೬೬ | ಮಲ್ಲಪ್ಪ | ಗಂಗಾವತಿ | ೬೯ | ಕಾರ್ಮಿಕರು | ಬಳ್ಳಾರಿ |
| ೬೭ | ವೀರನಗೌಡ | ಕುರುಗೋಡು | ೬೩ | ಕೃಷಿ | ಬಳ್ಳಾರಿ |
| ೬೮ | ಸಿದ್ದನಗೌಡ | ಕುರುಗೋಡು | ೫೦ | ಕೃಷಿ | ಬಳ್ಳಾರಿ |
| ೬೯ | ದೊಡ್ಡನಗೌಡ | ಕುರುಗೋಡು | ೭೯ | ಕೃಷಿ | ಬಳ್ಳಾರಿ |
| ೭೦ | ಮಂಜುನಾಥ | ನಾಗೇನಹಳ್ಳಿ | ೪೨ | ಹಿರಿಯ ದರ್ಜೆ ಸಹಾಯಕರು | ಬಳ್ಳಾರಿ |
| ೭೧ | ನಾಗರಾಜ | ಬಳ್ಳಾರಿ | ೫೬ | ಪ್ರಾಚಾರ್ಯರು | ಬಳ್ಳಾರಿ |
| ೭೨ | ಶಿವಕುಮಾರ | ಗುಲ್ಬರ್ಗ | ೩೧ | ಕಾರ್ಮಿಕ | ಗುಲ್ಬರ್ಗ |
| ೭೩ | ಆನಂದ ಮಲ್ಲಾಪುರ | ಧಾರವಾಡ | ೪೬ | ಬ್ಯಾಂಕ್ ನೌಕರ | ಧಾರವಾಡ |
| ೭೪ | ಚಂದ್ರಕಾಂತ ನೀಲಾನಹಳ್ಳಿ | ದೊಡ್ಡಬಾತಿ | ೫೧ | ಪೋಸ್ಟ್ ಮಾಸ್ಟರ್ | ದಾವಣಗೆರೆ |
| ೭೫ | ದೊಡ್ಡ ಮಲ್ಲನಗೌಡ | ದರೋಜಿ | ೬೨ | ಕೃಷಿಕ | ಬಳ್ಳಾರಿ |
| ೭೬ | ಮೇಘನಾಥ | ಕರೂರು | ೪೬ | ಅಕ್ಕಿ ವ್ಯಾಪಾರಿ | ಬಳ್ಳಾರಿ |
| ೭೭ | ಸಿದ್ದಲಿಂಗನಗೌಡ | ಗೆಣಿಕೆಹಾಳು | ೭೧ | ವಯಸ್ಕರು(ಕೃಷಿಕ) | ಬಳ್ಳಾರಿ |
| ೭೮ | ಬಸವನಗೌಡ | ಸಿರಿಗೆರೆ | ೬೨ | ವ್ಯವಸಾಯ | ಬಳ್ಳಾರಿ |
| ೭೯ | ಮಹಾದೇವಗೌಡ | ಕಾರೇಕಲ್ | ೫೩ | ಕೃಷಿಕ | ಬಳ್ಳಾರಿ |
| ೮೦ | ಶರಣಬಸವನಗೌಡ | ಕಕ್ಕಬೇವಿನಹಳ್ಳಿ | ೪೯ | ಪೋಲಿಸ್ | ಬಳ್ಳಾರಿ |
| ೮೧ | ಚನ್ನಪ್ಪ | ಬಳ್ಳಾರಿ | ೪೭ | ಕೆ ಎ ಎಸ್ ಅಧಿಕಾರಿ | ಬಳ್ಳಾರಿ |

## ೪. ಲಾಳಗೊಂಡರ ವಂಶವೃಕ್ಷಗಳು

### ವಂಶವೃಕ್ಷ – ಅ. ಬಸಪ್ಪ ಒಬಣ್ಣನವರ್ ಹಂಪಾಪಟ್ಟಣ ಇವರ ವಂಶಾವಳಿ

ಶಾಲಿವಾನ ಶಕೆ ೭೮೦ ಹುಟ್ಟಿದ್ದು ಕಂಚಿನ ಪತ್ರ ನಕಲು ಇವರು ಗುರುಗಳು ಬಳ್ಳಾರಿ ಮರಿಸ್ವಾಮಿ ಮನೆದೇವರು ಬೆಟ(ಟ್ಟ)ದ ಮಲ್ಲಯ್ಯ ಇವರ ಪೂರ್ವಸ್ಥಳ ಗೋದಿಬನೂರಕ್ಕೆ ಬಂದರು ಅಲ್ಲಿಂದ ಪಂಚನ ಕೋಟೆಗೆ ಬಂದರು ನಂತರ ಲಿಂಗದಾಳಕ್ಕೆ ಬಂದರು ನಂತರ ಹಿರೇಹೊಳೆ ದಾಟಿ ತಿಮ್ಮಲಾಪುರಕ್ಕೆ ಬಂದು ಅಲ್ಲಿಂದ ಹಂಪಾಪಟ್ಟಣದಲ್ಲಿ ನೆಲೆವೂರಿದರು. (ಬಸಪ್ಪ ಇವರವಂಶಾವಳಿ ವಿವಿರ)






## ವಂಶವೃಕ್ಷ –ಆ. ಚನ್ನಬಸಪ್ಪ ಒಬಣ್ಣನವರ್ ಹಂಪಾಪಟ್ಟಣ ಇವರ ವಂಶಾವಳಿ

ಶಾಲಿವಾನ ಶಕೆ ೭೮೦ ಹುಟ್ಟಿದ್ದು ಕಂಚಿನ ಪತ್ರ ನಕಲು ಇವರು ಗುರುಗಳು ಬಳ್ಳಾರಿ ಮರಿಸ್ವಾಮಿ ಮನೆದೇವರು ಬೆಟದ ಮಲ್ಲಯ್ಯ ಇವರ ಪೂರ್ವಸ್ಥಳ ಗೋದಿಬನೂರಕ್ಕೆ ಬಂದರು ಅಲ್ಲಿಂದ ಪಂಚನ ಕೋಟೆಗೆ ಬಂದರು ನಂತರ ಲಿಂಗದಾಳಕ್ಕೆ ಬಂದರು ನಂತರ ಹಿರೇಹೊಳೆ ದಾಟಿ ತಿಮ್ಮಲಾಪುರಕ್ಕೆ ಬಂದು ಅಲ್ಲಿಂದ ಹಂಪಾಪಟ್ಟಣ(ಹಗರಿಬೊಮ್ಮನಹಳ್ಳಿ ತಾಲೂಕಿನ)ದಲ್ಲಿ ನೆಲೆವೂರಿದರು (ಚನ್ನಬಸಪ್ಪ ಇವರವಂಶಾವಳಿ ವಿವಿರ).



೪.೨ ಬಸವಣ್ಣೆಪ್ಪ (ರತ್ನಮ್ಮ)

ಪ್ರಭು ಕೊಟ್ರಮ್ಮ ಸರೋಜ ರೇಖಮ್ಮ ಲಕ್ಷ್ಮಮ್ಮ ರಾಧ ಸುಮ ಈರಣ್ಣ ಕೊಟ್ರೇಶ್ ಗಂಗಾಧರ

(ಜಯಮ್ಮ) (ಲಕ್ಷ್ಮಿರೆಡ್ಡಿ ) (ಗುರುಬಸಪ್ಪ) (ಎರೆಸ್ವಾಮಿಗೌಡ) (ದೊಡ್ಡನಗೌಡ) (ನಾಗರಾಜಗೌಡ) (ಮಂಜುನಾಥಗೌಡ) (ಲಲಿತ) (ಉಷಾ)

ನವೀನ ಕಾರ್ತಿಕ ಬಸವರಾಜ ನಾಗಮ್ಮ ಶಿವರಾಜ್ ಛಾಯ ವಿನುತ ಶ್ರೀಧರಗೌಡ ಸಪ್ರಿಯಾ ಮಂಜುಗೌಡ ದೀಪ್ತಿ ತೇಜಸ್ ತರುಣ ತನು

ಶಿವನಗೌಡ ವಿಜಯಗೌಡ ವನಿತ ಉಷಾ ಚಂದನ ಅಂಜನಾ.

೪.೩ ಕೊಟ್ರಪ್ಪ (ಪಾರ್ವತಮ್ಮ)

ಸರಸ್ವತಿ ಮಮತ ಆನಂದ ಅಕ್ಕಮಹಾದೇವಿ ಗಾಯತ್ರಿ ಶಾಂತ ಕವಿತ

ಮಲ್ಲನಗೌಡ ಪ್ರಕಾಶ್‌ಕಡೆಮನಿ (ಗಿರಿಜಾ) (ಎರಿಸ್ವಾಮಿಗೌಡ) (ಮಂಜುನಾಥಕಡೆಮನಿ) (ಪ್ರದೀಪ್‌ಕುಮಾರ್) (ಬಸವರಾಜ್)

ಬಿಂದು ಲಿಖಿತ ಅಮಿತ ಅಶ್ವಿನಿ ಅಕ್ಷತ ಮನೋಜ್ ಸೃಜನ್ ದೊಡ್ಡಬಸವ ನಂದಿನಿ ಮೇಘನಾ ಮಧುಶ್ರೀ ಜ್ಞಾನ್ ಗ್ರಂಥ ಸನ್ನಿಧಿ













**ವಂಶಾವಳಿ–೩. ದೊಡ್ಡಮಲ್ಲನಗೌಡ, ಸುಗ್ಗೇನಹಳ್ಳಿ ಇವರ ವಂಶಾವಳಿ.**

ಶಾಲಿವಾನ ಶಕೆ ೧೧೨೬ ಗುರುಗಳು ಹಲಬಾಳು ಪಟ್ಟದಸ್ವಾಮಿ ಗುರು ಮಠ ರಾಮದುರ್ಗ(ತಾಲ್ಲೂಕು). ಜಪ್ಪಲಕಟ್ಟೆ ಗುರುಸಿದ್ಧಯ್ಯ ತಾತನವರು. ಪೂರ್ವಿ ಸ್ಥಳ ಕೆಂಬಾವಿ ಗುಲ್ಬರ್ಗ ಜಿಲ್ಲೆ. ಒಟ್ಟು ೬೦ ಕೂರಿಗೆ ಜಮೀನು ಇದ್ದು ಡಿಲ್ಲಿಯ ಅಬ್ರಂಗ ಬಾದದ್‌ನವರು ೧೨ ವರ್ಷದ ಭೂಮಿ ಕಂದಾಯ ಮನೆ ಪಟ್ಟ ಪಾಳೆನಾಯಿಗೆ ೦.೨೫ ಪೈಸೆ ಕುದುರೆಗೆ ೦.೭೫ ಪೈಸೆ ಕೇಳಿದರು ಆವಾಗ್ಗೆ ನಾವು ಕೊಡುವುದಿಲ್ಲ ಎಂದು ಹೇಳಿ ಬಂದಂತೆ ೭ ಮಂದಿ ಮುತಾಲಿಖರನ್ನು ಕಡಿದು ಆ ಸ್ಥಳ ಬಿಟ್ಟು ಲಿಂಗದಹಳ್ಳಿ ಮುದ್ದಗಲ್ಲು ಹತ್ತಿರ ಅಲ್ಲಿಂದ ಹಾಲದಾಳ್ ಬಿಟ್ಟು ಕಂಪ್ಲಿಗೆ ಬಂದು, ಬಿಟ್ಟು ಸುಗ್ಗೇನಳ್ಳಿಗೆ ಬಂದು ಗೌಡಿಕಿ ಪಡೆದರು.

## ಮೂಲಪುರುಷ


ದೊಡ್ಡಮಲ್ಲನಗೌಡ
ಸಣ್ಣಮಲ್ಲನಗೌಡ
ಬಸವನಗೌಡ
ರುದ್ರನಗೌಡ
ಸಣ್ಣಮಲ್ಲನಗೌಡ
ತಿಪ್ಪನಗೌಡ
ಬಸವನಗೌಡ
ಮಲ್ಲನಗೌಡ
ದೊಡ್ಡರುದ್ರನಗೌಡ
ಸಣ್ಣರುದ್ರನಗೌಡ
ಮಲ್ಲನಗೌಡ
ತಿಪ್ಪನಗೌಡ
ರುದ್ರನಗೌಡ
ದೊಡ್ಡನಗೌಡ
ಬಸವನಗೌಡ
ಚಂದ್ರಮ್ಮ
ರೇಣುಕಮ್ಮ
ನೀಲಕಂಠನಗೌಡ
ಸುರೇಶಗೌಡ
ಎರೆಮ್ಮ
ರುದ್ರನಗೌಡ
ಪ್ರಿಯಾಂಕ
ಸಹನಾ
ತನುಷ್
ವಿಕಾಸ್

## ವಂಶಾವಳಿ–ಈ. ಸಿಂದಗೇರಿ ನೀಲಮ್ಮನ ಕಳ್ಳುಬಳ್ಳಿಯ ಸರನಾಡಗೌಡರು

ಶ್ರೀಯಾದಿ ವಂಶಾವಳಿ ಇವರು ಕುಲದಲ್ಲಿ ಲಾಳಗೊಂಡರು, ಗುರುಗಳು ಶೋಲಬಯ್ಯ ಸ್ವಾಮಿ, ದೇವರು ರಾರಾವಿ ಎಲ್ಲಮ್ಮ ಮತ್ತು ಕುರುಗೋಡು ದೊಡ್ಡ ಬಸವಣ್ಣ. ಪೂರ್ವಿಸ್ಥಳ ಬಿದ್ರಿಕೋಟಿ ಬಿಟ್ಟು ಚೆಂದವಾರಕ್ಕೆ ಬಂದರು. ಬಿಟ್ಟು ಸಿದ್ದಾಪುರಕ್ಕೆ ಬಂದರು. ಬಿಟ್ಟು ಕುರುಗೋಡಕ್ಕೆ ಬಂದರು. ಸರನಾಡ ಗೌಡ್ಕಿ ಪಡೆದರು.ಇವರ ಸಂತತಿಯಲ್ಲಿ ಮಹಾದೇವ ಗೌಡರ ಪುತ್ರರಾದ ೧) ದೊಡ್ಡತಿಮ್ಮನಗೌಡ (ಹೆಂಡತಿ ನೀಲಮ್ಮ) (೨) ಸಣ್ಣತಿಮ್ಮನಗೌಡ (ಹೆಂಡತಿ ಪಾರ್ವತಮ್ಮ) ಎಂಬುವವರು ಸಿಂದಿಗೇರಿಗೆ ಬಂದು ನೆಲೆಸಿರುತ್ತಾರೆ. ಅವರ ವಂಶಾವಳಿ ವಿವರ ಹೀಗಿದೆ:



## ವಂಶಾವಳಿ–೮. ಸಿಂದಗೇರಿ ನೀಲಮ್ಮನ ಕಳ್ಳುಬಳ್ಳಿಯ ಸರನಾಡಗೌಡರು

ಶ್ರೀಯಾದಿ ವಂಶಾವಳಿ ಇವರು ಕುಲದಲ್ಲಿ ಲಾಳಗೊಂಡರು, ಗುರುಗಳು ಶೋಲಬಯ್ಯ ಸ್ವಾಮಿ, ದೇವರು ರಾರಾವಿ ಎಲ್ಲಮ್ಮ ಮತ್ತು ಕುರುಗೋಡು ದೊಡ್ಡ ಬಸವಣ್ಣ. ಪೂರ್ವಿಸ್ಥಳ ಬಿದ್ರಿ ಕೋಟಿ ಬಿಟ್ಟು 'ಚೆಂದವಾರಕ್ಕೆ ಬಂದರು ಬಿಟ್ಟು ಸಿದ್ದಾಪುರಕ್ಕೆ ಬಂದರು. ಬಿಟ್ಟು ಕುರುಗೋಡಕ್ಕೆ ಬಂದರು. ಸರನಾಡ ಗೌಡ್ಕಿ ಪಡೆದರು. (ಶಿದ್ದನಗೌಡರ ಕುಟುಂಬದ ವಂಶಾವಳಿ).



## ವಂಶಾವಳಿ–೮೦. ಸಿಂದಿಗೇರಿ ನೀಲಮ್ಮನ ಕಳ್ಳುಬಳ್ಳಿಯ ಸರನಾಡಗೌಡರು

ಶ್ರೀಯಾದಿ ವಂಶಾವಳಿ ಇವರು ಕುಲದಲ್ಲಿ ಲಾಳಗೊಂಡರು, ಗುರುಗಳು ಶೋಲಬಯ್ಯ ಸ್ವಾಮಿ, ದೇವರು ರಾರಾವಿ ಎಲ್ಲಮ್ಮ ಮತ್ತು ಕುರುಗೋಡು ದೊಡ್ಡ ಬಸವಣ್ಣ. ಪೂರ್ವಿಸ್ಥಳ ಬಿದ್ರಿ ಕೋಟಿ ಬಿಟ್ಟು ಚೆಂದವಾರಕ್ಕೆ ಬಂದರು. ಬಿಟ್ಟು ಸಿದ್ದಾಪುರಕ್ಕೆ ಬಂದರು. ಬಿಟ್ಟು ಕುರುಗೋಡಕ್ಕೆ ಬಂದರು. ಸರನಾಡ ಗೌಡ್ಕಿ ಪಡೆದರು (ಚನ್ನಬಸವನಗೌಡರ ಕುಟುಂಬದ ವಂಶಾವಳಿ).



## ವಂಶಾವಳಿ-೫೩. ಸಿಂದಿಗೇರಿ ನೀಲಮ್ಮನ ಕಳ್ಳುಬಳ್ಳಿಯ ಗುಂಡಿಗನೂರು ಗ್ರಾಮದ ಗೌಡರು

ಶ್ರೀಯಾದಿ ವಂಶಾವಳಿ ಕಂಚಿನ ಪತ್ರ ನಕಲು ಶಾಲಿವಾನ ಶಕೆ ೭೮೦ ಇವರು ಕುಲದಲ್ಲಿ ಲಾಳಗೊಂಡರು. ಗುರುಗಳು ಶಿಂದಿಗೇರಿ ಸೋಲಬಯ್ಯಸ್ವಾಮಿ, ಮನಿದೇವರು ಕುರುಗೋಡು ಬಸಣ್ಣ ರಾರಾವಿ ಎಲ್ಲಮ್ಮ. ಪೂರ್ವಿಸ್ಥಳ ಚೆಂದಿ ಚೆಂದಾವರದ ಗೌಡರು. ಬಿಟ್ಟು ಸಿದ್ದಾಪುರಕ್ಕೆ ಬಂದರು. ಬಿಟ್ಟು ಕುರುಗೋಡಕ್ಕೆ ಬಂದರು. ಬಿಟ್ಟು ಶಿಂದಿಗೇರಿಗೆ ಬಂದರು ಗೌಡ್ಕಿ ಪಡೆದರು. ಬಿಟ್ಟು ಗುಂಡಿನೂರಿಗೆ ಬಂದ್ರು ಅಡ್ಡ ಹೆಸರು ಶಿಂದಿಗೇರಿ ಗೌಡರು. ಇವರ ವಂಶಾವಳಿ ವಿವರ.



## ವಂಶಾವಳಿ–ಎ. ಕುರುಕೋಡು ಮತ್ತು ಸಿಂಧಿಕೇರಿ ನೀಲಮ್ಮನ ಮಠದ ಪೂಜಾರಿಗಳ ವಂಶಾವಳಿ

ಶ್ರೀಯಾದಿ ವಂಶಾವಳಿ ಕಂಚಿನ ಪತ್ರ ನಕಲು ಶಾಲಿವಾನ ಶಖೆ ೭೮೦ ಇವರು ಬಗಿ ಮಳಿ ಬಗಿ ಉಜ್ಜನಿ ಸಿಂಹಾಸನ ದೇವರು ವೀರಭದ್ರ ದೇವರು ಪೂರ್ವಿ ಸ್ಥಳ ಕೆಂಬಾವಿ ಗೌಡ್ಕಿ ಬಿಟ್ಟು ವೂರಬಾವಿಗೆ ಬಂದರು ಬಿಟ್ಟು ಕುರುಗೋಡಕ್ಕೆ ಬಂದರು ನೀಲಮ್ಮನ ಮಠದಲ್ಲಿ ನಿಂತರು.



## ೫. ಪ್ರಶ್ನಾವಳಿ

## ಮಾಹಿತಿದಾರರ ಕೌಟುಂಬಿಕ ಹಿನ್ನಲೆ ಅಥವಾ ಕೌಟುಂಬಿಕ ಮಾಹಿತಿ

೧. ಹೆಸರು:

೨. ಲಿಂಗ:

೩. ವಯಸ್ಸು :

೪. ಬೆಡಗು :

೫. ಮನೆತನದ ಹೆಸರು :

೬. ವಾಸ ಸ್ಥಾನ :

೭. ವೈವಾಹಿಕ ಜೀವನ :

೮. ಶಿಕ್ಷಣ: ಎ) ಅನಕ್ಷರಸ್ಥ ಬಿ) ಪ್ರಾಥಮಿಕ ಸಿ) ಮಾಧ್ಯಮಿಕ ಡಿ) ಪದವಿ

೯. ಕುಟುಂಬದ ಉದ್ಯೋಗ

೧೦. ಪ್ರಸ್ತುತ ಉದ್ಯೋಗ

೧೧. ಈ ಸ್ಥಳದಲ್ಲಿಯ ವಾಸದ ಅವಧಿ

೧೨. ಎಲ್ಲಿಂದ ಮತ್ತು ಯಾವಾಗ ಈ ಸ್ಥಳಕ್ಕೆ ವಲಸೆ ಬಂದಿದ್ದೀರಾ?

೧೩. ವಾಸದ ಸ್ಥಳ ಯಾರದ್ದು?

೧೪. ಮನೆ ದೇವರು

೧೫. ನಿಮ್ಮ ಬೆಡಗುಗಳೆಷ್ಟು?

೧೬. ಪ್ರಸ್ತುತ ನಿಮ್ಮಲ್ಲಿ ಎಷ್ಟು ಬೆಡಗುಗಳು ಉಳಿದಿವೆ?

೧೭. ಲಾಳಗೊಂಡ ಎಂಬ ಪದದ ಕುರಿತು ನಿಮ್ಮ ಅಭಿಪ್ರಾಯ

೧೮. .ಪ್ರಮುಖ ಜಾತ್ರೆಗಳು,ಹಬ್ಬಗಳು

೧೯. ನೀವು ಇತರೆ ಸಮುದಾಯಕ್ಕೆ ವೈವಾಹಿಕ ಸಂಬಂಧಕ್ಕೆ ಅವಕಾಶ ನೀಡುವಿರಾ?

ಹೌದು ಇಲ್ಲ

೨೦. ನೀವು ಹೆಣ್ಣು ಮಕ್ಕಳು, ಗಂಡು ಮಕ್ಕಳಿಗೆ ನೀಡುವ ಸ್ವಾತಂತ್ರ್ಯವನ್ನು ಸಮಾನ ಅವಕಾಶಗಳನ್ನು ನೀಡುವಿರಾ? ಹೌದು ಇಲ್ಲ

೨೧. ರಾಜಕೀಯದಲ್ಲಿ ಪಾಲ್ಗೊಳ್ಳುವಿಕೆ

೨೨. ನಿಮ್ಮ ಮನೆ ಯಾವತರಹದ್ದು: ಬಾಡಿಗೆ/ಸ್ವಂತ

೨೩. ನಿಮಗೆ ಎಷ್ಟು ಭೂಮಿಇದೆ?

೨೪. ನೀವು ಯಾವ ಬೆಳೆ ಬೆಳೆಯುತ್ತೀರಿ?

೨೫. ನೀವು ಬೆಳೆಯುವ ಬೆಳೆ ನಿಮಗೆ ಸಾಕಾಗುತ್ತದೆಯೆ?

೨೬. ನಿಮ್ಮ ಮುಖ್ಯಆಹಾರಯಾವುದು?

೨೭. ನಿಮಗೆ ಬೇಸಿಗೆಯಲ್ಲಿ ನೀರಿನ ಸಮಸ್ಯೆಆಗುತ್ತದೆಯೇ?

೨೮. ಬೇಸಿಗೆಯಲ್ಲಿ ನೀರಿಗೆ ಏನು ವ್ಯವಸ್ಥೆ ಮಾಡಿಕೊಂಡಿದ್ದೀರಿ?

೨೯. ಬೇಸಿಗೆಯಲ್ಲಿ ನೀವು ಬೆಳೆ ಬೆಳೆಯುತ್ತೀರಾ?

೩೦. ಪಶು ಸಂಗೋಪನೆ ಬಗ್ಗೆ ಮಾಹಿತಿ ನೀಡಿ.

೩೧. ನಿಮಗೆ ಇಲ್ಲಿ ವರ್ಷ ಪೂರ್ತಿ ಕೆಲಸ ದೊರಕುತ್ತದೆಯೇ?

೩೨. ಇಲ್ಲದಿದ್ದರೆ ಉಳಿದ ದಿನದಲ್ಲಿಯಾವ ಕೆಲಸ ಮಡುತ್ತೀರಿ?

## ಸಾಮಾಜಿಕ/ಸಾಂಸ್ಕೃತಿಕ ಮಾಹಿತಿ

೧. ನಿಮ್ಮ ಸಮುದಾಯದಲ್ಲಿ ಸಂಘಟನೆ ಇದೆಯೇ? ಹೌದು ಇಲ್ಲ

೨. ನೀವು ಸಂಘಟಯ ಸದಸ್ಯತ್ವವನ್ನು ಹೊಂದಿರುವಿರಾ? ಹೌದು ಇಲ್ಲ

೩.ಲಾಳಗೊಂಡ ಎಂಬ ಪದ ಹೇಗೆ ಬಂದಿದೆ ನಿಮಗೇನಾದರು ತಿಳಿದಿದೆಯೇ? ಹೌದು ಇಲ್ಲ

೪. ನಿಮ್ಮ ಆರಾಧ್ಯ ದೈವ ಬಸವಣ್ಣನೋ ಅಥಾವ ನಂದಿಯೋ?

೫. ನೀವು ಬದಲಾಗುತ್ತಿರುವ ಸಮಾಜಕ್ಕೆ ತಕ್ಕಂತೆ ಬದಲಾಗಲು ಇಚ್ಚಿಸುವೀರಾ? ಹೌದು ಇಲ್ಲ

೬. ನೀವು ಆಧುನೀಕರಣವನ್ನು ಒಪ್ಪುವೀರಾ? ಹೌದು ಇಲ್ಲ

೭.ನೀವು ಯಾವ ಯಾವ ಹಬ್ಬಗಳನ್ನು ಆಚರಿಸುವಿರಿ ? ಹೌದು ಇಲ್ಲ

## ಆರ್ಥಿಕ ಸ್ಥಿತಿಗತಿ

೧. ಪಿತ್ರಾರ್ಜಿತ ಆಸ್ತಿ ಹೊಂದಿರುವಿರಾ? ಹೌದು ಇಲ್ಲ

೨. ನಿವೇಶನ ಹೊಂದಿರುವಿರಾ? ಸ್ವಂತದು ಸರ್ಕಾರದ್ದು

೩. ಮನೆ ಹೊಂದಿದ್ದೀರಾ? ಸ್ವಂತದ್ದು ಸರ್ಕಾರದ್ದು ಬಾಡಿಗೆ

೪. ಮನೆ ಸ್ವರೂಪ- ಗುಡಿಸಲು ಆರ್.ಸಿ.ಸಿ ಮನೆ ಹಂಚಿನಮನೆ

೫. ಪಶು ಸಂಪತ್ತು (ಸಂಖ್ಯೆಗಳಲ್ಲಿ)

ಎತ್ತು ______ ಹೋರಿ ______ ಆಕಳು ______ ಕರು ______

ಎಮ್ಮೆ ______ ಕೋಣ______ ಕುರಿ ______ ಮೇಕೆ ______

ಕೋಳಿ ______

೬. ಭೂ ಹಿಡುವಳಿ ಹೊಂದಿರುವೀರಾ? ಹೌದು ಇಲ್ಲ

೭. ಹೌದಾದರೆ ಎಷ್ಟು ಎಕರೆ?

೮. ಇತರೆ ಸೌಲಭ್ಯಗಳನ್ನು ಹೊಂದಿರುವೀರಾ?

ಪಡಿತರ ಚಿಟಿ ಗುರುತಿನ ಚೀಟಿ ಸೈಕಲ್ ಬೈಕ್

ಟಿವಿ ಮೊಬೈಲ್ ಇತರೆ

೯. ಮಹಿಳಾ ಸ್ವ-ಸಹಾಯ ಸಂಘಗಳಲ್ಲಿ ಸದಸ್ಯತ್ವ ಪಡೆದಿದ್ದೀರಾ? ಹೌದು ಇಲ್ಲ

೧೦. ಹೆಣ್ಣು ಮಕ್ಕಳು ಹೊರಗೆ ಹೋಗಿ ದುಡಿಯುವುದನ್ನು ಬೆಂಬಲಿಸುವಿರಾ? ಹೌದು ಇಲ್ಲ

೧೧., ಸರ್ಕಾರದ ಆರ್ಥಿಕ ಯೋಜನೆಗಳ ಲಾಭವನ್ನು ಪಡೆದಿದ್ದೀರಾ? ಹೌದು ಇಲ್ಲ

೧೨. ಬ್ಯಾಂಕುಗಳಿಂದ ಸಾಲ ಪಡೆದಿರುವಿರಾ? ಹೌದು ಇಲ್ಲ

೧೩. ಹಾಗಾದರೆ ಸಾಲ ಮರುಪಾವತಿಯನ್ನು ನಿಯಮಿತ ಅವಧಿಯಲ್ಲಿ ಮಾಡಿರುವಿರಾ?

ಹೌದು ಇಲ್ಲ

೧೪. ಸಾಲ ಮರುಪಾವತಿ ಮಾಡಲು ಸಮಸ್ಯೆಗಳನ್ನು ಎದುರಿಸುತ್ತಿರುವಿರಾ?

ಹೌದು ಇಲ್ಲ ಕೆಲವೊಮ್ಮೆ

೧೫. ನಿಮ್ಮ ಸಮುದಾಯದ ಆಧುನಿಕ ವೃತ್ತಿಗಳನ್ನು ಅಳವಡಿಸಿಕೊಂಡಿದೆಯೇ? ಹೌದು ಇಲ್ಲ

## ಧಾರ್ಮಿಕ ಮಾಹಿತಿ

೧) ನೀವು ಪೀಠಾರಾಧಕರೋ ಅಥವಾ ನಂದೀ ಆರಾಧಕರೋ? ಹೌದು ಇಲ್ಲ

೨) ಅನ್ಯ ದೇವರುಗಳ ಆರಾಧನೇ ಮಾಡುವಿರಾ? ಹೌದು ಇಲ್ಲ

೩) ಅನ್ಯ ಸಮುದಾಯದವರ ಜೊತೆ ವಿವಾಹ ಒಪ್ಪುವಿರಾ? ಹೌದು ಇಲ್ಲ

೪) ಲಿಂಗಾದಾರಣೆ ಕಡ್ಡಾಯವೋ? ಹೌದು ಇಲ್ಲ

## ರಾಜಕೀಯ ಮಾಹಿತಿ

೧. ನಿಮಗೆ ರಾಜಕೀಯ ಆಸಕ್ತಿ ಇದೆಯೇ? ಹೌದು ಇಲ್ಲ

೨. ಪ್ರತಿ ಚುನಾವಣೆಯಲ್ಲಿ ಆಸಕ್ತಿಯಿಂದ ಮತ ಚಲಾಯಿಸುವಿರಾ?

ಹೌದು ಇಲ್ಲ ಕೆಲವೊಮ್ಮೆ

೩. ನೀವು ಅಭ್ಯರ್ಥಿಗಳನ್ನು ಯಾವ ಆಧಾರದ ಮೇಲೆ ಆಯ್ಕೆ ಮಾಡುತ್ತಿರಾ?

೪. ನಿಮ್ಮ ಸಮುದಾಯ ಸಂಘಟನಾ ಸಮಸ್ಯೆಯನ್ನು ಎದುರಿಸುತ್ತಿದೆಯೇ? ಹೌದು ಇಲ್ಲ

೫. ಇನ್ನೇನಾದರು ಹೇಳಲು ಬಯಸುವಿರಾ?

ಅನುಬಂಧ: ೬.

## 6.1 Lala and lalagondas castes and 1881 imperial census of India

Imperial census 1881: operation and results in the presidency of madras by Lewis Mc Iver barrister of law madras civil servie.

Table 8 (a) and 8 (b) book number:

Tmilu caste name (p-106)

3015: lala-chingalpet, north Arcot, nilgiri districts

3016: lala- bhrama- madras

3017: lala-kayasth – chingalpet

3018: lala –maharatha – madras

Telagu cast name:

| | |
|---|---|
| Lala s/l no. 4010(p.272) | Ganjam, Krishna and north arcot district |
| Lala odde s. No.4011 (p.272) | Bellary district |
| Lalagonda 4012(p. 272) | Godawari, Kurnool, Bellary district |
| Lala gonad balija4013 (p.272) | Ganjam, Kurnool, Bellary district |
| Lalagonda-golla 4014(p.272) | Bellary district |
| Lalagonda-yappa lingadhari 4016(p.273) | Bellary district. |

Source: imperial causus -1881 provincial tables 8 b –coloumn-7.

ಅನುಬಂಧ: ೬.೨

List of Castes, Tribes, Communities whose population cannot be ascertained by justice L. G. Havanoor Commition Report Statement No.4 List: III (p-206)

| | |
|---|---|
| 200. Kontan | 201. Koralikor |
| 202. Kotaknnas | 203. Kornali |
| 204. Karia | 205. Kotigar |

206. Kotgi
207. Kubula
208. Kudalkar
209. Kudiga
210. Kudiyar
211. Kuist
212. Kujagara
213. Kuliga
214. Kuliga
215. Kullavan
216. Kumbal
217. Kumbanign
218. Kundar
219. Kundaligar
220. Kumkumgar
221. Kunjagaru
222. Kurn
223. Kuraim
224. Urup
225. Kuspn
226. Lalagundaru

**ಅನುಬಂಧ: ೬.೩**

(ಶ್ರೀಯುತ ಎಂ ಆರ್ ಪಂಪನಗೌಡ ಲಾಳಗೊಂಡ ಸಮಿತಿ, ಶಿರಗುಪ್ಪ, ಬಳ್ಳಾರಿ ಜಿಲ್ಲೆ, ಇವರ ಮುಖೇನ ಲಾಳಗೊಂಡರ ಕುರಿತು, ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ ಮನವಿ ಪತ್ರ.)

Governament of India New Delhi

To, 23.07.2008

The hon'ble justice

S.Rathnavelu pandian

President'

National backword class commission,

TRIKOOTA—Bhikaji Kama place

NEW DELHI – 1100066

Sir,

Sub : Inclusion of ' Laal Gond's – Lal Gond's(chikka)- china, hire-pedda and its equivalent words in the list of back word classes- requested-regarding.

Ref: your paper Notification dtd: 19.7.2008

*******

Gond's are the oldest and largest tribe of Dravidan origin there are atleast 60 sub-groups of them have been identified as tribes . Apart from these groups, Laal gonds are struggling for their existence and identification since 16.10.1982.

The gonds are also called as koyas, kuis since they are born from the mother earths, womb or KOKE and the present India is also referred as KOYANAADU in Gondi mythology (Gondwana Darshana, April 2008, p.no. 13-Ref.no.1). The Gonds migrated or derived from the country, place, Lajhia, Lanji Ghdh, LaanjiKote are also called as laal –Gonds. The laal lal words are treated as title and surnames of Gond-Dheria and Gond – Kolbhuta. Vide Annexure.3.

The references of Laal- Gonds: In Karnataka the Laal-Gonds are often called as people of nine i.e., nine people carrying and fighting for a needle. This proverb in Kannada is often used for this community to insult this caste. This proverb also signifies also the unique character of this community. in Gonds mythology and numorilogy number nine indicates poojari and power ful , village headman.(p. 35 and p. 42- dicepherment of Indus script in gondi by Dr .m.c kangali) The uniqueness of mine is that it is the biggest single digit and anything that leads to total 'Nine' is treated as powerful and holier one.

The laal. Lal is derived by a country, place where a demon laala was ruling. (Rev.f. kittel-kannada- Kannada disctniry, page 1359-60- easy submitted along with raichur district application by Dr. K.M. metri) . The laanji nandi is situated at Balaghat a district of Madhya Pradesh, Lanjigad, treated as the Naabhi (Fulcrum) centre of earth in Gond's mythology. this is the place where the king god of Gond's MAA-DEV, SHAMBHU SHEIKHS Shishyas, fllowers, Lingu's were taking bath in vengangaaa-

vengoda river after they have been blessed by the shambu- sheiku . This place wasreferred as place of teaching 'GONDI' Religion and language.( please refer p. 52- gondwana bhoomandal – M.B. sidam). Reference 6. The lanjighad is also associated with the gothra of 'takam' vide page 35 Gondwana jeev jagath ki –utpatti, patan aur punuruthan sangarsh ' by tirumayi chandralekha kangali ref'7. The laanji kote is also referred in the book by doctor acharya mothi ravan kangalji vide p-34 of gondwana kote darshan. Ref.8.

Coming to Karnataka there are several villages named after gonds, laal Gond's which have been listed by doctor K.M.Methry – head of trible studies in kannada university –hampi (the entair research paper is enclosed with the application submitted by raichur district association). The royal emblem which was bestowed by shambhu – sheikh- mahadev- shiva to his followers is seen on the hill top near hampi called a place called as Demons. The emblem is dating back to 500 BC and its replica is found on many pillars of hampi monuments. This is self explanatory that the se 'Gond's' have existed since from long back in this part of country and this part was also part of the 'Gondwana land' as explained by Dr. Acharya , mothi ravan kangali ji in his inaugural address speech to the 13 th Gondi sahithya sammellan held jointly by hampi kannada university , central institute of Indian languages , C.I.I.L. , Department of kannada culture, Gondawana gondi sahitya parishath, Nagpur and BIDAR District Gond employees Association , Bidar from March , 21-23 of 2008 I have submitted a detailed report on my community at the sammellana, a copy of which is also submitted here with which is in Hindi. During my speech at sammellana on 22.3.08, I have deciphered the word HARAPPAN, HADAPPAN civilization as follows in Kannada.

HARA+APPA+ANN = HARAPPAN

HADEDA+APPA+ANN = HADAPPAN, themeaning

Of these words in English are as follows:-

The first word means "tell hara as your father and the second one mean tell a man as your father who has given birth to you. These both words are also referred to GONDS KING GOD PERSA-PEN, FERON, SHAMBHU SHEIKH, and MAADEV (MAHADEV). After my explanation, the pleasd dr. M.C. kangaliji has unconditionally authorised me to transalate and publish his famous book. " the Decipherment of Indus script through the gondi Language into kannada as i have explained how the kannada and other south Indian languages have been drived , influenced by this dravidan language and Indus script is the pictorial type of writing.

REQUEST. PRAY: Presently our cimmunity's condition is serious as such 92-96% of this community is residing in villages. (Please refer Dr. K.M. Methri head trible studies –hampi Kannada University). And they are dependent on lands only.

Due to socio-economic political, problems the community is not in a position to survive without the help of reservation, which is a long due. Hence I urge pray and beg to include this community in the list of backward classes as their equivalent community; 'lingadari koya' is plased in the S.T. LIST of andra Pradesh. The 'koya' and 'Gond' are theame words used for Gonds. The words must Beas follows:-

Inclusion of 'Laaal Gond's.- Lal- Gond's (chikka) –chinna, HIRE-PEDDA and its equivalent words in the list of backward classes.

Thanking you,

Yours faithfully,

(M R PAMPANAGOWDA)

Camp: Bangalore. H.no.259,

Proudadevaraya Nilaya,

shashtri Nagara, Ballari - 583103

# ಅನುಬಂಧ: ೬.೪. ಗಂಗಡಿಕಾರ ಒಕ್ಕಲಿಗರು

ಒಕ್ಕಲಿಗ ಜನಾಂಗದ ಸಾಮಾಜಿಕ ಸ್ಥಿತಿಗತಿ ಮತ್ತು ಸಂಸ್ಕೃತಿಯೆಂಬ ಲೇಖನದಲ್ಲಿ ಕೆ ಬೈರಪ್ಪ ಅವರು ೬೨ ಒಳಪಂಗಡಗಳಿರುವುದಾಗಿ ಹೇಳಿದ್ದಾರೆ. ಹ ಕ ರಾಜೇಗೌಡರ ಅಭಿಪ್ರಾಯದಲ್ಲಿ "ಕುಲವೊಂದು ೧೮ ಜಾತಿ " ಆದ್ದರಿಂದ ಒಕ್ಕಲಿಗರಲ್ಲಿ ೧೮ ಒಳಪಂಗಡಗಳಿವೆ ಎನ್ನುತ್ತಾರೆ ಬಹುಶ: ಇಷ್ಟೆಲ್ಲಾ ಗೊಂದಲಗಳಿಗೆ ಕಾರಣ ಕೃಷಿಯನ್ನು ಪ್ರಧಾನ ವೃತ್ತಿಯನ್ನಾಗಿ ಅವಲಂಬಿಸಿದ ಜನಸಮುದಾಯ ಕಾಲಾನುಕ್ರಮದಲ್ಲಿ ಪರಿವರ್ತನೆಗೆ ಒಳಗಾಗಿ ಧಾರ್ಮಿಕ ಸಿದ್ದಾಂತವು ಇದಕ್ಕೆ ಪ್ರಭಲ ಕಾರಣವಾಗಿರಬೇಕು ಶೈವ ವೈಷ್ಣವ ಮತ್ತು ಜೈನಧರ್ಮದ ಪ್ರಭಾವದಿಂದ ಅರಸರುಗಳು ಅನುಸರಿಸುತ್ತಿದ್ದ ಧರ್ಮವನ್ನು ಆಡಳಿತದ ಒತ್ತಡದಿಂದಾಗಿ ಓಳಪಂಗಡಗಳು ಹುಟ್ಟಿಕೊಂಡಿರಬಹುದು. ಬಸವಣ್ಣನವರ ಕಾಲದಲ್ಲಾದ ಸಾಮಾಜಿಕ ಬದಲಾವಣೆಗೆ ಸಾಧು ಒಕ್ಕಲಿಗರು ನೊಣಬ ಒಕ್ಕಲಿಗರು ಈ ಗುಂಪಿನಿಂದಲೇ ಸಿಡಿದು ಬೇರೆಯಾಗಿರ ಬಹುದು ರಾಮಾನುಜಾಚಾರ್ಯರ ಪ್ರಭಾವಕ್ಕೆ ಒಳಗಾಗಿ ದಾಸೋಹ ಒಕ್ಕಲಿಗರಾದರು ಜೈನಧರ್ಮದ ಪ್ರಭಾವಕ್ಕೊಳಗಾಗಿ 'ಜೈನ ಎಡೆ ಆಚರಿಸಿ ನಾಮಧಾರಿಗಳಾಗಿದ್ದು ಕಷ್ಟವಾಗುತ್ತದೆ. ಬೌಗೋಳಿಕ ಸನ್ನಿವೇಶವು ಜನಸಂಪರ್ಕದ ಅಂತರವನ್ನುಂಟು ಮಾಡಿ ಒಳ ಪಂಗಡಗಳ ಹುಟ್ಟಿಗೆ ಕಾರಣವಾಗಿರಬಹುದು ಬೌಗೋಳಿಕ ಹಿನ್ನೆಲೆಯಿಂದ ಒಕ್ಕಲಿಗರನ್ನು ಸ್ಥೂಲವಾಗಿ ಮೂರುಭಾಗ ಮಾಡಬಹುದು. ೧) ಬಯಲು ಸೀಮೆ ಒಕ್ಕಲಿಗರು ೨) ಮಲೆನಾಡ ಒಕ್ಕಲಿಗರು ೩) ಕರಾವಳಿಯ ಒಕ್ಕಲಿಗರು.

ಒಕ್ಕಲಿಗರು ಮತ್ತು ಸಂಪ್ರದಾಯ ಕೃತಿಯ ಲೇಖಕ ಮಾಕೋನಹಳ್ಳಿ ದೊಡ್ಡಪ್ಪಗೌಡರು ಮೊದಲ ಪುಟದಲ್ಲಿ ಒಕ್ಕಲಿಗರ ಒಳಪಂಗಡಗಳ ಸಂಖ್ಯೆ ೬೫ ಎಂದು ಹೇಳಿ ಕೊನೆಯ ಪುಟದಲ್ಲಿ ೬೩ ಎಂದಿದ್ದಾರೆ.

| | | | |
|---|---|---|---|
| ೧) ಗಂಗಡಿಕಾರ | ೨) ಕೋಪಿ | ೩) ಉಪ್ಪಿನ ಕೊಳಗ | ೪) ಸ್ವಲ್ಪ |
| ೫) ಹೇಮರೆಡ್ಡಿ | ೬) ಮೋತಾಟಿ | ೭) ಜೋತ್ರದವ | ೮) ಆರ್ ವೇದಿಗ |
| ೯) ಅಜಮಾರ | ೧೦) ಮಾಳವ | ೧೧) ಮಾಣೀಗ | ೧೨) ನಾಮಧಾರಿ |
| ೧೩) ತುಳುವ | ೧೪) ಅಂಗಲೀಕ | ೧೫) ಕುಳಬೆಡಗ | ೧೬) ಪಾಂಡರು |
| ೧೭) ಬೋಗರು | ೧೮) ಮಲೆಗೌಡ | ೧೯) ನಾಡುವಾರ್ | ೨೦) ಬಂಡೇರು |
| ೨೧) ಕುಶಲೀ | ೨೨) ರಾಜಪುರಿ | ೨೩) ಹನಮ | ೨೪) ಸಿಂಗದವರು |
| ೨೫) ಏಳು ಮನೆಯವರು | ೨೬) ಎಳನಾಟಿ | ೨೭) ಕೋದಾಟಿ | ೨೮) ಪಾಕಿನಾಟರೆಡ್ಡಿ |
| ೨೯) ಯತ್ತಿನ ಕುಂಚಟಿಗ | ೩೦) ತಂಡಗೌಡ | ೩೧) ಮಡ್ಡರು | ೩೨) ಮೇಘದಾ |
| ೩೩) ಹುಲುಕಾಲವರೆ | ೩೪) ದಾಸವಂಟಿಗೆ | ೩೫) ರೊಡ್ಡಗಾರು | ೩೬) ಆಲಮಟ್ಟಿ |

| | | | |
|---|---|---|---|
| ೩೭) ಗಂಪಲಕಮ್ಮೇರು | ೩೮) ಗೋಸಂಗಿ | ೩೯) ಮುಸುಕು | ೪೦) ಕಂಬವಳ್ಳಿ |
| ೪೧) ಮೊರಸು | ೪೨) ಸುಕರ ಜಾತಿ | ೪೩) ಸಂಣ ಕೋಡು | ೪೪) ಗಂಗೀಒಕ್ಕಲಿಗ |
| ೪೫) ಹಳ್ಳೀಕಾರ | ೪೬) ಹಳೇಒಕ್ಕಲು | ೪೭) ಕಾಮ ಒಕ್ಕಲು | ೪೮) ಕುಂಚಟಿಗ |
| ೪೯) ಲಾಲಗುಂಡ | ೫೦) ದೇವನ ಮಕ್ಕಳು | ೫೧) ನೊಣಬ | ೫೨) ರೆಡ್ಡಿ |
| ೫೩) ಸಮುದ್ರಕುಲ | ೫೪) ಕಮ್ಮೆವಾರು | ೫೫ ರಿಂದ ೬೩ನ್ನು ನಮೂದಿಸಿರುವುದಿಲ್ಲ. | |

**(ನಂದಿವೆಂಕಟೇಶ್‌ಮೂರ್ತಿ, ಒಕ್ಕಲಿಗರ ಇತಿಹಾಸ ದರ್ಶನ, ೩೨ ಪಂಗಡಗಳೆಂದು ಹೇಳಿದ್ದಾರೆ).**

| | | | |
|---|---|---|---|
| ೧) ಗಂಗಡಿಕಾರ | ೨) ಮರಸು | ೩) ಮುಸುಕು | ೪) ರೆಡ್ಡಿ |
| ೫) ಕುಂಚಟಿಗ | ೬) ಹಳ್ಳಿಕಾರ | ೭) ನೊಣಬ | ೮) ಸರ್ಪ |
| ೯) ಚೋಳ | ೧೦) ಸೆಟ್ಟಿಗಾರ | ೧೧) ಏಳಯಮನೆ | ೧೨) ಭಂಟರು |
| ೧೩) ಮಲೆಗೌಡ | ೧೪) ಉಪ್ಪಿನಕೊಳಗ | ೧೫) ಹೇಮರೆಡ್ಡಿ | ೧೬) ಸ್ವಲ್ಪ |
| ೧೭) ಮೋಡಾಟು | ೧೮) ಜೋತ್ರದವರು | ೧೯) ಅರವೇದಿಗ | ೨೦) ಅಜಮಾರ |
| ೨೧) ಮಾಳವ | ೨೨) ಮಾಣಗ | ೨೩) ನಾಮಧಾರಿ | ೨೪) ತುಳವ |
| ೨೫) ಅಂಗಲೀಕ | ೨೬) ಕುಳಿಬೆಡಗ | ೨೭) ಪಾಂಡರು | ೨೮) ಬೊಗ್ಗರು |
| ೨೯) ನಾಡವಾರು | ೩೦) ಬಂಡೇರು | ೩೧) ಕುಶಲಿ | ೩೨) ರಾಜಪೂ |
| ೩೩) ಅನುಮ | ೩೪) ಸಿಂಗರು | ೩೫) ಏಳನಾಟೆ | ೩೬) ಕೋದಾಟು |
| ೩೭) ಕಾಕಿನಾಟ | ೩೮) ಎತ್ತನಕುಂಚಟಿಗ | ೩೯) ತಂಡಗೌಡ | ೪೦) ಮಡ್ಡರು |
| ೪೧) ಮೊಗ್ಗದವರು | ೪೨) ಹೂಕಾವರು | ೪೩) ದಾಸವಂಟಿಕೆ | ೪೪) ದೊಡ್ಡಗಾಂಟ |
| ೪೫) ಆಲಮಟ್ಟೆ | ೪೬) ಗಂಪಲ | ೪೭) ಕಮ್ಮೇರು | ೪೮) ಗೋಸಂಗಿ |
| ೪೯) ಕಪವಳ್ಳಿ | ೫೦) ಶಂಕಜಾತಿ | ೫೧) ಸಣ್ಣಗೊಂಡಿ | ೫೨) ಗಂಗಿ |
| ೫೩) ಹಳೇವಕ್ಕಲು | ೫೪) ವಾಲಿಗೂಡ | ೫೫) ದೇವನ ಮಕ್ಕಳು | ೫೬) ಸಮುದ್ರಕುಲ |
| ೫೭) ಕಮ್ಮನಾಡು | ೫೮) ಒಕ್ಕಲಿಗ ರೆಡ್ಡಿ | ೫೯) ಬೆಳ್ಳಿ ಒಕ್ಕಲಿಗ | ೬೦) ಗೌಂಡರು |
| ೬೧) ಹಾಲುಒಕ್ಕಲಿಗ | ೬೨) ಕಾಮ ಒಕ್ಕಲು. | | |

ಈ ಎಲ್ಲಾ ಒಳಪಂಗಡಗಳ ಪಟ್ಟಿಗಳಲ್ಲಿರುವ ಸಂಖ್ಯೆ ವ್ಯತ್ಯಾಸವಷ್ಟೆ ಅಲ್ಲ ಹೆಸರುಗಳಲ್ಲಿಯೂ ಕ್ರ. ಸಂ ೪೯: ಲಾಲಗುಂಡ(ನಲ್ಲೂರು ಪ್ರಸಾದ್, "ಗಂಗಧಿಕಾರ-ಒಕ್ಕಲಿಗರು, ೨೦೦೧ ಪುಟ ೪೨-೪೩).

**ಕುಡಿ ಒಕ್ಕಲಿಗರ ಮೂಲ**

**ಎಂ ಆರ್ ಪಂಪನಗೌಡ**

ಕುಡಿ ಒಕ್ಕಲಿಗರು ಗೊಂಡ್ವಾನ್ ಲ್ಯಾಂಡಿನ ಮೂಲಿಗ ಬುಡಕಟ್ಟಿನ ಗೊಂಡರ ಪ್ರಮುಖ ಕವಲು. ಗೌಡ ಶಬ್ದವು 'ಗೊಂಡ ಶಬ್ದದಿಂದ ಉತ್ಪತ್ತಿಯಾಗಿದೆ.' 'ಗೊಂಡ್ವಾನ್ ಲ್ಯಾಂಡಿನ' ರಾಜ ಸಂಭೋಶೇಖರ ಅರ್ಥಾತ್ ಪಶುಪತಿ, ಇವನು ಮಾನವ ಜನಾಂಗವನ್ನು ೭೫೦ ಗೋತ್ರಗಳಲ್ಲಿ ವಿಂಗಡಿಸಿದನು. ಇದು ಮೊದಲು ಎರಡು ಕವಲುಗಳಾಗಿ ಒಡೆಯಿತು. ಒಂದು ಹಾಲುಮತ ಇನ್ನೊಂದು ಜಲಮತ. ಈ ಎರಡೂ ಮತಗಳು ನಂತರ ಅನೇಕ ಉಪ ಮತಗಳಾಗಿ, ಜಾತಿಗಳಾಗಿ ವಿಂಗಡಣೆಯಾದವು. ಇವುಗಳು ಮುಖ್ಯವಾಗಿ ಬೇಸಾಯವನ್ನು ಅವಲಂಬಿಸಿದಾಗ, ಕೃಷಿಕ ಸಂಸ್ಕೃತಿಗೆ ವಾಲಿದಾಗ ವೃತ್ತಿಪರ ಗುಂಪುಗಳಾಗಿ ನಂತರ ಜಾತಿ, ಉಪಜಾತಿ, ಧರ್ಮಗಳಲ್ಲಿ ವಿಂಗಡಣೆಯಾಗುತ್ತಾ ಸಾಗಿದವು ಹಾಗೆ ವಿಂಗಡಣೆಯಾದ ಮುಖ್ಯ ಕೃಷಿಕ ಸಂಸ್ಕೃತಿಯ ಕವಲುಗಳಲ್ಲಿ 'ಕುಡಿಒಕ್ಕಲಿಗ' ಸಮುದಾಯವು ಒಂದು. ಇವರ ಹತ್ತಿರದ ಸಮಾಜವು ಲಾಳಗೊಂಡರು. ಲಾಳಗೊಂಡರು ಲಾಕುಳೀಸ, ಪಾಶುಪತ ಪರಂಪರೆಯನ್ನು ಅನುಸರಿಸಿದವರು. ಇವರು ದಕ್ಷಿಣಭಾರತದ ಅನೇಕ ರಾಜವಂಶಗಳಿಗೆ ಮೂಲಿಗರು. 'ಕುಡಿ ಎಂದರೆ ಬಳ್ಳಿಯ ಹಾಗೆ. ಅನೇಕ ಕುಡಿಗಳನ್ನು ಬಳಿಗಳನ್ನು ಹೊಂದಿರುವರು ಎಂದರ್ಥ. 'ಕುಡಿಗಳು ಶಬ್ದಕ್ಕೆ ಪಲ್ಲವಿಸು ಎಂಬ ಅರ್ಥವು ಬರುತ್ತದೆ. ಇವರು 'ಪಲ್ಲವರು' ಸಹ ಹೌದು. ಪಲ್ಲವರನ್ನು ನಾಣ್ಯಗಳಲ್ಲಿ ಮಲೇಂದು ಗೊಂಡರೆಂದು ಹೇಳಲಾಗಿದೆ. ದಕ್ಷಿಣಭಾರತದ ರಾಜವಂಶಗಳಾದ ಚಾಲುಕ್ಯರು, ಹೊಯ್ಸಳರು, ಪಾಂಡ್ಯರು, ಚೋಳರು, ತಮ್ಮ ನಾಣ್ಯಗಳಲ್ಲಿ ವಿವಿಧ ಗೊಂಡ ಶಬ್ದಗಳನ್ನು ಬಿರುದು ಬಾವಾಲಿಗಳನ್ನು ಧರಿಸಿದ ಬಗ್ಗೆ ರಾಯಲ್ ಏಷಿಯಾಟಿಕ್ ಸೊಸೈಟಿ, ಕಲ್ಕತ್ತಾದಲ್ಲಿಯ ನಾಣ್ಯಗಳನ್ನು ಉಲ್ಲೇಖಿಸಿ ಮಧ್ಯಭಾರತದ ಗೊಂಡ ಜನಾಂಗದ ಡಾ ಆಚಾರ್ಯ ಮೋತಿರಾವಣ ಛತಿರಾಮ್‌ಕಂಗಾಲಿಯವರು ಬೀದರದಲ್ಲಿ ಜರುಗಿದ ೧೫ನೇ ಗೊಂಡೀ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಭಾಷಣದಲ್ಲಿ ದಾಖಲಿಸಿದ್ದಾರೆ. ಲಾಕುಳೀಸ ಪರಂಪರೆಯು ಲಾಣ- ಲಾಳ-ಲಾಳಕುಳ ಶಬ್ದದಿಂದ ಬಂದಿದ್ದು ಲಾಣಗಡವು, -ಲಾಳಗಡವು ಮಧ್ಯಪ್ರದೇಶದ ಬಾಲ್ಘಾಟ್ ಜಿಲ್ಲೆಯಲ್ಲಿದ್ದು, ಗೊಂಡ್ವಾನದ ಸಾಂಸ್ಕೃತಿಕ ಕೇಂದ ಹಾಗೂ ೩೩ ಕೋಟಿ ದೇವತೆಗಳ ದೀಕ್ಷಾ ಭೂಮಿ. ಲಾಣ-ಲಾಳಗಡದಿಂದ ದೀಕ್ಷಿತರಾಗಿ ಹೊರಬಂದವರೇ 'ಲಾಕುಳೀಸ' ಪರಂಪರೆಯ ಶಿವನ ಆರಾಧಕರು. ಲಾಕುಳ ಎಂದರೆ ಯೋಗದಂಡ ಇವರ ಮೂಲ ಗುರುವಿನ ಸಮಾದಿ ಹಿಮವತ್- ಕೇದಾರದಲ್ಲಿದ್ದು, ದಕ್ಷಿಣಭಾರತದ ಎಲ್ಲಾ ವಂಶಗಳು 'ಲಕುಳೀಶ' ಪರಂಪರೆಯಿಂದ ಸ್ಪೂರ್ತಿಪಡೆದಿವೆ. ಗೊಂಡಿ ಭಾಷೆಯಲ್ಲಿ ಲಾಕುಳ ಎಂದರೆ ಕೋಲಾ-ಬಡಿಗೆ-ಯೋಗ ದಂಡವಾಗುತ್ತದೆ. ಪ್ರಸ್ತುತ ದಕ್ಷಿಣಭಾರತದಲ್ಲಿರುವ ಲಾಳಗೊಂಡರು, ಕುಡಿಯರು (ಕುಡಿಒಕ್ಕಲಿಗರು) ಹಾಗೂ ಲೊಳಂಬರು ಇವರ ಹತ್ತಿರದ ಸಮುದಾಯಗಳು, ಗೊಂಡ ಮೂಲವಾಗಿದ್ದು, ಕ್ರಿ ಶ ೧೨ ನೇ ಶತಮಾನದಲ್ಲಿ ಕುಡಿಯರ ಕುಲತಿಲಕ ಸಿದ್ಧರಾಮೇಶ್ವರರ ಪ್ರಭಾವದಿಂದ ವಿಶ್ವಗುರು ಬಸವಣ್ಣನವ

ಅನುಯಾಯಿಗಳಾಗಿದ್ದಾರೆ. ಸಿದ್ದರಾಮೇಶ್ವರರವರು ಲಿಂಗಾಯತ ಧಾರ್ಮಿಕ ಪರಂಪರೆಯಲ್ಲಿ ಷಠ್ ಗಣಾದೀಶರಲ್ಲಿ ಒಬ್ಬರಾಗಿ ಖ್ಯಾತಿವೆತ್ತವರಾಗಿದ್ದಾರೆ. ಮಣ್ಣಿನಿಂದ ಮಡಿಕೆಯಾದ ರೀತಿ ಇವರು ಗೊಂಡರಿಂದ ಲಿಂಗಾಯತರಾಗಿದ್ದು ತಿರುಗಿ ಮಡಿಕೆ ಒಡೆದು ಹೇಗೆ ಮಣ್ಣಾಗಲು ಬರುವುದಿಲ್ಲವೋ, ಹಾಗೆಯೇ ತಮ್ಮ ಧಾರ್ಮಿಕ ಸಂಸ್ಕೃತಿಯನ್ನು ಬಿಡಬಾರದೆಂದು ಶ್ರೀ ಸಿದ್ಧರಾಮೇಶ್ವರರ ಹೆಸರಲ್ಲಿ ಹೊಂದುಗೂಡಲು ಸಾಕಷ್ಟು ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಕಾರಣಗಳಿದ್ದು, ಅಖಿಲಭಾರತ ವೀರಶೈವ-ಲಿಂಗಾಯತ ಮಹಾಸಭಾದ ಸಂಸ್ಥಾಪಕರು ದಾನಿಗಳೂ ಇವರೇ (ಶಿರಸಂಗೀ ಲಿಂಗರಾಜ್‌ದೇಸಾಯಿ) ಆಗಿದ್ದು, ಇವರ ಕಳ್ಳುಬಳ್ಳಿಯ ಸಿಂದಿಗೇರಿ ನೀಲಮ್ಮನವರು (ಕದಡಿ ನೀಲಮ್ಮನವರು-೮೦೦ ಮಠಗಳ ಅಧಿಕಾರಿ) ಮಾಡಿದ ಧಾರ್ಮಿಕ ಕ್ರಾಂತಿ ನೆನಪಿಸಿಕೊಂಡು ಸಾಗಲು ವಿನಂತಿಸಲಾಗಿದೆ, ಕರ್ನಾಟಕದಲ್ಲಿ ಬಹು ಸಂಖ್ಯಾತರಾದ ಲಿಂಗಾಯತರ ಜೊತೆ ಊಟ, ರಕ್ತ ಸಂಬಂಧವಿದ್ದು ಅದನ್ನು ಪುನರ್ ಪರಿಶೀಲಿಸಿ ಹೆಜ್ಜೆ ಇಡಲು ಮನವಿ. ಈಗಲೂ ಗ್ರಾಮೀಣ ಭಾಗದಲ್ಲಿ ಕಡುಒಕ್ಕಲಿಗ ಹೆಣ್ಣು ಮಕ್ಕಳು ತಮ್ಮ ಗಂಡಂದಿರ ಹೆಸರು ಹೇಳುವಾಗ' ಗೊಂಡ ಶಬ್ದ ಬಳಸುತ್ತಾರೆ. ಇದು ಇವರ ಗೊಂಡ ಮೂಲವನ್ನು ತೋರಿಸುತ್ತದೆ.

**ಅನುಬಂಧ:೬.೬. ಕುರುಗೋಡು ನೀಲಮ್ಮನ ಸ್ತೋತ್ರ**

ಆ ದಿತೀರ್ಥವೇದಕಮಲ::ನೀಲಮ್ಮ::ನೀಲಮ್ಮ
ಪಾದಕಮಲಾವ ಕಂಡವರಿಲ್ಲ ನೀಲಮ್ಮ
ಹುಟ್ಟಿಬಂದೆ ಕುರುಗೋಡೊಳಗೆ ನೀಲಮ್ಮ
ಪಟ್ಟೆ ಮಂಚ ಪದವಿ ಪಡೆದೆ ನೀಲಮ್ಮ ::೧::

ವಾಕ್ಯದಲ್ಲಿ ನೆನೆದೆ ನೀಲಮ್ಮ
ಭೂಲೋಕಕ್ಕೆ ಪಾವಡಗೆಲುದೆ ನೀಲಮ್ಮ
ಜಂಗಮರ ಪ್ರಾಣ ಲಿಂಗವೆ ನೀಲಮ್ಮ
ನಮ್ಮ ಸಂಗನ ಶರಣರ ಶರಣೆ ನೀಲಮ್ಮ ::೨::

ಹುಟ್ಟುಗೌಡರ ಮಗಳು ಕಾಣೆ ನೀಲಮ್ಮ
ನೀನು ಕುರುಗೋಡುಕಟ್ಟೆ ಬಸವಗೊಲಿದೆ ಕಾಣೆ ನೀಲಮ್ಮ
ಆದಿ ಗೌಡರ ಮಗಳು ಕಾಣೆನೀಲಮ್ಮ
ಬಸವಗೊಲಿದೆ: ಕಾಣೆ ನೀಲಮ್ಮ ::೩::

ಏಳುವರುಷದ ಮಗಳು ಕಾಣೆ ನೀಲಮ್ಮ
ನೀನು ಬಚ್ಚಲೊಳಗೆ ಮಾಯವಾದೆ ನೀಲಮ್ಮ:
ಭವಭಕ್ತಿಯಿಂದವ್ವಯ್ಯ ನೀಲಮ್ಮ
ನೀನು ಧೃಡವುಳ್ಳ ಶರಣೆ ಕಾಣೆ ನೀಲಮ್ಮ ::೪::

ಹಡೆದ ತಾಯಿಗೆ ಹಗೆದಲ್ಲೆ ನೀಲಮ್ಮ
ನೀನು ತಾಯ ಮರೆತು ಬಿಟ್ಟು ನೀಲಮ್ಮ
ಒಡಹುಟ್ಟಿದಣ್ಣಗಳಿಗೆ ನೀಲಮ್ಮ
ನೀನು ಕಿಚ್ಚನಿಕ್ಕಿ ಹೋದಂತೆ ಕಾಣೆ ನೀಲಮ್ಮ ::೫::
ತಟ್ಟಿ ಮರೆಯಲಿ ಕುಳಿತುಕೊಂಡೆ ನೀನು
ದಿಟ್ಟ ಪವಾಡ ಮೆರೆದೆ ನೀಲಮ್ಮ
ಸಂಗನ ಬಸವನ ಶರಣೆ ನೀಲಮ್ಮ ನೀನು
ಲೋಕಕ್ಕೆ ಪವಾಡ ಮೆರೆದೆ ನೀಲಮ್ಮ ::೬::

(ಈ ಸ್ತೋತ್ರವನ್ನು ಕುರುಗೋಡು ನೀಲಮ್ಮನ ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಪುಸ್ತಕದಿಂದ ಪಡೆಯಲಾಗಿದೆ)

(ಈ ಮುಂದಿನ ಪದವು ಕುರುಗೋಡು ನೀಲಮ್ಮನ ಪದವಾಗಿದೆ)

ಆ ದಿತೀರ್ಥವೇದಕಮಲ::ನೀಲಮ್ಮ::ನೀಲಮ್ಮ
ಪಾದ ಕಮಲಾವ ಕಂಡ
ಹರಗಿನ ಹೊಲದಾಗ ಹವಳ ಸೋಲಿಟ್ಟಂತೆ
ಹರದೇ ಪೋರಮ್ಮ ಬಸುರಾಗೆ ::ಸೋಬಾನಾವೇ::

ಹರದೇನೇ ಪೋರಮ್ಮ ಬಸುರಾಗೆ ಹಡದಾಳೆ
ಕುರುಗೋಡಿಗೊಬ್ಬ ಶರಣೆನ್ಯಾ ::೨::

ಬಿತ್ತಿದ ಹೊಲದಾಗೆ ಮುತ್ತೇ ಸೋಲಿಟ್ಟಂತೆ
ಮಿತ್ರೆ ಪೋರಮ್ಮ ಬಸುರಾಗೇ ::೩::

ಮಿತ್ರೆ ನೀಪೋರಮ್ಮ ಬಸುರಾಗೇ ಹಡದಾಳೋ
ದಿಕ್ಕಿಗೇ ಒಬ್ಬೋ ಶರಣೇನಾ ::೪::

ಅತ್ತ ಗೋಧಿ ರೊಟ್ಟಿ ಎತ್ತಿ ಮೇಲಕ್ಕಂಡೋ
ಹತ್ತು ವರುಷ ಬಸವ ತಿರುಗೀದಾ ::೫::

ಹತ್ತು ವರುಷ ಬಸವ ತಿರುಗೀದಾ ಸಿಂಧಗೇರಿ
ಮಿತ್ರೆ ಪೋರಮ್ಮನ ಮಗಳಿಗೆ ::೬::

ಆರೇ ಗೋಧಿರೊಟ್ಟಿ ಹೋರಿ ಮ್ಯಾಲೇರಿ ಕೊಂಡು
ಆರು ವರುಷ ಬಸವ ತಿರುಗೀದಾ ::೭::

ಆರೇ ವರುಷ ಬಸವ ತಿರುಗೀದಾ ಸಿಂಧಗೇರಿ
ನಾರಿ ಪೋರಮ್ಮನ ಮಗಳಿಗೆ ::೮::

ಬಸವಣ್ಣ ಹುಟ್ಟಲಿ ನಿಜ ಪ್ಯಾಟಿ ಕಟ್ಟಲಿ
ರಸಬಾಳೆ ಕೊಬ್ಬು ಸಿಗಿಯಾಲೆ ::೯::

ನೀಲಮ್ಮ ಹುಟ್ಟಲಿ ನಿಜ ಪ್ಯಾಟಿ ಕಟ್ಟಲಿ
ನೀರಾಗಳ ಕೊಬ್ಬು ಸಿಗಿಯಾಲೆ ::೧೦::

ಹತ್ತ ಸುತ್ತಿನ ಕೋಟಿ ಬಿತ್ತಲಿ ಉಜ್ಜಳ ಪ್ಯಾಟಿ
ಉತ್ತುತ್ತಿ ಕೊಟ್ಟು ಕುರುಗೋಡು ::೧೧::

ಮೇಲೆ ಉಕ್ಕಿನ ಕೋಟಿ ಕುರುಗೋಡು ಬಜಾರದಾಗೇ
ಅಪ್ಪ ಬಸವನ ಮೆರವಣಿಗೆ ::೧೨::

ಆರುಸುತ್ತಿನ ಕೋಟಿ ವಾರೀಲಿ ಉಜ್ಜಳ ಪ್ಯಾಟಿ
ಯಾಲಕ್ಕಾ ಪ್ಯಾಟಿ ಕುರುಗೋಡೇ ::೧೩::

ಯಾಲಕ್ಕಾ ಪ್ಯಾಟಿ ಕುರುಗೋಡಿನ ಬಜಾರಾದಾಗ
ತಾಯಿ ನೀಲಮ್ಮನ ಮೆರವಣಿಗೆ ::೧೪::

(ಇಲ್ಲಿಂದ ಧಾಟ ಬೇರೆಯಾಗುತ್ತದೆ. ಪ್ರತಿ ದ್ವಿಪದಿಯ ಕೊನೆಗೆ 'ಅಂತಂದೇನಂದಿನ' ಎಂದು ರಾಗ ಎಳೆದು ಹಾಡಲಾಗುತ್ತದೆ)

ಕಟ್ಟೋರ ಮುನಿಯಾಗೆ ಕುಟ್ಟುತ್ತಿದ್ದಳು ನೀಲಾ
ಆಕಿ ಕುಟ್ಟೋ ಮುನಿಯಾಗಿ ::೧೫::

ಆಕಿ ಕುಟ್ಟೋ ವಯಸಾಕೆ
ಎಷ್ಟಂತಹೇಳಲಿ ::೧೬::

ಬೀಸೋರ ಮನಿಯಾಗೆ
ಬೀಸುತ್ತಿದ್ದಳೋ ನೀಲಾ ::೧೭::

ಬೀಸೋ ವಯಸಾಕೇ
ಎನಂತ ಹೇಳಲಿ ::೧೮::

ಭಿಕ್ಷಕ್ಕೆಬಂದ ಜಂಗಮಯ್ಯ
ಭಿಕ್ಷೆನೀಡಸಲಾಕ ::೧೯::

ನಮ್ಮ ಕಟ್ಟೋರಗೊಡವೆ
ನಿಮಗೇನಯ್ಯಾ ::೨೦::

ಧಾನ್ಯಕ್ಕೆ ಬಂದ ಜಂಗಮಯ್ಯ
ಧಾನ್ಯವ ನೀಡಿ ಸಿಕ್ಕ್ಯ ::೨೧::

ನಮ್ಮ ಬೀಸೋರಗೊಡವೆ
ನಿಮಗೇನಯ್ಯಾ ::೨೨::

ನಮ್ಮ ಬೆಳ್ಳಿ ಬಟ್ಟಲದಾಗೇ
ಒಳ್ಳೆಣ್ಣೆ ತಿಳಿದುಪ್ಪ ::೨೩

ನಲ್ಲಿ ನೀಲಮ್ಮಗೆ ತಲೆಗಚ್ಚುತಾಲೆ
ನಲ್ಲಿ ನೀಲಮ್ಮಗೆ ::೨೪::

ಕಂಚನ ಬಟ್ಟಲದಾನೇ
ಮಿಂಚೆಣ್ಣೆ ತಿಳಿತುಪ್ಪ ::೨೫::

ಕೆಂಚೆ ನೀಲಮ್ಮಗೆ
ತಲಿಗಚ್ಚುತಾಳೆ ::೨೬::

ಉಪ್ಪಾರ ಕ್ಯಾಗಾಳ ನೀರು
ಉಕ್ಕುತತೂರ ::೨೭::

ನಮ್ಮ ಹಾವೂರ್ಯಾಗಾಳ ನೀರು
ಹಾರೂತಾ ತೂರೂತಾ ::೨೮::

ನಮ್ಮ ಬಚ್ಚಲಕಾ ನೀರು
ನೀಲಮ್ಮ ಜಳಕಕ್ಕ ಬಂದಳಾ ::೨೯::

ನಮ್ಮ ಮಾಯಿಕಾರ ಜಂಗಮಯ್ಯ
ಭಿಕ್ಷಕ ಬಂದಾನ ::೩೦::

ಬಿಕ್ಷಾಕ ತರುಲಿಕ್ಕೆ
ಒಳಕ್ಕ ಹೋಗ್ಯಾಳ ::೩೧::

ಬಚ್ಚಲದಾಗ ನೀಲಾನ
ಎತ್ತಿಕೊಂಡಾನ ::೩೨::

ಮಾಯಿಕಾರ ಜಂಗಮಯ್ಯ
ಮಾಯವಾಗಿ ಹೋದ ::೩೩::

ಭಿಕ್ಷಾಅವ ತಗಂಡ
ಒರಿಯಾಕ ಬಂದಳ ::೩೪::

ಭಿಕ್ಷೆಕೆ ಬಂದ ಜಂಗಮಯ್ಯ
ಹಿಂದಕ ಹೋದನಯ್ಯ ::೩೫::

ಭಿಕ್ಷಾವ ತಗಂಡು
ಬಳಿಯಾಕೆ ಹೋದಳ ::೩೬::

ತಣ್ಣೀರ ತಗಂಡು
ಬಚ್ಚಲಾಕ ಬಂದಾಳ ::೩೭::

ಬಚ್ಚಲದಾಗ ನೋಡಿದರೆ
ಸುಳಿವಿಲ್ಲ ನೀಲಾ ::೩೯::

ಕುರುಬರ ಓಣಿ ಒಕ್ಕಲಿಗರ ಓಣಿ.
........................ ::೪೦::

ನಿಮ್ಮ ಓಣಿಗೆ ನಮ್ಮ
ನೀಲಬಂದಳೇನು
ನಮ್ಮ ಓಣಿಗೆ ನಿಮ್ಮ
ನೀಲ ಬಂದಿಲ್ಲ ::೪೧::
ಹೊಲಕೋದ ರಾಮಭೂಪ
ಮನಿಗೆ ಬಂದಾನ ::೪೨::

ಏನಮ್ಮ ತಾಯಿ
ಅಳುತ್ತ ಮಲಗಿದ್ದ ::೪೩::

ತಂಗಿ ನೀಲಮ್ಮ
ವಿತ್ತಳಲ ಹೋದಳಪ್ಪ ::೪೪::
ಮಗಳೇ ನೀಲಮ್ಮ
ಕಳೆದು ಹೋದಳು ::೪೫::

ಏಳಮ್ಮ ತಾಯಿ
ಹುಡುಕಲು ಹೋಗವಾ ::೪೬::

ಬಾವಿ ಹುಡುಕ್ಯಾರೆ
ಕೆರೆಯ ಹುಡುಕ್ಯಾರೆ ::೪೭::

ಕುರುಗೋಡು ಹಳ್ಳಾಕ
ನೀರಿಗೆ ಬಂದಾರ ::೪೮::

ಕುರುಗೋಡು
ಹಳ್ಳದಾಗ ಬಿದ್ದಾವ ಹೆಜ್ಜಿ ::೪೯::

ಕುರುಗೋಡು ಬಸವ
ಕೊಟ್ಟೂರ ಬಸವ ::೫೦::

ವಜ್ರ ಬಂಡಿ ಬಸವ
ವಾದಿ ಆಡ್ಯಾರ ::೫೧::

ಕುರುಗೋಡು ಬಸವ
ಗೆದ್ದು ಓಯ್ದಾನ ::೫೨::

ಕುರುಗೋಡು ಬಸವ
ಕೊಟ್ಟೂರ ಬಸವ ::೫೩::

ನನ್ನ ಮಗಳಾನ ತೋರಯ್ಯಾ
.......................... ::೫೪::

ನಿನ್ನ ಮಗಳೇ ನೀಲಾನ
ನಾನೇನ ಬಲ್ಲೇನ ::೫೫::

ನನ್ನ ಚಕ್ರ ಕೋಡೇಲಿ
ನಿನ್ನ ಪಕ್ಕೇಲಿ ಇರಿವೇನೂ ::೫೬::

ನನ್ನ ಬೆಳ್ಳಿ ಕೋಡೇಲಿ
ನಿನ್ನ ಸೆಳೆದು ಬಿಟ್ಟೇನಾ ::೫೭::

ಬೆಳ್ಳಿ ಕೋಡಿಲೆ ನನ್ನ
ಸೆಳೆದು ಬಿಡಯ್ಯಾ ::೫೮::

ನಿನ್ನ ಮಗಳೇ
ನೀಲಾ ನಾನೇನು ಬಲ್ಲೇನು ::೫೯::

ನಿನ್ನ ಗಚ್ಚಿನ ಗೋಪುರಕ್ಕೆ
ಕಿಚ್ಚು ಉಗ್ಗಲಿ ::೬೦::

ಗುಡಿಯ ಗೋಪುರಕ್ಕೆ
ಕೆಂಡ ಹರವಲಿ ::೬೧::

ಅಳತಾ ಪೋರಮ್ಮಾ
ಶಾಪಾನಾ ಕೊಟ್ಟಳೋ ::೬೨::

(ಇಲ್ಲಿಂದ ಪದದ ಕೊನೆಯಲ್ಲಿ ಸೋಬಾನೆ ಎಂದು ಹಾಡಲಾಗುತ್ತದೆ)

ಸೀರೆ ಬಿಡಂದ ನಾಣ್ಯವ ಉಡಂದ
ಬೆರಳೇಲಿ ವಿಭೂತ್ತಿ ಧರಿಸೇ ಹೆಣ್ಣು ::೧೩::

ಬೆರಳೇಲಿ ವಿಭೂತ್ತಿ ಧರಿಸಲೆಂಗೆ
ತೋಳಿಗೆ ಬಂಗಾರ ಇಡು ::೧೪::

ಸೀರೆ ಬಿಡೋದಿಲ್ಲ ನಾಣ್ಯ ಉಡೋದಿಲ್ಲ
ಬೆರಳೇಲಿ ವಿಭೂತ್ತಿ ಧರಸೋದಿಲ್ಲ ::೧೫::

ಬೆರಳೇಲಿ ವಿಭೂತ್ತಿ ಧರಸೋ ನಾನಲ್ಲಿ
ತೋಳೀಗೆ ಬಂಗಾರ ಇಡೋವುದಿಲ್ಲ ::೧೬::

ಧಟ್ಟಿ ಬಿಡಂದ ಪಟ್ಟೇಲಿ ಉಡಂದ
ಬೊಟ್ಟೇಲಿ ವಿಭೂತ್ತಿ ಧರಿಸೆಂದೆ ::೧೭::

ಬೊಟ್ಟೇಲಿ ವಿಭೂತ್ತಿ ಧರಿಸೋಳುನಾನಲ್ಲಿ
ಪೆಟ್ಟೀಗೆ ಬಂಗಾರ ಇಡು ಬಾರೆಂದ ::೧೮::

ಧಟ್ಟಿ ಬಿಡುವುದಿಲ್ಲ ಪಟ್ಟೇ ಉಡುವುದಿಲ್ಲ
ಬೊಟ್ಟೇಲಿ ವಿಭೂತ್ತಿ ::೧೯::

ಬೊಟ್ಟೇಲಿ ವಿಭೂತ್ತಿ ಇಡೋದಿಲ್ಲ
ಬೊಟ್ಟೀಗೆ ಬಂಗಾರ ಇಡೋದಿಲ್ಲ ::೨೦::

ಹೆತ್ತಮ್ಮ ಎಲ್ಲೋ ಸುತ್ತಲ ಬಳಗೆಲ್ಲ
ಮಿತ್ರೆ ಕರಕಂಡು ಬರುವುದೆಲ್ಲೋ ::೨೧::

ತಾಯಮ್ಮ ಎಲ್ಲೋ ದೋಲ ಬಳಗ ಎಲ್ಲೋ
ನಾರೇ ನನ್ನ ಕರಕಂಡು ಬರುವುದೆಲ್ಲೋ ::೨೨::

ಹತ್ತಮಂದ್ಯಾಗೆ ಅತ್ತಲಿ ನೂಲ್ಯಾಡುತ್ತಿದ್ದೆ
ಹುಚ್ಚೆಬ್ಬಿಸಿಕರ ತಂದೆ ::೨೩::

ಆರು ಮಂದೀಗ ಆಡೂತಾಕುಂತಿದ್ದೆ
ಗಾಳೆಬ್ಬಿಸಿ ನನ್ನ ಕರತಂದೆ ::೨೪::

(ಇಲ್ಲಿಂದ ಪುನಃ ಎರಡನೇ ಧಾಟಿಯಲ್ಲಿ ಪದ್ಯಗಳು. ಹಾಡಲ್ಪಡುತ್ತವೆ)

ಅಲ್ಲೇ ಗಚ್ಚಿನ ಗುಡಿ
ಕಾಣುವುದೇ ನಮ್ಮಪ್ಪನ ಮನೆ ::೨೫::

ಅಲ್ಲೇ ಸುಣ್ಣದ ಗುಡಿ
ಕಾಣುವುದೇ ನಮ್ಮಮ್ಮನ ಮನೆ ::೭೬::

ಅಲ್ಲಿ ನಮ್ಮಮ್ಮಗ ಮೂರು
ಮಾತು ಹೇಳಿ ಬರುತೇನಾ ::೭೭::

ನೀನು ಜಂಗಮ್ಮಯ್ಯನಾಗ
ಹೊರಗೆ ಇರುವಯ್ಯೋ ::೭೮::

ನೀನು ತಳಿವಾರ ನಾನೇ
ಹೊರಗೆ ಇರಯ್ಯಾ ::೭೯::

ನಾನು ನಮ್ಮಮ್ಮಗೆ ಮೂರು
ಮಾತು ಹೇಳಿ ಬರುತೇನೋ ::೮೦::

ಅಮ್ಮ ಏಳಮ್ಮ ತಾಯೇ
ನಾ ಬಂದೇನೆ ::೮೧::

ಅಮ್ಮ ಹೋದಂತ ನೀಲಾ
ಎಂಗ ಬರತಾಳೋ ನೀನು ::೮೨::

ಅಮ್ಮ ಏಳಮ್ಮ ತಾಯಿ
ತಂಗಿ ಬಂದಾಳೋ ಏಳು ::೮೩::

ಅಪ್ಪ ಹೋದಂತ ತಂಗಿ
ಎಂಗ ಬರುತಾಳೋ ನೀನು ::೮೪::

ಅಮ್ಮ ಏಳಮ್ಮ ತಾಯೇ
ನಾ ಬಂದೇನಿ ತಾಯಿ ::೮೫::

ಅಮ್ಮ ಇತ್ತತ್ತ ಬಾರೇ ನಿನ್ನ
ಮೂರೇ ನೋಡೇನಿ ::೮೬::

ನನ್ನ ಮೂರೇ ನೋಡಿದರೆ
ನೀನು ಉರಿದು ಹೋಗ್ತಿ ::೮೭::

ಅಮ್ಮ ಇತ್ತತ್ತ ಬಾರೇ
ನಿನ್ನ ಜಡಿ ಆಕೇನೂ ::೮೮::

ನನ್ನ ಜಡಿಯಾಕಿದರೆ
ನಿನ್ನ ಹಸ್ತ ಹೋದಾವೆ ::೮೯::

ಅಮ್ಮ ಇತ್ತತ್ತ ಬಾರೇ
ನಿನ್ನ ಧಟ್ಟೆ ಉಡುಸೇನಾ ::೯೦::

ನನಗೆ ಧಟ್ಟೆ ಉಡಿಸಿದರೇ
ನಿನ್ನ ಬೊಟ್ಟೇ ಹೋದಾವೆ ::೯೧::

ನಿನ್ನ ಎಕ್ಷ್ವತ್ತೋ ಹೆಣ್ಣಿ
ತಡವ ಮಾಡೋದೇ ::೯೨::

ನಿನ್ನ ಎಕ್ಷ್ವತ್ತೋ ಹೆಣ್ಣಿ
ಆಮಕಳೆ (= ನಿಧಾನ) ಮಾಡೋದೇ ::೯೩::

ಆಕೆ ಹಂಗಂಭೂ ನೀಲಮ್ಮ
ಹಿಂದಾಕ ತಿರುಗ್ಯಾಳೋ ::೯೪::

ಅಮ್ಮ ಬಂದಂತ ನೀಲಮ್ಮನ
ಎತ್ತಿ ಕೊಂಡಾಳೇ ::೯೫::

ಮಾಯ್ಕಾರ ಜಂಗಮಯ್ಯ
ಮಾಯಾವಾಗಿ ಹೋದ ::೯೬::

(ಇಲ್ಲಿಂದ ಮತ್ತೆ ಸೋಬಾನೇ ಧಾಟಿಯಲ್ಲಿ ಪ್ರಾರಂಭವಾಗುತ್ತದೆ)

ಅತ್ತೀಮರದಡಿಯಲಿ ಮಿತ್ತೇನಾ ಇಳಿವೀದಾ
ಎತ್ತಾಗೇ ನಿಂತ ಎರುರಾಗೇ ::೯೭::

ಎತ್ತಾಗೇ ನಿಂತ ಎದುರಿಗೆ ಎಲೆ ಹೆಣ್ಣೆ
ಅತ್ತ ಬಾ ಕಂದ ಬಲಭುಜದ ಎಲೆ ಹೆಣ್ಣೀ ::೯೮::

ಅತ್ತ ಬಾರೆಂದ ಬಲಭುಜದ ಅಕ್ಕನಾಗ
ಇಕ್ಕಿದಾ ಬುದ್ಧ್ಯಾಗ ಇರುಷ್ಯನೋ ::೯೯::

ಆಲದ ಮರದಡೀಲಿ ನಾರೀನ ಇಳುವಿದಾ
ಹೋರ್ಗ್ಯಾಗಿ ನಿಂತ ಎದುರೀಗೆ ::೧೦೦::

ಹೋರ್ಗ್ಯಾಗಿ ನಿಂತ ಎದುರೀಗೆ ಎಲೆಹೆಣ್ಣೇ
ಏರೇ ಬಾರೆಂದ ಬಲಭುಜವ ::೧೦೧::

ನಾಣ್ಯದ ಸೀರೆ ಪಾದ ಮುಚ್ಚಿಟ್ಟು ಕೊಂಡು
ಓಗೆ ಚಿಗಮ್ಮಗೆ ಶರಣೆಂದ ::೧೦೨::

ನಾರೀನ ತರಲಕ್ಕ ನಾರೇರು ಇದ್ದೀಲ್ಲೇನು
ನರಕಲೇಗೆ ನಾರೀನ ತರುವರೇನು ::೧೦೩::

ಜೋಳಿಗ್ಯಕ್ಕಂಡೂ ಧಾನ್ಯಕ್ಕೆ ಹೋಗಿದ್ದೆ
ಮೆಚ್ಚಿ ಬಂದಳಕ್ಕು ಚೆಲುವಿಗೆ ::೧೦೪::

ಆಸೆವಂತಳಾದೆ ಎಷ್ಟಕೆ ಬಲ್ಲಿದಳಾದೆ
ನೀನೆ ನಂಬಸವಗೆ ತೆರವಾದೇ ::೧೦೫::

ನೀನೆ ನಂಬಸವಂಗೆ ತೆರವಾದೇ ಕುರುಗೋಡೋ
ನೂರೆಂಟು ಗಣಂಗಳಿಗೆ ವರವು ಕೋರೋ ::೧೦೬::

ಪಟ್ಟೇದ ಸೀರೆ ಬೊಟ್ಟೀಲಿ ಮುಚ್ಚಿಟ್ಟುಕೊಂಡೇ
ಮತ್ತೇಗೆ ನಿಮ್ಮಕ್ಕಗೆ ಶರಣಾದೆ ::೧೦೭::

ಪಟ್ಟೇದ ಸೀರೆ ಬೊಟ್ಟೀಲಿ ಮುಚ್ಚಿಟ್ಟುಕೊಂಡೇ
ನಮ್ಮಕ್ಕಗೇ ಶರಣಂದೆ ::೧೦೮::

ಮಿತ್ರೇನ ತಂದೆ ತಿಪ್ಪೇಗಸಳ ಬೇಕಯ್ಯಾ
ರೊಚ್ಚುಟ್ಟುವೇನಯ್ಯಾ ಮನದಾಗೆ ::೧೦೯::

ನಾರೀನ ತಂದೆ ವಾರೀಗೆಳಸಲ ಬೇಕ
ಗ್ಯಾನಾಟ್ಯಾವೇನಯ್ಯಾ ಮನುದಾಗ ::೧೧೦::

ಜೋಳಗ್ಯಾಕ್ಕೋಂಡೇ ಧ್ಯಾನಕ್ಕೋಗಿದ್ದೆ
ಮೆಚ್ಚಿ ಬಂದಳೆಣ್ಣು ಚೆಲುವೀಕೆ ::೧೧೧::

ಆಸೆವಂತಳಾದೆ ಬಟ್ಟೀಗೆ ಬಲ್ಲೀವಳಾದೆ
ನೀನೇ ನಂಬಸವಾಗೆ ತರವಾದೆ ::೧೧೨::

ನೀನೇ ನಂಬಸವಾಗೆ ತರವಾದೆ
ನರಕಲಿಯೊಳಗೆ ಹೀರ್‍ಯಾಡಿ ವರವ ಕೊಡುವೋದು ::೧೧೩::

ದಂಡು ಬರುತ್ತಾತಂದೆ ಕುರುಗೋಡು
ದಂಡಿನ್ಯಾಗೆ ನೀಲಮ್ಮ ಬರುತ್ತಾಳೆ ::೧೧೪::

ದಂಡಿನ್ಯಾಗೆ ನೀಲಮ್ಮ ಬರುತ್ತಾಳೆ ಪೂಜೇರಿ
ಕಂಡುಗದ ಕಡ್ಲೆ ಪನಿವಾರ (=ಹಂಚೋದು) ::೧೧೫::

ಮಂದಿಬರುತ್ತಾತಂದೆ ಅಂಜದಿರು ಕುರುಗೋಡು
ಮಂದೀಗೆ ನೀಲಮ್ಮ ಬರುತ್ತಾಳೆ ::೧೧೬::

ಮಂದೀಗೆ ನೀಲಮ್ಮ ಬರುತ್ತಾಳೆ ಪೂಜೇರಿ
ನಾಗಾಳಾದ ಕಡಲೆ ಪನಿವಾರೇ ::೧೧೭::

ಮಿಂಚಿನ ಪಾದಕ್ಕೆ ಕಂಚಿನ ಹಾವಳಿಗೆ
ಅಂತರಲೀ ಪವಳಿ ಹೋಗುವಾಗೇ ::೧೧೮::

ಅಂತರಗೆ ಪವಳಿಗೆ ಹೋಗುವಾಗ ಬಳ್ಳಾರಿ ದೊರೆ
ಮಂಚಕಲವಾರೇ ದೊರಗಳ ::೧೧೯::

ತೆಳ್ಳಾವ ಪಾದಕ್ಕೆ ಬೆಳ್ಳಿ ಹಾವಳಿಗೆ
ಮೆಲ್ಲಕ ಪವಳಿ ಹೋಗುವಾಗ ::೧೨೦::

ಬೆಲ್ಲಕ ಪವಳಿಗೆ ಹೋಗುವಾಗ
ಬಳ್ಳಾರಿ ಪಲ್ಲಕಿ ಕಳವ್ಯಾರೋ ::೧೨೧::

ಮಂಗಳಾರತಿ ಪದ

ಕರ್ಪೂರದಾರತಿ ಕರದೊಳಗಿಡಕೊಂಡು
ದೇವಿಗೆ ಬೆಳಗಾನು ಬಾ
ಆ ನಮ್ಮ ತಾಯಿಗೆ ಬೆಳಗನು ಬಾ :ಪ:

ನೆನಯಕ್ಕಿ ನೆಲಗಡಲೆ ಗೊನಿಯಾ ಬಾಳೆಯಹಣ್ಣು
ಹುಡಿಯನು ತುಂಬನು ಬಾ
ನಮ್ಮತಾಯಿಗೆ ಬೆಳಗನು ಬಾ :೧:

ಹಣೆಗೆ ಕುಂಕುಮ ದರಿಸಿ ಸುಲಿಯೋ ತೆಂಗಿನಕಾಯಿ
ನಮ್ಮದೇವಿಗೆ ಒಡಸಾನ ಬಾ
ನಮ್ಮತಾಯಿಗೆ ಬೆಳಹನು ಬಾ :೨:

ವಸುದೆಯೊಳಗೆ ನಮ್ಮ ಚೌಕಿಯ ನೀಲಮ್ಮ
ಆ ನಮ್ಮ ತಾಯಿಗೆ ಬೆಳಗನು ಬಾ
ದೇವಿಗೆ ಬೆಳಗನು ಬಾ :೩:

**೭.ಪರಾಮರ್ಶನ ಗ್ರಂಥ:**


ಅನ್ನಪೂರ್ಣ ಎಂ ಜಾಲವಾದಿ, *ಶಂಕರದಾಸಿಮಯ್ಯ ಪುರಾಣ: ಒಂದು ಅಧ್ಯಯನ,* (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ:೧೯೯೯).

ಒಡೆಯರ್ ಡಿ ಹೆಗ್ಗಡೆ, *ಹಾಲುಮತ ಅಧ್ಯಯನಗಳು* (ಕಲಾ ಪ್ರಕಾಶನ, ರಾಜ್‌ಮಹಲ್ ಗುಟ್ಟಳ್ಳಿ, ಬೆಂಗಳೂರು:೨೦೧೧).

ಕಪಟರಾಳ ಕೃಷ್ಣರಾಯರು ಶ್ರೀ, *ಕರ್ನಾಟಕದ ಲಾಕುಳಶೈವರ ಇತಿಹಾಸ,* (ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ:೧೯೫೫).

ಕನ್ನಡ ಅಧ್ಯಯನ ಸಂಸ್ಥೆ, *ಕನ್ನಡ ವಿಶ್ವಕೋಶ* (ಮೈಸೂರು ವಿಶ್ವವಿದ್ಯಾನಿಲಯ, ಸಂಪುಟ–೬:೧೯೭೩).

ಕಲಬುರ್ಗಿ ಎಂ ಎಂ, *ಸಿದ್ಧಮಂಕ ಚರಿತೆ* (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ–ಗದಗ:೨೦೦೪).

ಕಲಬುರ್ಗಿ ಎಂ ಎಂ, *ಮಾರ್ಗ ಸಂಪುಟ–೫*(ಸ್ವಪ್ನ ಬುಕ್ ಹೌಸ್, ಬೆಂಗಳೂರು:೨೦೧೦).

ಕಲಬುರ್ಗಿ ಎಂ ಎಂ, *ಮಾರ್ಗ ಸಂಪುಟ–೩*(ಸ್ವಪ್ನ ಬುಕ್ ಹೌಸ್, ಬೆಂಗಳೂರು:೧೯೯೮).

ಕೆಳದಿ ವೆಂಕಟೇಶ ಜೋಯಿಸ, *ಕೆಳದಿ ಅರಸರ ಶಾಸನ ಸಂಪುಟ* (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ–ಗದಗ: ೧೯೯೧).

ಕೊಸಾಂಬಿ ಡಿ ಡಿ, *ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ,* ಟಿ ಎಸ್ ವೇಣುಗೋಪಾಲ್ ಮತ್ತು ಶೈಲಜಾ:೨೦೧೧).

ಗುರುಮೂರ್ತಿ ಕೆ ಜಿ, *ಲಿಂಗಾಯತ ಧಾರ್ಮಿಕ ಸಂಪ್ರದಾಯ ಮತ್ತು ಸಾಂಸ್ಕೃತೀಕರಣ* (ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು:೨೦೦೯).

ಗುರುಮೂರ್ತಿ ಕೆ ಜಿ, *ಜಾನಪದ ಸಮಾಜ ಮತ್ತು ಸಂಸ್ಕೃತಿ* (ಕಾರ್ತಿಕ ಎಂಟರ್ ಪ್ರೈಸರ್ಸ್, ವಿಜಯನಗರ, ಬೆಂಗಳೂರು:೨೦೧೨).

ಗೋಪಾಲ ರಾವ್ ಎಚ್ ಎಸ್ (ಪ್ರಜಾವಾಣಿ ದಿನ ಪತ್ರಿಕೆ, ದಿನಾಂಕ:೨೯/೯/೨೦೧೩)

ಚಂದ್ರಶೇಖರ ಶಿವಾಚಾರ್ಯಮಹಾಸ್ವಾಮಿಗಳು, *ಸಿದ್ಧಾಂತ ಶಿಖಾಮಣಿ* (ಶೈವಭಾರತೀ ಶೋಧ ಪ್ರತಿಷ್ಠಾನಮ್, ಜಂಗಮವಾಡಿಮಠ, ವಾರಾಣಸಿ:೨೦೧೫).

ಚಂದ್ರಶೇಖರ್ ಟಿ ಆರ್(ಅನುವಾದ), *ಅನುಭಾವಿಗಳ ಕ್ರಾಂತಿ,* ಜಾನ್‌ಪೀಟರ್ ಶೌಟನ್(ಮೂಲ), (ವೀರಶೈವ ಅಧ್ಯಯನ ಸಂಸ್ಥೆ, ಗದಗ:೨೦೦೦)

ಚಂದ್ರಕಾಂತ ಬಿಜ್ಜರಗಿ, *ಕುರುಬರ ಹೆಜ್ಜೆಗಳು,* (ಶೈಲಚಂದ್ರ ಪ್ರಕಾಶನ, ವಿಜಾಪುರ:೨೦೦೬).

ಚಿದಾನಂದಮೂರ್ತಿ ಎಂ, *ಚಿದಾನಂದಾಯಣ – ಚಿದಾನಂದ ಸಮಗ್ರ ಸಂಪುಟ–೧೦,* ಬ್ರೈಟ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ೨೦೧೨).

ಜ ಚ ನಿ, *೧೨ನೇ ಶತಮಾನ ಪೂರ್ವಯುಗ*, ಸದಾನಂದ ಕನವಳ್ಳಿ, ಸಿ ಪಿ ಕೆರಿಮನಿ, ವೀರಶೈವ ಸಾಹಿತ್ಯ ಸಮೀಕ್ಷೆ, (ಕನ್ನಡ ಪುಸ್ತಕ ಪ್ರಾಧಿಕಾರ, ಅಶೋಕ ಎನ್ ಚಲವಾದಿ:೧೯೭೬).

ಜೋಶಿ ಶಂಬಾ, *ಎಡೆಗಳು ಹೇಳುವ ಕಂನಾಡ ಕಥೆ* (ಶಂಬಾ ವಿಚಾರ ವೇದಿಕೆ ಬೆಂಗಳೂರು: ೧೯೪೯).

ಜೋಶಿ ಶಂಬಾ, *ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ*, ಶಂಬಾ ಕೃತಿ ಸಂಪುಟ (ಕನ್ನಡ ಪುಸ್ತಕ ಪ್ರಾಧಕಾರ:೧೯೯೯).

ತಿಪ್ಪೇರುದ್ರಸ್ವಾಮಿ ಎಚ್, *ಕರ್ಣಾಟಕ ಸಂಸ್ಕೃತಿ ಸಮೀಕ್ಷೆ*(ಡಿ ವಿ ಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು:೨೦೧೦).

ನಲ್ಲೂರು ಪ್ರಸಾದ್, *ಗಂಗಧಿಕಾರ-ಒಕ್ಕಲಿಗರು* (ಅಪ್ರದೀನ ಪ್ರಕಾಶನ, ಬೆಂಗಳೂರು:೨೦೦೧).

ನಂಜಮ್ಮಣ್ಣಿ ಎಂ, *ಭಾರತೀಯ ಸಾಮಾಜಿಕ ಸಂಸ್ಥೆಗಳು*(ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ:೧೯೮೨).

ನಾರಾಯಣ ಪಿ ವಿ, *ವಚನಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ*,(ಶ್ರೀ ತೋಂಟದಾರ್ಯ ಮಠ,ಗದಗ-ಡಂಬಳ:೧೯೮೩)

ಪಂಪನ ಗೌಡ ಎಂ ಆರ್, *ಗೊಂಡ್ವಾನ ಸಂಸ್ಕೃತಿ*, (ಲಾಳಗೊಂಡೇಶ್ವರ ಎಜುಕೇಶನ್ ಟ್ರಸ್ಟ್ (ರಿ), ಶಾನವಾಸಪುರ:೨೦೧೩).

ಪರಶುರಾಮ್ ಎಫ್ ಗೋಡಿ, *ಚಲುಕ್ಯ ಮಾರ್ಗದರ್ಶಿ*, (ಸಾಗರ ಪ್ರಕಾಶನ, ಐಹೊಳೆ: ೨೦೦೬).

ಪರಶುರಾಮ್ ಎಫ್ ಗೋಡಿ, *ಐಹೊಳೆ ಶಾಸನಗಳು*, (ಸಾಗರ ಪ್ರಕಾಶನ,ಐಹೊಳೆ: ೨೦೧೫).

ಪ್ರಭಾಕರ್ ಎ ಎಸ್, *ಆದಿವಾಸಿ ಆಖ್ಯಾನ*, ಸಿದ್ಧಾರ್ಥ ಪ್ರಕಾಶನ, (ಹೊಸಪೇಟೆ ೨೦೦೮: ೪೨೪)

ಪ್ರಶಾಂತ್ ಹೆಚ್ ಡಿ, *ಕರ್ನಾಟಕ ರಾಜ್ಯ ಕೋಶ-೦೪, ಜನ ಸಮುದಾಯ ಸಂಪುಟ*, (ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ವಿದ್ಯಾರಣ್ಯ, ಹಂಪಿ, ಪ್ರೊ ಎ ವಿ ನಾವಡ, ನಿರ್ದೇಶಕರು: ೨೦೦೦).

ಬಸವಯ್ಯಶಾಸ್ತ್ರಿ ಹಿರೇಮಠ, *ಬಸವೇಶ್ವರ ಚರಿತಾಮೃತ*, (ವೀರಶೈವ ಭಕ್ತಿ ವಿಜಯ), (ಪಿ ಸಿ ಶಾಬಾದಿಮಠ, ಗದಗ).

ಬಸವಯ್ಯಶಾಸ್ತ್ರಿಗಳು ಹಿರೇಮಠ, *ಶ್ರೀ ಬಸವೇಶ್ವರ ಚರಿತಾಮೃತ* (ಪಿ ಸಿ ಶಾಬಾದಿಮಠ, ಗದಗ).

ಬಸವರಾಜ್ ಟಿ ತೂಲಹಳ್ಳಿ, *ಲೋಕಾಯುತ ಮತ್ತು ಶೈವ ಭಾಗ ೧*, (ನಿವೇದಿತ ಪ್ರಕಾಶನ, ಬನಶಂಕರಿ, ಬೆಂಗಳೂರು:೨೦೧೩).

ಬಿಜ್ಜರಿಗಿ ಚಂದ್ರಕಾಂತ, *ಕುರುಬರ ಹೆಜ್ಜೆಗಳು*, (ಶೈಲಚಂದ್ರ ಪ್ರಕಾಶನ, ವಿಜಾಪುರ: ೨೦೦೬).

ಭಾನುಮತಿ ವೈ ಸಿ, ಕಲಬುರ್ಗಿ ಎಂ ಎಂ (ಸಂ), *ಸಿದ್ಧಮಂಕ ಚರಿತ್ರೆ*, (ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ: ೨೦೦೪).

ಬೋನಾ ಬಸವರಾಜ್, *ಕುರುಬರ ಗೋತ್ರಗಳು ಹಾಗೂ ಬೆಡಗುಗಳು*, (ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ಹಾಲಕೆನೆ:೨೦೦೨).

ಮಲ್ಲೇಶಪುರಂ ಜಿ ವೆಂಕಟೇಶ್, *ಸಂಸ್ಕೃತಿ ಮತ್ತು ಶಂಬಾ* (ಸಾಹಿತ್ಯ ಭಂಡಾರ, ಬಳೆಪೇಟೆ:೧೯೯೩).

ಮಲ್ಲಪ್ಪ ವೀರಪ್ಪ ಹೋರಿ, *ಲಾಳಗೊಂಡರು*(ಲಾಕುಳಗೊಂಡರು), (ಕೊಪ್ಪಳ,ಅಪ್ರಕಟಿತ ಲೇಖನ).

ಮಾಳಿ ಎಚ್ ಬಿ, *ಸಮಾಜ ಅಧ್ಯಯನ*, (ಬಿ ಎನ್ ಹುದ್ದಾರ್, ಭಾರತ ಬುಕ್ ಡಿಪೋ ಮತ್ತು ಪ್ರಕಾಶನ, ಧಾರವಾಡ:೧೯೯೦).

ಮಾದೇಗೌಡ, *ಭಾರತೀಯ ಕುರುಬರ ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯ ಕಿರು ಪರಿಚಯ* (ಪಾವನ: ೨೦೧೨).

ಮೇತ್ರಿ ಕೆ ಎಂ ಮತ್ತು ಮೃತ್ಯುಂಜಯ ರುಮಾಲೆ, *ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ* ಅಧ್ಯಯನ (ಗುರು ಕಂಪ್ಯೂಟರ್ಸ್ ಕಾಳಮ್ಮ ಬೀದಿ, ಬಳ್ಳಾರಿ:೨೦೦೮).

ಮೇತ್ರಿ ಕೆ ಎಂ, *ಬೀದರ್ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯದ, ಒಂದು ಸಮಾಜಶಾಸ್ತ್ರೀಯ* ಅಧ್ಯಯನ(ಅ ಪ್ರಕಟಿತ ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾನಿಲಯ: ೧೯೯೪.

ಮೇತ್ರಿ ಕೆ ಎಂ(ಲೇ), *ಮಾಳಿಂಗರಾಯನ ಕಾವ್ಯ*, ಹಳ್ಳಿಕೇರಿ ಎಫ್ ಟಿ(ಸಂ), *ಹಾಲುಮತ ಅಧ್ಯಯನ* (ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ವಿದ್ಯಾರಣ್ಯ ಹಂಪಿ, ಮಂಜುನಾಥ. ಬೇವಿನ ಕಟ್ಟಿ: ೨೦೧೦).

ಮೇತ್ರಿ ಕೆ ಎಂ, *ಹಾಲುಮತದ ಬುಡಕಟ್ಟುಗಳ ಪರಿಚಯ*, ಮುತ್ತು ಬಂದಿದೆ ಕೇರಿಗೆ, ಸ್ಮರಣ ಸಂಚಿಕೆ (ಕಾಗಿನೆಲೆ ಮಹಾ ಸಂಸ್ಥಾನ ಶ್ರೀ ಕನಕ ಗುರು ಪೀಠ: ೨೦೦೩).

ಮೋತಿರಾಮ್ ಕಂಗಾಲಿ, *ಪಾರಿ ಕುಪಾರ ಲಿಂಗೋ ಕೊಯಾ ಗೊಂಡಿ ಪುನೇಮ ಧರ್ಮ ದರ್ಶನ* (ಹಿಂದಿ), (ಚಂದ್ರಲೇಖ ಕಂಗಾಲಿ ಪ್ರಕಾಶನ, ನಾಗಪುರ: ೧೯೮೯).

ರವೀಂದ್ರನಾಥ ಕೆ, *ಕನ್ನಡ ಟೀಕಾ ಸಾಹಿತ್ಯ*, (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೬)

ರವೀಂದ್ರನಾಥ. ಕೆ, *ಜೈನ ಟೀಕಾಸಾಹಿತ್ಯ*, (ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ವಿದ್ಯಾರಣ್ಯ ಹಂಪಿ, ಮಂಜುನಾಥ ಬೇವಿನಕಟ್ಟಿ: ೨೦೧೦).

ಲಲಿತಾಂಬ ಎನ್ ಆರ್, *ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ* (ಕೆ ಎಸ್‌ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ, ಹಂಪಿ ನಗರ, ಬೆಂಗಳೂರು: ೨೦೧೧).

ವೀರಭದ್ರಗೌಡ ಜಿ(ಲೇ), ಲಾಳಗೊಂಡ ಲಿಂಗಾಯತರು, ಕಲಬುರ್ಗಿ ಎಂ ಎಂ(ಸಂ), ಲಿಂಗಾಯತ, ಉಪಪಂಗಡಗಳ ದಾಖಲೀಕರಣ, (ಎಂ ಎಸ್ ವಿ. ಏಜ್ಯುಕೇಶನ್ ಸೊಸೈಟಿ, ಎಂ ಎಸ್ ವಾಲಿ, ಇಳಕಲ್: ೨೦೦೯).

ವೆಂಕಟೇಶ್ ಎಚ್ ಎಲ್, *ಭಾರತೀಯ ಸಮಾಜ* (ದೂರಶಿಕ್ಷಣ ನಿರ್ದೇಶನಾಲಯ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ: ೨೦೧೦).

ಶಂಬಾ ಜೋಶಿ, *ಶಂಬಾ ಕೃತಿ ಸಂಪುಟ ೦೧ ಹಾಲುಮತ ದರ್ಶನ* (ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ೧೯೯೯).

ಶಂಕರಪ್ಪ ಎಂ ಪಿ(ಲೇ), *ಮಠಗಳು ಹಾಗೂ ಆಧುನೀಕರಣ*, ಮಹೇಶ್ ತಿಪ್ಪೇಶೆಟ್ಟಿ (ಸಂ), *ಬಸವತತ್ವ ಸಾಮಾಜಿಕ ಬದಲಾವಣೆ*, (ಪ್ರಸಾರಾಂಗ, ಕನ್ನಡ ವಿಶ್ವವಿಧ್ಯಾಲಯ,ಹಂಪಿ, ವಿದ್ಯಾರಣ್ಯ: ೨೦೦೩).

ಶಂಕರನಾರಾಯಣ ಭಟ್ ಕೆ ಎದುರ್ಕುಳ, *ಹಿಂದೂ ಧರ್ಮದ ಪರಿಚಯ*, (ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ:೧೯೯೫)

ಶಂಕರ್‌ರಾವ್ ಚ ನ, *ಭಾರತೀಯ ಸಮಾಜ*, (ಜೈಭಾರತ್ ಪ್ರಕಾಶನ, ಮಂಗಳೂರು: ೨೦೧೨).

ಶಾಂತವೀರಯ್ಯ ಹಿ ಚಿ, *ಪುಷ್ಪಗಿರಿ ಒಂದು ಅಧ್ಯಯನ*, (ಪುಷ್ಪಗಿರಿ ಮಹಾಸಂಸ್ಥಾನ, ಹಳೇ ಬೀಡು, ಬೇಲೂರು ತಾ, ಹಾಸನ ಕರ್ನಾಟಕ:೨೦೦೬).

ಶಿವರಾಮ ಕಾರಂತ, *ಸಿರಿಗನ್ನಡ ಅರ್ಥಕೋಶ*, (ಎಸ್ ಬಿ ಎಸ್ ಪಬ್ಲಿಷರ್ಸ್, ಬೆಂಗಳೂರು: ೧೯೯೦)

ಶಿವಸ್ವಾಮಿ, *ಕುರುಬಜನಾಂಗ-ಐತಿಹಾಸಿಕ ಸಂಕ್ಷಿಪ್ತ ಅಧ್ಯಯನ* (ಪವಿತ್ರ ಮುದ್ರಣ ಅಜ್ಜಂಪುರ: ೨೦೦೭).

ಸದಾಶಿವಯೋಗಿ ಶ್ರೀ, *ಕಾಯಕಯೋಗಿ ಸಿದ್ಧಾರಾಮ ಜಯಂತಿಗೆ ವಿಷೇಶ ಲೇಖನ*(ಶ್ರೀ ಗುರುಸಿದ್ಧರಾಮೇಶ್ವರ ೮೩೩ ನೇ ಜಯಂತಿಯ ಸ್ಮರಣ ಸಂಚಿಕೆ, ನಂದಿಗುಡಿ:೨೦೦೬).

ಸಂಗೇವಾಡಿಮಠದ ವೀರಯ್ಯ, (೮೫ ವರ್ಷ), ಎಲೆಬೇತೂರು ಗ್ರಾಮ, ದಾವಣಗೆರೆ ತಾಲ್ಲೂಕು, ದಾವಣಗೆರೆ ಜಿಲ್ಲೆ.

ಸದಾಶಿವಪ್ಪ ಕುಂ ಬಾ, ನೊಣಬರು, ಎಫ್ ಟಿ ಹಳ್ಳಿಕೇರಿ, ಹಾಲುಮತ ವ್ಯಾಸಂಗ ಸಂಪುಟ-೨ (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ: ೨೦೧೦).

ಸಿದ್ಧಣ್ಣ ಬಿ. ಉತ್ನಾಳ್, ಕುಡುಒಕ್ಕಲಿಗರು, (ಅನುಪಮ ಪ್ರಕಾಶನ ಅಥಣಿ: ೨೦೦೯).

ಸಿದ್ಧಯ್ಯ ಮಠದ, *ವೀರಶೈವ-ಕಾಶ್ಮೀರಿ ಶೈವ-ಒಂದು ತೌಲನಿಕ ಅಧ್ಯಯನ* (ಮರುಳ ಸಿದ್ಧೇಶ್ವರ ವೀರಶೈವ ಅಧ್ಯಯನ ಕೇಂದ್ರ, ಕವಲೇ ದುರ್ಗ, ಶಿವಮೊಗ್ಗ:೨೦೧೧)

ಸಿದ್ಧರಾಮಶಾಸ್ತ್ರಿಗಳು, ಶ್ರೀ ನಾಳಗೊಂಡೇಶ್ವರ ಪುರಾಣ ಕಾವ್ಯಂ, (ಪ್ರ. ಶ್ರೀ ದೊಡ್ಡಬಸಪ್ಪ ಅಪ್ಪಾ, ಕಲಬುರ್ಗಿ, ಶ್ರಿ ಶಿಖರ ಮಠ, ರಾಯಚೂರು: ೧೯೫೫)

ಸಿದ್ಧೇಶ್ವರಸ್ವಾಮಿಗಳು, ಶ್ರೀ ಸಿದ್ಧರಾಮೇಶ್ವರ ವಚನ-ಪ್ರವಚನ,(ವಿಶ್ವದ ಉತ್ಪತ್ತಿ),(ಜ್ಞಾನ ಯೋಗ ಫೌಂಡೇಶನ್,ವಿಜಾಪುರ).

ಸೂಗಯ್ಯ ಹಿರೇಮಠ, *ರಂಜೇರಿನ ಸಿಂಧರು*, (ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗ: ೧೯೯೬).

ಹನುಮಂತಯ್ಯ ವಿ ಆರ್, *ಭಾರತ ದೇಶದ ಕುರುಬರ ಚರಿತ್ರೆ* (ಪ್ರತಿಭೆ ಪ್ರಕಾಶನ ಮೈಸೂರು: ೧೯೯೬).

ಹಾಸನ ಜಿ, *ಶ್ರೀ ಗುರುಸಿದ್ಧರಾಮೇಶ್ವರ ೮೩೩ ನೇ ಜಯಂತಿಯ ಸ್ಮರಣ ಸಂಚಿಕೆ*, (ನಂದಿಗುಡಿ: ೨೦೦೬).

ಹಿರೇ ಮಲ್ಲೂರು ಈಶ್ವರನ್, *ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು: ಮಠಗಳ ಒಂದು ತೌಲನಿಕ ಅಧ್ಯಯನ, ಭಾಗ೩* (ಬೆಂಗಳೂರು: ೧೯೯೭).

ಹಿರೇಮಲ್ಲೂರು ಈಶ್ವರನ್, *ಲಿಂಗಾಯುತ ಧರ್ಮ: ಒಂದು ಅಧ್ಯಯನ-ಭಾಗ ೧,* (ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು: ೧೯೯೭).

ಹಿರೇಮಲ್ಲೂರು ಈಶ್ವರನ್, *ಬಸವಣ್ಣ ಹಾಗೂ ಲಿಂಗಾಯುತ ಧರ್ಮ-ಭಾಗ ೨* (ಸ್ನೇಹಾ ಪ್ರಕಾಶನ, ಬೆಂಗಳೂರು: ೧೯೯೭).

ಹಿರೇಮಲ್ಲೂರು ಈಶ್ವರನ್,*ಲಿಂಗಾಯುತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು:ಮಠಗಳ ಒಂದು ತೌಲನಿಕ ಅಧ್ಯಯನ- ಭಾಗ ೩*(ಸ್ನೇಹಾ ಪ್ರಕಾಶನ , ಬೆಂಗಳೂರು:೧೯೯೭).

ಹಿರೇಮಠ ಸಿ ಜಿ ಬಿ, *ಪವಿತ್ರಕೂಡಲಸಂಗಮಕ್ಷೇತ್ರ,* (ಪಾರು ಪ್ರಕಾಶನ ಗದಗ: ೨೦೧೦).

ಹೋರಿ ಎಂ ವಿ, *ಕುಡುಒಕ್ಕಲಸಿರಿ*(ತ್ಯಾಗವೀರ ಸಿರಸಂಗಿ ಲಿಂಗರಾಜ್ ಸೇವಾಸಂಸ್ಥೆ, ಮುಂಡರಗಿ:೨೦೧೦).

Buchanan Francis, Jurney from Madras Through the Contries of Mysore, Canara and Malabar–Vol-01(Asian Educational Services, New Delhi (rept):1998)

Buchan, Craig (November 7–10, 2004). Paper No. 207-8 - Linking Subduction Initiation, Accretionary Orogenesis And Supercontinent Assembly. 2004 Denver Annual Meeting. Geological Society of America. Retrieved 2010-01-18.

Chandrakantha Khandoj Wgge, History of Gonds, Metry K M, Forest Blossoms and the Concrete Jungle, (Subbanna rai.a, director, prasaranga, Kannada University Hampi, Vidyaranya: 2011).

Edger Thurston and Rangachari, The Cast and Tribes of Southern India", Vol no 4 (Governament Press,Madras:1909).

Eduard Suess, Das Antlitz der Erde (The Face of the Earth) Vol. 1 (Leipzig, Germany: G. Freytag, 1885)page 768. From p. 768: Wir nennen es Gondwana-Land, nach der gemeinsamen alten Gondwána- Flora… (We name it Gondwana-Land, after the common ancient flora of Gondwana …)

